ಶ್ರೀ

# ಗಾಯತ್ರೀ ತತ್ತ್ವಾರ್ಥ ದರ್ಶನ

ಸಚಿತ್ರ ವೈಜ್ಞಾನಿಕ ವಿವರಣೆ ಸಹಿತ

ಸಂಗ್ರಾಹಕರು

**ಸಿ. ಲಕ್ಷ್ಮೀನಾರಾಯಣನ್**

ಪ್ರಕಾಶಕರು

ಸಿ. ಲಕ್ಷ್ಮೀನಾರಾಯಣನ್

1404, 3ನೇ ಮುಖ್ಯ ರಸ್ತೆ, ಕೃಷ್ಣಮೂರ್ತಿಪುರಂ

**ಮೈಸೂರು–570 004**

*SRI GAYATREE TATVARTHA DARSHANA*
**with Scientific Explanation—Compiled, Edited and Published by C. Lakshminarayanan, 1404, III Main, Krishnamurthipuram, Mysore 570 004.**
**Revised & Enlarged Third Edition : 1999. pp. 280.**

ಮೊದಲನೆಯ ಮುದ್ರಣ : ೧೯೯೨
ಎರಡನೆಯ ಪರಿಷ್ಕೃತ ವಿಸ್ತೃತ ಮುದ್ರಣ : ೧೯೯೬
ಮೂರನೆಯ ಪರಿಷ್ಕೃತ ವಿಸ್ತೃತ ಮುದ್ರಣ : ೧೯೯೯



**ಬೆಲೆ : ಮುವತ್ತೈದು ರೂಪಾಯಿಗಳು**

ಮುದ್ರಕರು ಎ. ಜಿ. ಸುವ್ರತೀಂದ್ರ
ವಾಣೀ ಪ್ರೆಸ್ : ಚಾಮರಾಜಪುರಂ : ಮೈಸೂರು ೫ ☎ 444295

# ಮೊದಲ ಮಾತು

## ಮೊದಲನೆಯ ಮುದ್ರಣ

ದ್ವಿಜನಾದವನು ತನ್ನ ನಿತ್ಯ ನೈಮಿತ್ತಿಕಾದಿ ಎಲ್ಲಾ ಕರ್ಮಗಳಲ್ಲಿಯೂ ಗಾಯತ್ರೀ ಮಂತ್ರವನ್ನು ಅನೇಕ ವೇಳೆ ಉಪಯೋಗಿಸುತ್ತಾನೆ. ಈ ಮಂತ್ರವು ನಾಲ್ಕು ವೇದಗಳಲ್ಲಿಯೂ ಯಾವ ಬದಲಾವಣೆಯೂ ಇಲ್ಲದೆ ಒಂದೇ ರೀತಿಯಾಗಿ ಹೇಳಲಾಗುತ್ತಿದೆ. ಇದು ಬ್ರಾಹ್ಮಣ್ಯಕ್ಕೆ ಮೂಲಭೂತ ವಾದುದು. ಉಪನಯನ ಸಮಯದಲ್ಲಿ ವಟುವಿಗೆ ಮೊಟ್ಟಮೊದಲು ಉಪದೇಶಿಸುವ ಮಂತ್ರವೇ ಗಾಯತ್ರೀ ಮಂತ್ರ. ಗಾಯತ್ರಿಯ ಉಪದೇಶ ಆಗದವನಿಗೆ ವೇದಾಧ್ಯಯನ ಮಾಡುವ ಅಧಿಕಾರವಿಲ್ಲ. ಇದಕ್ಕೆ ಶೈವ ವೈಷ್ಣವರೆಂಬ ಭೇದವಿಲ್ಲ. ಇದರಷ್ಟು ಹೆಚ್ಚು ಬಳಕೆಯಲ್ಲಿರುವ, ಹೆಚ್ಚಾಗಿ ಉಪಯೋಗಿಸುವ ಮಂತ್ರ ಮತ್ತೊಂದಿಲ್ಲ. ಇದಕ್ಕೆ ಕಾರಣವೇನು? ಇದನ್ನೇ ಈ ಕೃತಿಯಲ್ಲಿ ವಿವರಿಸಲಾಗಿದೆ.

ಇಂದಿನ ಜನಾಂಗ ಪ್ರತಿಯೊಂದು ವಿಚಾರವನ್ನೂ ಸ್ವರೂಪ, ಕ್ರಿಯೆ, ಫಲಗಳನ್ನು ವೈಜ್ಞಾನಿಕಚಿಕಿತ್ಸೆಗೆ ಒಳಪಡಿಸಿ, ಅದರ ಉಪಯುಕ್ತತೆಯನ್ನು ಅರಿಯದೆ, ಅಂಧಾನುಕರಣೆಯಿಂದ ಆಚರಿಸುವುದು ವ್ಯರ್ಥವೆಂದು ಭಾವಿಸಿ ನಮ್ಮ ಧಾರ್ಮಿಕ ಆಚಾರ, ಸಂಪ್ರದಾಯಗಳಲ್ಲಿ ಶ್ರದ್ಧೆಯನ್ನು ಕಳೆದು ಕೊಂಡಿರುತ್ತಾರೆ. ಹೀಗಾಗಿ ನಮ್ಮ ಮಹರ್ಷಿಗಳು ಇಷ್ಟುಕಾಲ ನಮಗೆ ಉಳಿಸಿಕೊಟ್ಟಿರುವ ಎಷ್ಟೋ ಅನರ್ಘ್ಯ ರತ್ನಗಳು ಮಾಯವಾಗುತ್ತಿವೆ.

'ಗಾಯತ್ರೀ' ಎಂಬ ಪದವು ಮೂರು ವಿಧದಲ್ಲಿ ವ್ಯವಹರಿಸಲ್ಪಡುತ್ತದೆ. ೧. 'ಛಂದಸ್ಸು' ಎಂದು (ಉದಾ–ವಿಶ್ವಾಮಿತ್ರಸ್ಸವಿತಾಗಾಯತ್ರೀ), ೨. 'ಮಂತ್ರ' ಎಂದು (ಉದಾ–ಗಾಯತ್ರ್ಯಾಗಾಯತ್ರೀ ಛಂದಃ), ಮತ್ತು ೩. 'ದೇವತೆ' ಎಂದು (ಉದಾ–ಆಯಾತುವರದಾದೇವಿ....) ಈ ಕೃತಿಯಲ್ಲಿ ಈ ಮೂರರ ಬಗ್ಗೆ ವಿಮರ್ಶಿಸಿದ್ದರೂ ಸಹಾ 'ಗಾಯತ್ರೀ ಒಂದು ದೇವತಾ ಶಕ್ತಿ' ಎಂಬ ಬಗ್ಗೆಯೇ ವಿಷಯವು ಹೆಚ್ಚು ಕೇಂದ್ರೀಕೃತವಾಗಿರುವುದನ್ನು ವಾಚಕರು ಗಮನಿಸಬಹುದು.

ಶ್ರೀ ಗಾಯತ್ರೀ ಮಂತ್ರವು ಸಾಮಾನ್ಯವಾಗಿ ಕಂಡರೂ ಅದರಲ್ಲಿ ಅಡಗಿ ರುವ ಪಾರಮಾರ್ಥಿಕ ಹಾಗೂ ವೈಜ್ಞಾನಿಕ ಮಹತ್ತ್ವಗಳನ್ನು ತಿಳಿದರೆ

ಮಾತ್ರ ಅದರ ಉಪಯುಕ್ತತೆ ಹಾಗೂ ಅದನ್ನು ವಿಶೇಷವಾಗಿ ಬಳಸಲು ಕಾರಣವೇನೆಂಬುದು ಗೊತ್ತಾಗುವುದು. ಇದರ ಧಾರ್ಮಿಕ ವಿಚಾರದಲ್ಲಿ ಅನೇಕ ವಿದ್ವಾಂಸರು ದೊಡ್ಡದೊಡ್ಡ ಗ್ರಂಥಗಳನ್ನೇ ಬರೆದಿರುತ್ತಾರೆ. ಗಾಯತ್ರೀ ಮಂತ್ರದ ಒಂದೊಂದು ಅಕ್ಷರದಲ್ಲಿಯೂ ಅಡಗಿರುವ ದಾರ್ಶನಿಕ ತತ್ತ್ವಜ್ಞಾನವನ್ನು ಪೂರ್ಣವಾಗಿ ಪತ್ತೆಹಚ್ಚುವುದು ಕಷ್ಟ. ಈ ವಿಶಾಲ ವಾದ ಜ್ಞಾನಭಂಡಾರದ ಪೂರ್ಣ ಪರಿಚಯವಾಗುವುದು ಮನುಷ್ಯನ ಅಲ್ಪ ಬುದ್ಧಿಗೆ ಬಹಳ ಕಷ್ಟ. ನಮ್ಮಂಥ ಸಾಧಾರಣ ಮನುಜರಿಗೆ ಮತ್ತೂ ಕಷ್ಟ. ಆದರೂ ಸಾಮಾನ್ಯರಿಗೂ ಈ ಮಂತ್ರದ ವಿಚಾರವು ಸ್ವಲ್ಪವಾದರೂ ತಿಳಿಯು ಲೆಂಬ ಆಶಯದಿಂದ ಈ ಮಂತ್ರವನ್ನು ಎರಡು ದೃಷ್ಟಿಯಿಂದಲೂ ಸಾಧ್ಯ ವಾದಷ್ಟು ಸರಳವಾಗಿ ವಿಮರ್ಶಿಸಲು ಪ್ರಯತ್ನಿಸಿರುತ್ತೇನೆ. ಗಾಯತ್ರಿಯು ಸುಲಭ ಕಷ್ಟವಾದ-ಅಥವಾ-ಕಷ್ಟ ಸುಲಭವಾದ ಮಂತ್ರ. ಅಂದರೆ ಮಾತು ಗಳನ್ನು ಬಿಡಿಬಿಡಿಯಾಗಿ ನೋಡಿದರೆ ಸುಲಭ—ತತ್ತ್ವಾರ್ಥ ನಿರೂಪಣೆ ಕಷ್ಟ. (ತತ್ತ್ವ-ತತ್ + ತ್ವ = ಅದರ ಅದುತನ. ಪ್ರಸಕ್ತವಾಗಿರುವ ವಿಷ ಯದ ನಿಜಸ್ಥಿತಿಯೇ ತತ್ತ್ವವೆನಿಸುವುದು.) ನಮಗಿರುವ ಸಂದರ್ಭದ ತತ್ತ್ವ ವನ್ನು, ಯಥಾರ್ಥವನ್ನು—ಗ್ರಹಿಸಿ ಅದಕ್ಕೆ ನಮ್ಮ ನಡವಳಿಕೆಯನ್ನು ಹೊಂದಿಸಿಕೊಳ್ಳುವುದು ಧರ್ಮ—ವಸ್ತುವಿನ ಯಥಾರ್ಥರೂಪ. ಅದರ ನೈಜಸ್ವರೂಪವೇ ಅದರ ತತ್ತ್ವ. ಶ್ರೀಗಾಯತ್ರೀ ಮಂತ್ರದಲ್ಲಿ ಅಡಗಿರುವ ಅಪಾರ ತತ್ತ್ವಗಳನ್ನು ಈ ಗ್ರಂಥದ ಕಿರಿದಾದ ಮಿತಿಯೊಳಗೆ ಅಡಕ ಮಾಡಲು ಎಂದಿಗೂ ಸಾಧ್ಯವಿಲ್ಲ. ಅಲ್ಲದೆ ಭಾಷೆಯ ಮಾಧ್ಯಮದ ಮೂಲಕ ಅದನ್ನು ಸಂಪೂರ್ಣವಾಗಿ ಹೊರಸೂಸಲೂ ಯಾರಿಗೂ ಸಾಧ್ಯವಿಲ್ಲ.

ಸಹೃದಯ ಮಹನೀಯರಲ್ಲಿ ನನ್ನದೊಂದು ಸವಿನಯ ವಿನಂತಿ. ನಾನು ಸಾಹಿತಿಯೂ ಅಲ್ಲ, ವಿದ್ವಾಂಸನೂ ಅಲ್ಲ. ಮತ, ತತ್ತ್ವ, ಧರ್ಮ, ದೈವ ಮೊದಲಾದ ಸೂಕ್ಷ್ಮ, ಪವಿತ್ರ ವಿಚಾರಗಳಿಗೆ ಅವಶ್ಯಕವಾದ ಶಾಸ್ತ್ರಜ್ಞಾನ ವಾಗಲೀ, ಅನುಷ್ಠಾನ-ಅನುಭವಗಳಾಗಲೀ ನನಗಿಲ್ಲ. ಹೇಳಬೇಕಾದುದ ನ್ನೆಲ್ಲಾ ಪೂರ್ಣವಾಗಿ ವಿವರಿಸುವುದು ನನ್ನಂಥ ಸಾಮಾನ್ಯನಿಗೆ ಸಾಧ್ಯವಿಲ್ಲ. ಅನೇಕ ಗ್ರಂಥಿಗಳಿಂದ ಸಂಗ್ರಹಿಸಿದ ವಿಷಯಗಳನ್ನು ಈ ಪುಸ್ತಕರೂಪಕ್ಕೆ ತಂದಿರುತ್ತೇನೆ. ಇಷ್ಟೇ ನನ್ನ ಕೆಲಸ. ಇದರಲ್ಲಿ ನಾನು ಎಷ್ಟರ ಮಟ್ಟಿಗೆ ಯಶಸ್ವಿಯಾಗಿರುವೆನೋ ಗೊತ್ತಿಲ್ಲ. ಅದರ ನಿರ್ಧಾರವನ್ನು ವಾಚಕರು ಮಾಡಬೇಕು. ಇದರಲ್ಲಿ ನನ್ನ ಸ್ವಂತ ಅಭಿಪ್ರಾಯ ಯಾವುದೂ ಇಲ್ಲ.

ಹೀಗಾಗಿ ಈ ಕೃತಿಯು ನಿರ್ದೋಷವಾಗಿ, ಸರ್ವಾಂಗ ಸುಂದರವಾಗಿ, ಸರ್ವಾಂಗೀಣಾರ್ಥವಾಗಿರುತ್ತದೆಂದು ನನಗೆ ನಂಬಿಕೆಯಿಲ್ಲ. ಇದು ಸಮಗ್ರ ವಿಷಯಗಳಿಂದ ಕೂಡಿದೆ ಎಂದೂ ಇಲ್ಲ. ಇದು ದಿಕ್ಪ್ರದರ್ಶನ ಮಾತ್ರದ್ದೆಂದು ನನ್ನ ನಂಬಿಕೆ. ವಾಚಕರ ಇಂಗಿತಜ್ಞತೆಯೂ, ಸಹಾನುಭೂತಿಯೂ ಈ ಕೃತಿಗೆ ಇರುವುದಾದರೆ ಲೋಪದೋಷಗಳು ಅವರ ಗಣನೆಗೆ ಬರಲಾರವೆಂಬ ವಿಶ್ವಾಸದಿಂದ ಇದನ್ನು ಮಹಾಜನರಿಗೆ ಒಪ್ಪಿಸಿದ್ದೇನೆ. ಎಲ್ಲಾ ದೋಷಗಳನ್ನು ಪರಿಹರಿಸಿ, ಎಲ್ಲಾ ಗುಣಗಳನ್ನೂ ತುಂಬಬಲ್ಲುದ್ದು ಭಗವತಿಯ ಕೃಪೆ ಮಾತ್ರ. ಅದೇ ವಾಚಕರ ಸಹಾನುಭೂತಿಯಾಗಿ, ಔದಾರ್ಯವಾಗಿ ಬರುತ್ತದೆ. ವಾಚಕರು ಈ ಕೃತಿಯಲ್ಲಿ ಕಂಡುಬರಬಹುದಾದ ಲೋಪದೋಷಗಳನ್ನು ತಿಳಿಸಿಕೊಟ್ಟಲ್ಲಿ ಕೃತಜ್ಞನಾಗಿ ತಿದ್ದಿಕೊಳ್ಳಲು ಸಿದ್ಧನಾಗಿರುತ್ತೇನೆ. ಇದರಲ್ಲಿ ಯಾವುದಾದರೂ ವಿಷಯವು ಸ್ಪಷ್ಟವಾಗದೆ ಹೋಗಿದ್ದರೆ, ಇಲ್ಲವೆ ದೂಷಿತ ಅರ್ಥದಿಂದ ಕೂಡಿದ್ದರೆ ಅಥವಾ ನಿರರ್ಥಕವೆನಿಸಿದ್ದರೆ ಅವುಗಳನ್ನು ಕೃಪೆಮಾಡಿ ನನಗೆ ತಿಳಿಸಬೇಕಾಗಿ ವಿನಂತಿ. ಇದು ಭಾಷೆಗೆ ಮಾತ್ರವಲ್ಲ, ವಿಷಯ ನಿರೂಪಣೆಗೂ ಅನ್ವಯವಾಗುವುದು. ಬಹುಸಾಮಾನ್ಯರಾದವರ ಮನೆಯ ಬೆಳಕಿಗೆ ಇದು ಒಂದು ತೊಟ್ಟಿನಷ್ಟು ಎಣ್ಣೆಯಂತಾದರೆ ಅದೇ ನನಗೆ ತೃಪ್ತಿ. ಇದರಿಂದ ಮಾನ್ಯಮಹಷಿಯರಿಗೆ ಕಿಂಚಿತ್ತಾದರೂ ಉಪಯೋಗವಾದಲ್ಲಿ ಅದೇ ನನ್ನ ಶ್ರಮಕ್ಕೆ ಸಿಕ್ಕಿದ ಫಲವೆಂದು ಭಾವಿಸುತ್ತೇನೆ. ಈ ಕೃತಿಯಲ್ಲಿ ಏನಾದರೂ ಒಳ್ಳೆಯದು ಇರುವುದಾದರೆ ಅದು ಶ್ರೀ ಗಾಯತ್ರೀ ಮಾತೆಯ ಅನುಗ್ರಹದಿಂದ. ಏನೆಲ್ಲಾ ದೋಷಗಳು ಇರುವುದಾದರೆ ಅವೆಲ್ಲಾ ನನ್ನ ದೌರ್ಬಲ್ಯದಿಂದ ಎಂದು ನನ್ನ ಅನಿಸಿಕೆ.

ಈ ಪುಸ್ತಕದ ಹಸ್ತಪ್ರತಿಯಲ್ಲಿನ ಪ್ರತಿ ಪದವನ್ನೂ ಆಮೂಲಾಗ್ರವಾಗಿ ಓದಿ ತಪ್ಪುಗಳನ್ನು ತಿದ್ದಿ, ಮುದ್ರಣಕ್ಕೆ ಸಿದ್ಧಪಡಿಸಿಕೊಟ್ಟ, ಮೈಸೂರಿನ ಮಹಾರಾಣಿ ಕಲಾ ಕಾಲೇಜಿನ ಸಂಸ್ಕೃತ ಪ್ರಾಧ್ಯಾಪಕರಾದ ಶ್ರೀಮತಿ ಎಸ್. ಜಯಲಕ್ಷ್ಮಿಯವರಿಗೂ, ದಾನಿಗಳಿಗೂ ನನ್ನ ಕೃತಜ್ಞತೆಗಳು.

"ಆನೋ ಭದ್ರಾಃ ಕ್ರತವೋ ಆಯಾಂತು ವಿಶ್ವತಃ"—ನಮಗೆ ಎಲ್ಲಾ ಕಡೆಯಿಂದಲೂ 'ಶುಭ ಹಾರೈಕೆಗಳು ಬರಲಿ' ಎಂಬುದೇ ನನ್ನ ಆಶಯ.

ಮೈಸೂರು—೪ ಸಂಗ್ರಾಹಕ
ಅಂಗೀರಸನಾಮ ಸಂವತ್ಸರ ಸಿ. ಲಕ್ಷ್ಮೀನಾರಾಯಣನ್

## ಎರಡನೆಯ ಮುದ್ರಣ

ಈ ಕೃತಿಯ ಮೊದಲ ಮುದ್ರಣದ ಪ್ರತಿಗಳು ಸ್ವಲ್ಪ ಸಮಯದಲ್ಲೇ ಮುಗಿದು ಪುನರ್ಮುದ್ರಣದ ಯೋಗ ಬಂದಿರುವುದು ಸಂತೋಷದ ಸಂಗತಿ. ಇದಕ್ಕೆ ಕಾರಣರಾದವರೆಲ್ಲರಿಗೂ ವಂದನೆಗಳು. ಈ ಕೃತಿಯನ್ನು ಮೆಚ್ಚಿ ನನಗೆ ಅನೇಕ ಪತ್ರಗಳು ಬಂದಿವೆ. ಅನೇಕರು ನನ್ನನ್ನು ಭೇಟಿ ಮಾಡಿದಾಗ ತಮ್ಮ ತೃಪ್ತಿಯನ್ನೂ, ಅಭಿಮಾನವನ್ನೂ ತಿಳಿಸಿ ಪ್ರೋತ್ಸಾಹಿಸಿರುತ್ತಾರೆ. ಇದೊಂದು ಹೆಮ್ಮೆಯ ವಿಷಯ. ಈ ಮಮತೆಯ ಮನ್ನಣೆಗಳನ್ನು ಮಾತೆಯ ಪ್ರಸಾದವೆಂದು ಭಾವಿಸುತ್ತೇನೆ. ಇದರ ಪ್ರತಿಗಳಿಗೆ ಬೇಡಿಕೆ ಬಹಳ ವಾಗಿದ್ದರೂ ಆರ್ಥಿಕ ತೊಂದರೆಯಿಂದ ಈ ಮುದ್ರಣ ವಿಳಂಬವಾಯಿತು.

ಈ ಮುದ್ರಣದಲ್ಲಿ ಶ್ರೀ ಗಾಯತ್ರೀ ದೇವಿಯ ವಿಷಯವಾಗಿಯೂ, ವೈಜ್ಞಾನಿಕ ವಿಷಯವಾಗಿಯೂ ಮತ್ತಷ್ಟು ವಿಷಯಗಳನ್ನು ಸೇರಿಸಿದ್ದೇನೆ.

ಇನ್ನೊಂದು ವಿಷಯ—ಇತ್ತೀಚಿಗೆ ಕಾಗದದ ಬೆಲೆ ಮತ್ತು ಮುದ್ರಣದ ವೆಚ್ಚ ಹೆಚ್ಚಿರುವುದರಿಂದಲೂ, ಪುಸ್ತಕದ ಪುಟಗಳೂ ಜಾಸ್ತಿಯಾದುದ ರಿಂದಲೂ ಅನಿವಾರ್ಯವಾಗಿ ಇದರ ಬೆಲೆಯನ್ನು ಹೆಚ್ಚಿಸಬೇಕಾಗಿ ಬಂತು. ಮಹನೀಯರು ಮೊದಲಿನಂತೆ ಸ್ವೀಕರಿಸಿದರೆ, ಆಸ್ತಿಕವೃಂದದ ಆದರಣೆಗೆ ಪಾತ್ರವಾದರೆ ಅದೇ ನನಗೆ ಮಹಾ ಸೌಭಾಗ್ಯ, ನನ್ನ ಪ್ರಯತ್ನ ಸಾರ್ಥಕ. ಎಲ್ಲರಿಗೂ ಜಗನ್ಮಾತೆಯಾದ ಶ್ರೀಗಾಯತ್ರೀದೇವಿಯ ಅನುಗ್ರಹವಾಗಲಿ.

## ಮೂರನೆಯ ಮುದ್ರಣ

ಈ ಕೃತಿಯ ಎರಡನೆಯ ಮುದ್ರಣದ ಪ್ರತಿಗಳೂ ಅಲ್ಪ ಕಾಲದಲ್ಲಿಯೇ ಮುಗಿದುವು. ಇದಕ್ಕಿರುವ ನಿರಂತರ ಬೇಡಿಕೆ ಹಾಗೂ ಮಹಾ ಜನರ ಸಾದರ ಪ್ರೋತ್ಸಾಹದಿಂದ ಪ್ರಭಾವಿತನಾಗಿ ಇದರ ಪುನರ್ಮುದ್ರಣಕ್ಕೆ ಕೈ ಹಾಕಿರುತ್ತೇನೆ. ಕಾಗದದ ಬೆಲೆ ಹಾಗು ಮುದ್ರಣದ ವೆಚ್ಚ ಹೆಚ್ಚಾಗಿರುವುದ ರಿಂದಲೂ ಮತ್ತಷ್ಟು ವಿಷಯಗಳನ್ನು ಇದಕ್ಕೆ ಸೇರಿಸಿರುವುದರಿಂದಲೂ ಇದರ ಬೆಲೆಯನ್ನು ಸ್ವಲ್ಪ ಹೆಚ್ಚಿಸಿರುತ್ತೇನೆ. ಧಾರ್ಮಿಕ ಬಂಧುಗಳ ಅಭಿಮಾನ ಹಾಗೂ ಪ್ರೋತ್ಸಾಹ ಮುಂದುವರಿಯಲೆಂದು ಸಹೃದಯರಲ್ಲಿ ವಿನಂತಿ. ಸೂಕ್ತ ಸಲಹೆಗಳಿಗೆ ಆದರದ ಸ್ವಾಗತವಿದೆ. ಶ್ರೀ ದೇವಿಯ ಕೃಪೆಯು ಎಲ್ಲರಿಗೂ ಸದಾ ದೊರೆಯಲೆಂದು ಬೇಡುತ್ತೇನೆ.

25–9–1999 ಸಿ. ಲಕ್ಷ್ಮೀನಾರಾಯಣನ್

# ವಿಷಯಾನುಕ್ರಮಣಿಕೆ


| | |
|---|---|
| ನಮ್ಮ ಹಿರಿಯರು | ೯ |
| ಶ್ರೀ ಗಾಯತ್ರೀ ಪದದ ಅರ್ಥ ವಿವರಣೆ | ೧೨ |
| ಉಪಾಸಿಸುವುದು ಯಾರನ್ನು ? | ೨೦ |
| ಫಲ ಪಡೆದವರು (ಉಪಾಸಕರು) | ೨೮ |
| ಶ್ರೀ ಗಾಯತ್ರೀ ಮಂತ್ರ ವಿವರಣೆ | ೪೦ |
| ಶ್ರೀ ಗಾಯತ್ರೀ ಜಪ ವಿವರಣೆ | ೬೨ |
| ಆಸನ, ಪ್ರಾಣಾಯಾಮ ಮತ್ತು ಸಂಕಲ್ಪ | ೭೮ |
| ತುರೀಯ ಗಾಯತ್ರೀ ಜಪಕ್ರಮ | ೮೯ |
| ಶ್ರೀ ಗಾಯತ್ರೀ ಪಾದ ವಿವರಣೆ | ೯೩ |
| ಶ್ರೀ ಗಾಯತ್ರೀ ಪದ ವಿವರಣೆ | ೯೯ |
| ಶ್ರೀ ಗಾಯತ್ರೀ ವರ್ಣ ವಿವರಣೆ | ೧೫೯ |
| ಚತುರ್ವಿಂಶತಿ ವರ್ಣಾನಾಂ ಮುಷ್ಟ್ಯಾದಿನ್ಯಾಸ | ೧೬೭ |
| ಶ್ರೀ ಗಾಯತ್ರೀ–ಸಂಗೀತಶಾಸ್ತ್ರ | ೧೭೩ |
| ಶ್ರೀ ಗಾಯತ್ರೀ–ಜ್ಯೋತಿಷ | ೧೭೯ |
| ಶ್ರೀ ಗಾಯತ್ರೀ–ರಾಮಾಯಣ | ೧೮೨ |
| ಶ್ರೀ ಗಾಯತ್ರೀ ಪ್ರಶಂಸೆ | ೧೮೭ |
| ಶ್ರೀ ಗಾಯತ್ರೀ ವೈಜ್ಞಾನಿಕ ವಿವರಣೆ | ೧೯೮ |


## ಅನುಬಂಧ


| | |
|---|---|
| ಅನೇಕ ದೇವತೆಗಳ ಗಾಯತ್ರೀ ಮಂತ್ರಗಳು | ೨೩೧ |
| ನವಗ್ರಹ ಗಾಯತ್ರೀ | ೨೩೩ |
| ಶ್ರೀ ಸವಿತೃ ದೇವತಾ ಸ್ತೋತ್ರ | ೨೩೪ |
| ವಸಿಷ್ಠ ಕಲ್ಪ ಗಾಯತ್ರ್ಯರ್ಥೋ ನಿರ್ದಿಶ್ಯತೇ | ೨೩೫ |
| ಶ್ರೀ ಗಾಯತ್ರೀ ಸ್ವರೂಪ ವರ್ಣನೆ | ೨೩೬ |
| ಶ್ರೀ ಗಾಯತ್ರೀ ಸ್ತೋತ್ರಂ | ೨೩೭ |
| ಶ್ರೀ ಗಾಯತ್ರೀ ಅಷ್ಟೋತ್ತರ ಶತನಾಮಸ್ತೋತ್ರಮ್ | ೨೩೮ |
| ಶ್ರೀ ಗಾಯತ್ರೀ ತತ್ತ್ವಮಾಲಾ ಮಂತ್ರ। | ೨೪೦ |
| ಶ್ರೀ ಗಾಯತ್ರೀ ಸ್ವರನಿರ್ಣಯಃ | ೨೪೧ |
| ಶ್ರೀ ಗಾಯತ್ರೀ ವಂದನಂ | ೨೪೨ |

| | |
|---|---|
| ಶ್ರೀ ಗಾಯತ್ರೀ ರಹಸ್ಯಂ | ೨೪೩ |
| ಶ್ರೀ ಗಾಯತ್ರೀ ಕವಚಂ | ೨೪೬ |
| ಶ್ರೀ ಗಾಯತ್ರೀ ಹೃದಯಂ | ೨೪೮ |
| ಶ್ರೀ ಗಾಯತ್ರ್ಯುಪನಿಷತ್ | ೨೫೦ |
| ಶ್ರೀ ಗಾಯತ್ರೀ ಪರಮಾರ್ಥ | ೨೫೬ |
| ಶ್ರೀ ಗಾಯತ್ರೀ ಜಪಸ್ಥಾನಫಲ | ೨೫೮ |
| ಶ್ರೀ ಗಾಯತ್ರೀ ಭುಜಂಗ ಸ್ತೋತ್ರಂ | ೨೫೯ |
| ಶ್ರೀ ಗಾಯತ್ರೀ ಸಗುಣ ಸ್ವರೂಪಾನುಸಂಧಾನಂ | ೨೬೦ |
| ಚತುರ್ವಿಂಶತ್ಯಕ್ಷರಾಣಾಂ ದೇವತಾ | ೨೬೧ |
| ಪ್ರಣವ ವ್ಯಾಹೃತಿ ಪ್ರಶಂಸಾ | ೨೬೧ |
| ಶ್ರೀ ಗಾಯತ್ರ್ಯುಚ್ಚಾರಣ ವಿಧಿ | ೨೬೨ |
| ಛಂದಸ್ಸು | ೨೬೪ |
| ವಯಸ್ಸು | ೨೬೫ |
| ಉಪಸ್ಥಾನ | ೨೬೫ |
| ಶ್ರೀ ಗಾಯತ್ರೀ ಪಟಲಂ | ೨೬೬ |
| ಶ್ರೀ ಗಾಯತ್ರೀ ಅರ್ಚನೆ | ೨೭೭ |
| ಶ್ರೀ ಗಾಯತ್ರೀ ಶಾಪವಿಮೋಚನಾ ಮಂತ್ರ | ೨೭೩ |
| ಶ್ರೀ ಗಾಯತ್ರೀ ಅಷ್ಟೋತ್ತರ ಶತನಾಮಾವಳಿಃ | ೨೭೫ |
| ನೆರವು ನೀಡಿದ ಗ್ರಂಥಗಳು | ೨೭೮ |

|| ಓಂ ||
|| ಶ್ರೀ ವಿಘ್ನೇಶ್ವರಾಯ ನಮಃ ||
|| ಶ್ರೀ ಗಾಯತ್ರ್ಯೈ ನಮಃ ||

**ಯಾ ಸಂಧ್ಯಾ ಮಂಡಲ ಗತಾ ಯಾ ತ್ರಿಮೂರ್ತಿ ಸ್ವರೂಪಿಣೀ |**
**ಸರಸ್ವತೀ ಯಾ ಸಾವಿತ್ರೀ ತಾಂ ವಂದೇ ವೇದ ಮಾತರಂ ||**

# ಶ್ರೀ ಗಾಯತ್ರೀ ತತ್ತ್ವಾರ್ಥ ದರ್ಶನ

## ನಮ್ಮ ಹಿರಿಯರು

ಪರಮಾತ್ಮನ ಅಸ್ತಿತ್ವದ ಪ್ರಜ್ಞೆ ಮೂಡಿಬಂದ ಜನಾಂಗಗಳಲ್ಲಿ ಭಾರತವು ಪ್ರಾಚೀನಕಾಲದಿಂದಲೂ ಅಗ್ರಸ್ಥಾನ ಪಡೆದಿದೆ. ಭಾ=ಎಂದರೆ ಬೆಳಕು. ಅದರಲ್ಲಿ ರತ=ಎಂದರೆ ಪ್ರೀತಿಯುಳ್ಳವರು, ಆಸಕ್ತರು—ಭಾರತೀಯರು. ಆಧ್ಯಾತ್ಮಿಕ ವಿಷಯದಲ್ಲಿ ಚೀನ, ಜಪಾನ್, ಟಿಬೆಟ್, ಸಯಾಮ್, ಬರ್ಮಾ ಮತ್ತು ಶ್ರೀಲಂಕಾ ದೇಶಗಳಿಗೆ ಭಾರತವು ತೌರೂರು. ಇದರ ಇತಿಹಾಸವು ನಿನ್ನೆ ಮೊನ್ನೆಯದಲ್ಲ, ಸಹಸ್ರಾರು ವರ್ಷಗಳಷ್ಟು ಪ್ರಾಚೀನವಾದದ್ದು. ಇತಿಹಾಸದ ಅರುಣೋದಯದಿಂದಲೂ ಭಾರತ ತನ್ನ ಆಧ್ಯಾತ್ಮಿಕ ಪರಮಾಧಿ ಕಾರವನ್ನು ಕಾಪಾಡಿಕೊಂಡುಬಂದಿದೆ. ನಮ್ಮ ಹಿರಿಯರು ತಮ್ಮ ಜೀವನದ ಮೂಲಕ ಪರಂಜ್ಯೋತಿಯ ಬೆಳಕಿನ ನೆಲೆಯನ್ನರಿಯಲು ಸದಾ ಆಸಕ್ತರಾಗಿದ್ದರು. ವೈದಿಕ ಧರ್ಮ ಭಾರತದ ಆಸೇತು ಹಿಮಾಲಯ ಪರ್ಯಂತ ಪ್ರಚಾರದಲ್ಲಿದೆ. ಇಲ್ಲಿರುವ ಜನರಲ್ಲಿ ಒಂದು ಆಂತರಿಕ ಐಕ್ಯತೆ ಇದೆ.

ನಮ್ಮ ಹಿರಿಯರಲ್ಲಿ ಕೆಲವರು ಋಷಿಗಳಾಗಿ, ಯೋಗಿಗಳಾಗಿ, ಯತಿಗಳಾಗಿ, ಬ್ರಹ್ಮಜ್ಞಾನಿಗಳಾಗಿ ತಮ್ಮ ಜೀವಿತದ ಬಹುಕಾಲವನ್ನು ಭಗವಂತನ ವಿಚಾರದಲ್ಲಿ ಕಳೆದಿದ್ದಾರೆ. ಅವರು ಕಾಯಾ, ವಾಚಾ, ಮನಸಾ, ಇಂದ್ರಿಯ, ಬುದ್ಧಿ, ಆತ್ಮ, ಪ್ರಕೃತಿ ಸ್ವಭಾವ ಇವುಗಳನ್ನೆಲ್ಲಾ ಪರಿಪೂರ್ಣವಾಗಿ ವಿಚಾರಮಾಡಿ, ಕರ್ಮ-ಜ್ಞಾನಕಾಂಡಗಳ ಪ್ರಯೋಗ ವಿಜ್ಞಾನವನ್ನು ಸ್ವಾಧೀನ ಮಾಡಿಕೊಂಡು ಅನುಭಾವಿಗಳಾಗಿದ್ದರು. ಅವರು ತಮ್ಮ ಶರೀರವೆಂಬ ವಿಜ್ಞಾನ ಮಂದಿರದಲ್ಲಿ, ಸಮಾಧಿ ಹಾಗೂ ಧ್ಯಾನಾವಸ್ಥೆಯ ಪ್ರಯೋಗಶಾಲೆಯನ್ನು

ಪ್ರವೇಶಿಸಿ ಈ ಎಲ್ಲಾ ದೃಶ್ಯಮಾನ ಜಗತ್ತು ಕೇವಲ ಜೀವಾತ್ಮನ ಕಲ್ಯಾಣಕ್ಕಾಗಿಯೇ ಇದೆ ಎಂಬುದನ್ನು ಕಂಡುಕೊಂಡಿದ್ದರು. ನಿಚ್ಚಳವಾದ ಮನಸ್ಸೆಂಬ ಕಣ್ಣಿನಿಂದ (ಅಂತರ್ದೃಷ್ಟಿಯಿಂದ) ಯೋಗವಿಜ್ಞಾನವನ್ನು ಹೊರಗೆಡಹಿದರು. ತಮ್ಮ ಅಂತರ್ಮುಖ ಧ್ಯಾನಯೋಗದ ತಪಶ್ಶಕ್ತಿಯಿಂದ ತಮ್ಮಲ್ಲಿರುವ ಅಜ್ಞಾನದ ಒಲೆಯುನ್ನು ಭೇದಿಸಿ, ದೇಹಜ್ಞಾನವೇ ಇಲ್ಲದೆ, ಆನಂದಮಯವಾದ ಕಳಾಶಕ್ತಿಗಿಂತಲೂ ಹೆಚ್ಚಿನ ಯೋಗಶಕ್ತಿಯಿಂದ ತಮ್ಮ ಸೂಕ್ಷ್ಮ ಶರೀರವನ್ನು ಸ್ಥೂಲಶರೀರದಿಂದ ಪ್ರತ್ಯೇಕಿಸಿಕೊಂಡು, ಸೂಕ್ಷ್ಮ ಶರೀರದಿಂದಲೇ ಅವ್ಯಕ್ತವಾದ, ಕಳಾರೂಪದಲ್ಲಿರುವ, ವಿಶ್ವದಲ್ಲೆಲ್ಲಾ ಸಂಚರಿಸಿ ಪುನಃ ಬಂದು ಸ್ಥೂಲದೇಹದ ಸಂಬಂಧವನ್ನು ಹೊಂದುತ್ತಿದ್ದರು. ಕೆಲವರು ಭಗವಂತನ ಸಂದರ್ಶನವನ್ನು ತಮ್ಮ ಹೃದಯಕಮಲದಲ್ಲಿ ಪಡೆದಿದ್ದರು. ಮತ್ತೆ ಕೆಲವರು ಆತನನ್ನು ಬಾಹ್ಯದಲ್ಲಿ ಪ್ರತ್ಯಕ್ಷೀಕರಿಸಿಕೊಂಡಿದ್ದರು. ಅವರು ತಮ್ಮ ಧ್ಯಾನನಿಷ್ಠೆಯ ಬಲದಿಂದಲೇ ನಮಗೆ ವಿಸ್ಮಯವನ್ನುಂಟು ಮಾಡುವ ಅಖಿಲ ಸಿದ್ಧಿಯನ್ನು ಪಡೆದುಕೊಂಡಿದ್ದರು.

ಈ ಲೋಕದ ಸಕಲ ವೈಭವಗಳ ಆನಂದವನ್ನೂ ಜೊತೆಗೆ ಆತ್ಮಕ್ಕೆ ಮೋಕ್ಷದ ಆನಂದವನ್ನು ಅನುಭವಿಸುವ ಜ್ಞಾನವನ್ನೂ ವೇದಗಳ ಮೂಲಕ ಪಡೆದಿದ್ದರು. ವೇದಗಳು ಹೊರಗಿನ ದೃಷ್ಟಿಯಲ್ಲಿ ಒಂದು ಅದ್ಭುತ ಶಬ್ದ ರಾಶಿ. ತತ್ತ್ವದೃಷ್ಟಿಯಲ್ಲಿ ಜ್ಞಾನಭೂಮಿಕೆಯಲ್ಲಿ ಬೆಳೆಸುವ ಮಹಾಜ್ಯೋತಿ. ಪ್ರಾಚೀನ ಕಾಲದಲ್ಲಿ ಉಂಟಾಗಿದ್ದ ಭೌತಿಕಉನ್ನತಿ ಕೇವಲ ಮಾನವಶರೀರದ ಸುಖವನ್ನು ಅಥವಾ ವಿನಾಶವನ್ನು ದೃಷ್ಟಿಯಲ್ಲಿ ಇರಿಸಿಕೊಂಡು ಆದದ್ದಲ್ಲ ; ಆತ್ಮ ಹಾಗೂ ಜ್ಞಾನಕ್ಕಾಗಿ ಆದದ್ದು. ವೈಜ್ಞಾನಿಕ ಆವಿಷ್ಕಾರಗಳೆಲ್ಲಾ ಸ್ವಾರ್ಥಕ್ಕಾಗಲ್ಲ ; ಪರಾರ್ಥಕ್ಕಾಗಿ.

ಬ್ರಹ್ಮಜ್ಞಾನಿಗಳು ಈ ವಿಶ್ವವನ್ನು ಮತ್ತು ಅದರಲ್ಲಿರುವ ಚರಾಚರ ವಸ್ತುಗಳೆಲ್ಲವನ್ನೂ ಸೃಷ್ಟಿಸಿರುವ ಮೂಲಶಕ್ತಿಯನ್ನು ಧ್ಯಾನದಿಂದ ನೋಡಿದಾಗ ಅದರ ವಿಷಯದಲ್ಲಿ ಅವರ ಅಂತಃಕರಣಕ್ಕೆ ಪ್ರಭಾವಿತವಾದ ಭಾವನೆಗಳೆಲ್ಲವನ್ನೂ ಕೆಲವು ಪದಗಳಿಂದ ವಿವರಿಸಿದರು. ಈ ಮಹರ್ಷಿಗಳು ಕೇವಲ ಭೌತಿಕದಲ್ಲಿಯೇ ನಿಲ್ಲದೆ ದೈಹಿಕವಾಗಿ ಏನಿದೆ ? ಆಧ್ಯಾತ್ಮಿಕವಾಗಿ ಏನಿದೆ ? ಎಂದು ನೋಡುತ್ತಾ ದೈವೀರಾಜ್ಯ, ಆತ್ಮರಾಜ್ಯಗಳನ್ನು ಪ್ರವೇಶಿಸಿ, ಜ್ಞಾನ ಭಂಡಾರವನ್ನು ತಲಪಿದರು. ಅಂತರ್ದೃಷ್ಟಿಯಿಂದ ಎಲ್ಲವನ್ನೂ ನೋಡಿ ಅಲ್ಲಿಂದ ಬರುವಾಗ ಅವರು ಶಾಸ್ತ್ರ, ಕಲೆ, ಇತ್ಯಾದಿಗಳನ್ನು ತಂದರು. ಈ

ಅಂತರ್ಬೋಧೆಯ ನಿರೂಪಣೆಗಳು ಯಥಾರ್ಥ ಸತ್ಯಾನುಭವದ ಪ್ರಬಲ ಬೆಂಬಲ ಪಡೆದ ಆತ್ಮಗಳ ಆಧ್ಯಾತ್ಮಿಕ ಅನುಭವದ ನಿರೂಪಣೆಗಳು. ಇವು ನಿರ್ದಿಷ್ಟ ನಿಯಮಾಚರಣೆಮಾಡಿ ಅನುಸರಿಸಿದರೆ ಪುನಃ ಅನುಭವ ಪಡೆಯಲು ಸಾಧ್ಯವಾದಂಥವುಗಳು. ಇವು ಅತ್ಯಂತ ವೈವಿಧ್ಯಮಯವಾದ ಕುಶಲ ಕಸೂತಿ ಕಲೆಯ ವಸ್ತ್ರದಂತಿವೆ. ಇದರ ಪ್ರತಿಯೊಂದು ಹಂತವೂ ವೇದಾಂತದ ಸಾಮಾನ್ಯ ಹಿನ್ನೆಲೆಗೆ ಸಂಬಂಧ ಹೊಂದಿದೆ. ಇಂತಹ ಜ್ಞಾನ ಚಕ್ಷುಸ್ಸುಳ್ಳ ಮಹಾತ್ಮರಾದ ನಮ್ಮ ಮಹರ್ಷಿಗಳು ತಮ್ಮ ಜ್ಞಾನ ಚಕ್ಷುಸ್ಸಿನ ಬಲದಿಂದ ಅವ್ಯಕ್ತದ ವಿಚಾರಗಳನ್ನು ಚೆನ್ನಾಗಿ ಅರಿತು ನಮ್ಮ ವೇದಶಾಸ್ತ್ರಗಳ ಕಟ್ಟಡವನ್ನು ಬಹು ಬಲವಾದ ಅಸ್ತಿಭಾರದ ಮೇಲೆ ಕಟ್ಟಿರುವರು; ದೇಶವನ್ನು ಪವಿತ್ರಗೊಳಿಸಿರುವರು; ಧರ್ಮಕ್ಷೇತ್ರವಾಗಿ ಮಾಡಿರುವರು. ಆಧ್ಯಾತ್ಮಿಕ ಸ್ವಾತಂತ್ರ್ಯದ ಹಿತದೃಷ್ಟಿಯಿಂದ ದೈನಂದಿನ ಜೀವನದ ಅತಿಸಾಮಾನ್ಯ ವಿವರಗಳನ್ನೂ ರೂಪಿಸಿದರು. ಹೀಗೆ ಭಗವಂತನನ್ನು ಸಂದರ್ಶಿಸಲು ಅವರು ಅನುಸರಿಸಿದ ಮಾರ್ಗ 'ಶ್ರೀ ಗಾಯತ್ರೀ ಉಪಾಸನೆ.'

ಈ ಮಹರ್ಷಿಗಳು ಪೂರ್ಣ ತಪಶ್ಶಕ್ತಿಯುತರಾಗಿ, ಸಕಲವಿದ್ಯೆಗಳಿಂದ ಕೂಡಿದ ಮಹಾಯೋಗ ಶಕ್ತಿಯುಳ್ಳವರಾಗಿ, ಬ್ರಹ್ಮಾನಂದ ರಸಪಾನದಿಂದ ಮತ್ತರಾಗಿ, ಭಾವಪೂರ್ಣರಾಗಿದ್ದ ಕಾಲದಲ್ಲಿ ಅವರ ಅಂತಃಸ್ಫುರಣೆಗೆ ಗೋಚರವಾದ ದೇವತೆಯ ಪ್ರಥಮ ಧ್ವನಿಚಿತ್ರಗಳೇ 'ಮಂತ್ರಗಳು.' ಅವುಗಳನ್ನು 'ಬೀಜ ಮಂತ್ರಗಳು' ಎನ್ನುವರು. ಈ ಮಹರ್ಷಿಗಳು ತಮಗೆ ಗೋಚರವಾದ ಮೂಲಧ್ವನಿಗಳನ್ನು ಮಾನವಭಾಷೆಯಲ್ಲಿ ಆದಷ್ಟು ಸಮೀಪ ರೂಪದಲ್ಲಿ ಅಳವಡಿಸಿದರು. ತಮ್ಮ ಭಾವನೆಗಳು ಅಭಿವ್ಯಕ್ತವಾಗಲು ಅವುಗಳಿಗೆ (ಬೀಜ ಮಂತ್ರಗಳಿಗೆ) ಉಡಿಗೆ ತೊಡಿಗೆಗಳನ್ನು ತೊಡಿಸಿದರು. ಅವುಗಳೇ ವೇದಗಳಲ್ಲಿ ಪವಿತ್ರವಾಗಿರುವ ಮಂತ್ರಗಳು. ಅವು ಅವ್ಯಕ್ತದ ವ್ಯಕ್ತಾಕ್ಷರಗಳು; ದೇವತೆಯ ವಾಕ್‌ರೂಪವಾದ ದರ್ಶನಗಳು. ಗಾಯತ್ರೀ ಮಂತ್ರವು ಅಂತಹ ಮುಖ್ಯ ಮಂತ್ರಗಳಲ್ಲಿ ಒಂದು; ಬಹುಮುಖ್ಯವಾದುದು. ಆ ಮಂತ್ರಗಳನ್ನು ಮಹರ್ಷಿಗಳು ಕಂಡುಹಿಡಿದರೇ ವಿನಃ (discovered) ತಾವೇ ಬರೆಯಲಿಲ್ಲ (not created). ಅಲ್ಲಿರುವ ಭಾವನೆಗಳು ಆ ಮಹರ್ಷಿಗಳ ಸ್ವಂತದ್ದಲ್ಲ, ಮೊದಲಿದ್ದುದೇ ಅದು. ಅದನ್ನು ಕಂಡು, ಕೇಳಿ, ಪ್ರಕಟಿಸಿದರು, ಅಷ್ಟೇ.

'ಪ್ರಾಣವಿದ್ಯೆ' 'ಮಹಾವಿದ್ಯೆ' ಮುಂತಾದ ಹೆಸರುಗಳಿಂದ ಕರೆಸಿಕೊಳ್ಳುವ ಪ್ರಣವವಿದ್ಯೆಯ ನಿಕಟ ಸಂಬಂಧ ಪಡೆದಿರುವ ಈ ಗಾಯತ್ರಿಯು ನಮ್ಮ ದೇಶದ ಮಹರ್ಷಿಗಳ ಮತ್ತೊಂದು ಅನ್ವೇಷಣೆ. ಅದು ಆತ್ಮಪ್ರಪಂಚಕ್ಕೆ ಸಂಬಂಧಿಸಿದ ಜ್ಞಾನ, ವಿಜ್ಞಾನ ಮತ್ತು ಪ್ರಯೋಗ(ಉಪಾಸನೆ)ಗಳನ್ನು ತನ್ನಲ್ಲಿ ಅಡಕಮಾಡಿಕೊಂಡಿರುವ ಒಂದು ಅಮೂಲ್ಯವಿದ್ಯೆ. ನಮ್ಮ ಜ್ಞಾನ ಜ್ಯೋತಿಯನ್ನು ಬೆಳಗಿಸಲು ಮಹರ್ಷಿಗಳು ನಮಗೆ ಕೊಟ್ಟ ನಿಧಿ. ಯಾರು ಅವಳನ್ನು ಗಾನ ಮಾಡುತ್ತಾರೋ ಅಂದರೆ ಜಪಿಸುತ್ತಾರೋ ಅವರನ್ನು ಕಾಪಾಡುವುದರಿಂದ ಅವಳು ಗಾಯತ್ರೀ. ಪ್ರಾಣಗಳಿಗೆ 'ಗಯಾ' ಎಂದು ಕರೆಯುತ್ತಾರೆ. ಅವುಗಳನ್ನು ಕಾಪಾಡುವುದರಿಂದ ಅವಳಿಗೆ ಆ ಹೆಸರು. ಗಾಯತ್ರೀ ಎಂಬುದಕ್ಕೆ 'ಗಾಯಂತಂ ತ್ರಾಯತೇ' (ಕಾಪಾಡುವವಳು) ಎಂದು ಅರ್ಥ ಹೇಳಬಹುದು. (ಭಾರದ್ವಾಜ ಸ್ಮೃತ-ಗಾಯತ್ರೀ ಕಲ್ಪ) ಐತರೇಯ ಬ್ರಾಹ್ಮಣದಲ್ಲಿ—"ಯಾವಳು 'ಗಯ'(ಪ್ರಾಣ)ಗಳ ರಕ್ಷಣೆ ಮಾಡುತ್ತಾಳೆಯೋ ಅವಳು ಗಾಯತ್ರೀ ದೇವಿ' ಎಂದು ಹೇಳಿದೆ. ಇದನ್ನೇ ಬೃಹದಾರಣ್ಯಕ (೫-೧೪-೪), ಭಾರದ್ವಾಜ, ಯಾಜ್ಞವಲ್ಕ್ಯ, ವಸಿಷ್ಠ ಹಾಗೂ ಶಾಂಕರ ಭಾಷ್ಯಗಳೂ ದೃಢಪಡಿಸುತ್ತವೆ. ಚೈತನ್ಯ ಹಾಗೂ ಸಜೀವತೆಗೆ 'ಪ್ರಾಣ'ವೆಂದೆನ್ನುತ್ತಾರೆ. ನಮ್ಮಲ್ಲಿರುವ ಗತಿ, ಕ್ರಿಯೆ, ವಿಚಾರ ಶಕ್ತಿ, ವಿವೇಕ ಹಾಗೂ ಜೀವನಧಾರಣೆಗಳ ತತ್ತ್ವನೇ ಪ್ರಾಣನೆಂದು ಹೇಳಿಸಿ ಕೊಳ್ಳುತ್ತದೆ. ಜೀವನ ಸಾರವೇ ಪ್ರಾಣ. ಪ್ರಾಣವಿರುವ ಕಾರಣದಿಂದಲೇ ಜೀವನನ್ನು 'ಪ್ರಾಣಿ' ಎಂದು ಕರೆಯುತ್ತಾರೆ. ಪ್ರಾಣವಿಲ್ಲದ ಪದಾರ್ಥ ಜಡ ವಾಗಿರುತ್ತದೆ. ದುಃಸ್ವಪ್ನ,ಬಾರಿಬಾರಿಗೂ ಗಾಬರಿಯಾಗುವುದು ಚಿಂತಾತುರ ನಾಗುವುದು, ಆಗಾಗ ಧೈರ್ಯ ಕಳೆದುಕೊಳ್ಳುವುದು, ನಿರಾಶಾಮಯವಾದ ಭವಿಷ್ಯ ಕಲ್ಪನೆಮಾಡಿಕೊಳ್ಳುವುದು, ಭಯ ಮತ್ತು ಅನಿಷ್ಟಗಳ ಭಾವನೆ ಗಳು ಅಕಾರಣವಾಗಿ ಬಾಧಿಸುವುದು, ಇದರಿಂದ ಮುಂದೇನು ಎಂಬ ಚಿಂತೆ ಯಾಗುವುದು, ಬಾಹ್ಯಾಭ್ಯಂತರ ದೃಷ್ಟಿಗಳಿಂದಲೂ ನಿರ್ಬಲನಾಗಿರುವವ ನನ್ನು 'ನ್ಯೂನ ಪ್ರಾಣ'ನೆಂಗು ಕರೆಯುತ್ತಾರೆ. ಈ ಕಾರಣಗಳಿಂದಾಗಿ

ಆತನ ಜೀವನದಲ್ಲಿ ವ್ಯವಸ್ಥೆಯು ಸರಿಯಾಗಿ ಆಗದೆ ಅವನು ಅಸಫಲತೆಗೆ ಈಡಾಗುತ್ತಾನೆ.

ಪ್ರಾಣವಂತನ ಪರಿಸ್ಥಿತಿ ಇದಕ್ಕಿಂತ ಭಿನ್ನವಾದುದು. ಆತನ ನಾಳನಾಳಗಳಲ್ಲಿ ಉತ್ಸಾಹವಿರುತ್ತದೆ, ಮನಸ್ಸಿನಲ್ಲಿ ಹೊಸಹೊಸ ಭಾವನಾತರಂಗಗಳು ಏಳುತ್ತಿರುತ್ತವೆ. ಹೃದಯದಲ್ಲಿ ದೃಢತೆ, ಸಾಹಸ, ಧೈರ್ಯಗಳು ಪ್ರತಿಫಲಿತವಾದಂತೆ ಕಾಣುತ್ತವೆ. ಆತನು ತನ್ನ ಪ್ರಾಣಶಕ್ತಿಯ ಬಲದಿಂದ ಒಳ್ಳೊಳ್ಳೆಯ ಅವಕಾಶಗಳನ್ನು ಹೊಂದುತ್ತಾನೆ.

ಮನುಷ್ಯನಲ್ಲಿ ಶಕ್ತಿ ಕೇವಲ ಮೂಳೆ, ಮಾಂಸ (ರಸ) ಮತ್ತು ರಕ್ತಗಳನ್ನು ಆಶ್ರಯಿಸದೆ, ಪ್ರಾಣವನ್ನು ಅವಲಂಬಿಸಿರುತ್ತದೆ. ಎಲ್ಲಾ ಬಗೆಯ ಭೌತಿಕ ಶಕ್ತಿಗಳೂ ಪ್ರಾಣದ ಒಳಗೇ ಸೇರಿರುವುದೇ ಇದಕ್ಕೆ ಕಾರಣ. ಅಧಿಕ ಬಲವುಳ್ಳದ್ದೂ, ಸುರಕ್ಷಿತವೂ, ಆದ ಪ್ರಾಣವುಳ್ಳವನು ಪುರುಷಾರ್ಥಿಯೂ ಶಕ್ತಿಶಾಲಿಯೂ ಆಗಿ, ತನ್ನ ಪ್ರಯತ್ನಗಳಲ್ಲಿ ಜಯವನ್ನು ಪಡೆಯುವವನು ; ಅವುಗಳ ಮುಖಾಂತರ ಬಾಹ್ಯಾಭ್ಯಂತರ ಸುಖಗಳನ್ನು ಹೊಂದುವವನು.

ಈ ಪ್ರಾಣರಕ್ಷಣೆ ಗಾಯತ್ರಿಯಿಂದ ಹೇಗಾಗುವುದು ? ಇದರ ವಿವರಣೆ ಹೀಗಿದೆ: ತತ್ತ್ವಾತತ್ತ್ವದ, ಸತ್ಯಾಸತ್ಯದ, ಶ್ರೇಯಸ್ಸಿನ–ಅಶ್ರೇಯಸ್ಸಿನ ಅಂತರವನ್ನು ಯಾವ ಬುದ್ಧಿಯು ನಿರ್ಣಯಿಸುವುದೋ, ನಾವು ಏನು ಮಾಡಬೇಕು, ಏನು ಮಾಡಬಾರದು ಎಂಬುದರ ನಿರ್ಣಯದಿಂದ ಅಂತಃಪ್ರಕಾಶದ ಆಧಾರದಮೇಲೆ ಯಾವ ಋತಂಭರ ಪ್ರಜ್ಞೆಯು ಮೂಡುವುದೋ ಅದೇ ಗಾಯತ್ರೀ. ಯಾವ ಬುದ್ಧಿಯು ಸತ್ತ್ವಗುಣಗಳಿಂದ—ದೈವಿಕತ್ತ್ವಗಳಿಂದ ಓತಪ್ರೋತವಾಗಿರುತ್ತದೆಯೋ, ಹೆಜ್ಜೆ ಹೆಜ್ಜೆಗೂ ಚಿರಕಲ್ಯಾಣ ದರ್ಶನ ಮಾಡಿಸುವ ಮಾರ್ಗಾನುಸರಣೆಯ ಪ್ರೇರೇಪಣೆ ಯಾವ ಬುದ್ಧಿಯಿಂದ ಆಗುವುದೋ, ಆ ಬುದ್ಧಿಗೆ ಗಾಯತ್ರೀ ಎಂದು ಹೆಸರು. ಅದರಲ್ಲಿ ಹೆಜ್ಜೆ ಹೆಜ್ಜೆಗೂ ಆನಂದದ ಸಂಚಾರವಾಗುತ್ತದೆ. ಸಾತ್ತ್ವಿಕ ವಿಚಾರ ಕಾರ್ಯವನ್ನೇ ತನ್ನದಾಗಿಸಿ ಅನುಸರಿಸುವುದರಿಂದ, ಮನುಷ್ಯನ ಪ್ರಾಣಶಕ್ತಿಯ ರಕ್ಷಣೆಯೂ, ವೃದ್ಧಿಯೂ ಆಗುತ್ತದೆ. ಆತನ ಪ್ರತಿಯೊಂದು ಕೆಲಸವೂ ಆತನನ್ನು ಹೆಚ್ಚು ಪುಷ್ಟನನ್ನಾಗಿಯೂ, ಸಶಕ್ತ–ಸದೃಢನನ್ನಾಗಿಯೂ ಮಾಡುತ್ತದೆ.

ತಮಸ್ಸಾಚ್ಛಾದಿತ ಬುದ್ಧಿಯಿಂದ ಉತ್ಪನ್ನವಾದ ವಿಚಾರಗಳು ಮತ್ತು ಕಾರ್ಯಗಳು ನಮ್ಮ ಪ್ರಾಣಶಕ್ತಿಯನ್ನು ದಿನದಿನಕ್ಕೂ ಕುಗ್ಗಿಸುತ್ತವೆ.

ಭೋಗಪ್ರಧಾನ ಕಾರ್ಯಗಳಿಂದ ಶರೀರವು ದಿನದಿನಕ್ಕೆ ಕ್ಷೀಣಿಸುತ್ತದೆ. ಸ್ವಾರ್ಥ ಪ್ರಧಾನ ವಿಚಾರಗಳಿಂದ ಮನಸ್ಸು ದಿನೇದಿನೇ ಪಾಪದ ಕೆಸರಿನಲ್ಲಿ ಸಿಕ್ಕಿಬೀಳುತ್ತದೆ. ಈ ರೀತಿಯಾಗಿ ಜೀವನವೆಂಬ ವಸ್ತ್ರದಲ್ಲಿ ಅಸಂಖ್ಯಾತ ರಂಧ್ರಗಳಾಗುತ್ತವೆ. ಮಾಡುವುದೆಲ್ಲಾ ಜರಡಿಯಲ್ಲಿ ಕರೆದ ಹಾಲಿನಂತೆ ಸ್ವಲ್ಪವೂ ನಿಲ್ಲದೆ ನಷ್ಟವಾಗುತ್ತದೆ. ತೃಷ್ಣೆ, ಸ್ವಾರ್ಥಪರತೆ, ಭಯ, ಅಹಂಕಾರ, ಲೋಭ, ಮುಂತಾದ ಕಾರಣಗಳಿಂದ ಚಿತ್ತವು ದುಃಖಿತವಾಗುತ್ತದೆ. ಮಾನಸಿಕ ಶಕ್ತಿ ಹಾಳಾಗುತ್ತದೆ. ಇದರಿಂದ ಪ್ರಾಣವು ನಿರ್ಬಲವಾಗುತ್ತದೆ.

ಸತ್ವಗುಣ ಸಂಪನ್ನವಾದ ಹಾಗೂ ಋತಂಭರವಾದ ವಿವೇಕ ಬುದ್ಧಿಯು ನಮ್ಮ ಆಹಾರ–ವಿಹಾರಗಳನ್ನು ಸಾತ್ತ್ವಿಕವಾಗಿಸುತ್ತವೆ. ಸಂಯಮ, ಬ್ರಹ್ಮಚರ್ಯ, ಅಸ್ವಾದ, ಶ್ರಮಶೀಲತೆ, ಸರಳತೆ ಮತ್ತು ಸ್ವಾಭಾವಿಕ ದಿನಚರ್ಯೆಗಳಿಂದಾಗಿ ಬಲ–ವೀರ್ಯಗಳ ವೃದ್ಧಿಯಾಗುತ್ತದೆ. ಶರೀರದಲ್ಲಿ ಸಕ್ರಿಯತೆ ಹೆಚ್ಚುತ್ತದೆ. ದೀರ್ಘಾಯುಸ್ಸು ಲಭಿಸುತ್ತದೆ. ಮನಸ್ಸಿನಲ್ಲಿ ಅಪರಿಗ್ರಹ, ಪರಮಾರ್ಥ, ಸೇವೆ, ತ್ಯಾಗ, ಸಹಿಷ್ಣುತೆ, ತಿತಿಕ್ಷೆ, ದಯೆ, ಸಹಾನುಭೂತಿ, ಮೈತ್ರಿ, ಕರುಣೆ, ನಮ್ರತೆ, ನಿರಹಂಕಾರ, ಧರ್ಮ ಬುದ್ಧಿ, ಶ್ರದ್ಧೆ, ಈಶ್ವರ ಪರಾಯಣತೆ—ಮುಂತಾದ ಭಾವನೆಗಳು ಇರುವೆಡೆಯಲ್ಲಿ ಪರಮಾಣುಗಳು ಸದಾ ಪ್ರಫುಲ್ಲ ಮತ್ತು ಚೈತನ್ಯಯುತವಾಗಿದ್ದು, ವಿಕಾಸಹೊಂದುತ್ತಿರುತ್ತವೆ. ಈ ರೀತಿಯಾಗಿ ಶರೀರ–ಮನಸ್ಸುಗಳ ಸುಭದ್ರತೆಯೂ ಹಾಗೂ ಬುದ್ಧಿಯೂ, ಸಾತ್ತ್ವಿಕ ಉನ್ನತಿಯ ಕಾರಣದಿಂದ ಲಭಿಸಿದ ಶಕ್ತಿಯೂ ಹಾಳಾಗದೆ ಉತ್ತರೋತ್ತರವಾಗಿ ವೃದ್ಧಿ ಹೊಂದುತ್ತವೆ. ಆದರಿಂದ ಗಾಯತ್ರಿಯು ಸದ್ಬುದ್ಧಿ ಪ್ರದಾನ ಮಾಡುತ್ತಾ, ನಮ್ಮ ಪ್ರಾಣ ರಕ್ಷಣೆಗೆ ಕಾರಣಳಾಗುತ್ತಾ, ತನ್ನ ಹೆಸರನ್ನು ಸಾರ್ಥಕಪಡಿಸಿಕೊಳ್ಳುತ್ತಾಳೆ. ಆ ಶಕ್ತಿಯಲ್ಲಿ ಸಮಸ್ತ ಭೌತಿಕ ಮತ್ತು ಆಧ್ಯಾತ್ಮಿಕ, ಆನಂದ ಪ್ರವಾಹಗಳ ಬಾಗಿಲು ತೆರೆದಿದೆ. ಅದು ಮುಚ್ಚಿಹೋಗಿರುವ ನಮ್ಮ ವಿವೇಕದ ಮೂರನೆಯ ಕಣ್ಣನ್ನು ತೆರೆಯಿಸುತ್ತದೆ. ಆ ಕಣ್ಣಿಗೆ ಜ್ಯೋತಿಯನ್ನೂ, ಸಂಸಾರವನ್ನು ವಿವೇಕದೃಷ್ಟಿಯಿಂದ ನೋಡುವ ಹಾಗೂ ಜೀವನದ ಲಕ್ಷ್ಯವನ್ನು ಹೊಂದುವುದಕ್ಕೆ ಬೇಕಾಗುವ ಯೋಗ್ಯತೆಯನ್ನೂ ಕೊಡುತ್ತದೆ. ವೇದ ಜನನಿಯಾದ ಗಾಯತ್ರಿಯು ವಿಶ್ವದ ಸಮಸ್ತ ಶ್ರೇಷ್ಠಶಕ್ತಿಗಳನ್ನು ಉತ್ಪನ್ನ ಮಾಡುತ್ತಾಳೆ ಮತ್ತು ಅವುಗಳು ದಿವ್ಯಕಾಂತಿಯಿಂದ ಬೆಳಗುವಂತೆ

ಮಾಡುತ್ತಾಳೆ.

ಗಾಯತ್ರಿಯು ಸವಿತೃದೇವತಾತ್ಮಕವಾದ ಒಂದು ಮಂತ್ರ. ವಿಶ್ವಾಮಿತ್ರ ಋಷಿಯು ಈ ಮಂತ್ರದ ದ್ರಷ್ಟಾರ, ಅಂದರೆ ಅದನ್ನು ಮೊದಲು ಕಂಡವನು. ವ್ಯಾಹೃತಿಸಹಿತವಾದ ಈ ಮಂತ್ರವು ಯಜುರ್ವೇದ(೩೬-೩)ದಲ್ಲಿ ಬರುತ್ತದೆ. ವ್ಯಾಹೃತಿ ಇಲ್ಲದ ಮೂಲ ಮಂತ್ರವು ಅನೇಕ ಕಡೆ ಬರುತ್ತದೆ. ಅಂದರೆ ಋಗ್ವೇದ (III ೬೨-೧೦), ಸಾಮವೇದ(೨-೮೧೨), ಶುಕ್ಲಯಜುರ್ವೇದ (೩-೩೫), ಕೃಷ್ಣಯಜುರ್ವೇದ(೧-೫, ೬-೪)ಗಳಲ್ಲಿಯೂ, ಹಾಗೂ ತೈತ್ತಿರೀಯ, ಬ್ರಾಹ್ಮಣ, ಆರಣ್ಯಕ ಮತ್ತು ಉಪನಿಷತ್ತುಗಳಲ್ಲಿಯೂ ಪುನರುಚ್ಚರಿತವಾಗಿದೆ. ಯಜುರ್ವೇದದಲ್ಲಿ XXX-೭ನೇ ಭಾಗದಲ್ಲಿ ಬರುವ ಗಾಯತ್ರೀಮಂತ್ರಕ್ಕೆ ನಾರಾಯಣ ಋಷಿಯಾದರೆ ಉಳಿದ ಎಲ್ಲಾ ಭಾಗ ಗಳಲ್ಲಿ ಬರುವ ಮಂತ್ರಕ್ಕೆ ವಿಶ್ವಾಮಿತ್ರರು ಋಷಿ. ಈ ಬ್ರಹ್ಮರ್ಷಿಯ ಮೂಲಕ ಭೂಲೋಕಕ್ಕೇ ಜ್ಞಾನಗಂಗೆಯಾಗಿ ಪ್ರವಹಿಸಿಬಂದ ಈ ಗಾಯತ್ರೀ ಮಂತ್ರವು ಬ್ರಾಹ್ಮಣನಿಗೆ ಸಕಲ ಸಿದ್ಧಿಗಳನ್ನು ನೀಡಬಲ್ಲುದು. ಇದನ್ನು ಎಂದೂ, ಯಾರೂ ಬರೆಯಲಿಲ್ಲ, ಸೃಷ್ಟಿಸಲಿಲ್ಲ. ಸೃಷ್ಟಿಯು ಹೇಗೆ ಸನಾ ತನವೋ ಹಾಗೆಯೇ ಗಾಯತ್ರಿಯೂ ಆದ್ಯಂತವಿಲ್ಲದೆ ಇದೆ. ಗಾಯತ್ರಿ ಯಲ್ಲಿ ಏನಿದೆ? ಇದು ಜಿಜ್ಞಾಸುಗಳ ಸಮಸ್ಯೆ. ಇದಕ್ಕೆ ಉತ್ತರ: ಅದರಲ್ಲಿ ಏನಿಲ್ಲ—ಎಂಬುದೇ. ಸರ್ವತತ್ತ್ವಗಳೂ ಗಾಯತ್ರಿಯ ಗರ್ಭದಲ್ಲಿ ಅಡಗಿವೆ. ಅವುಗಳನ್ನು ಕಾಣುವ ದೃಷ್ಟಿ ಬೇಕು; ಚಾಚುವ ಬಾಹುಗಳು ಬೇಕು; ಭರಿಸುವ ವಿಶಾಲ ಹೃದಯ ಬೇಕು. ಗಾಯತ್ರೀ ಹೇಳದೇ ಇರುವುದು ಯಾವುದೂ ಇಲ್ಲ. ಸಕಲ ಶಾಸ್ತ್ರಗಳ ಸಾರಸರ್ವಸ್ವವೇ ಗಾಯತ್ರೀ. ಸಮಸ್ತ ಪ್ರಮೇಯಗಳ ಆಕರವಿದು. ಈ ಗಣಿಯಿಂದ ಸುವರ್ಣವನ್ನು ಅಗೆದು ತೆಗೆಯಬೇಕು ಅಷ್ಟೇ. ಈ ಭವ್ಯ-ದಿವ್ಯ-ಪ್ರಾಚೀನವಾದಷ್ಟೂ ನವ್ಯ ಈಶ್ವರೀಯ ಭಂಡಾರದ ಬೀಗದ ಕೈ ಈ ಗಾಯತ್ರೀ.

ವೇದಗಳಲ್ಲಿ ಬೆಳಗುವ ವಿದ್ಯಾಜ್ಯೋತಿಗಳಲ್ಲಿ ಗಾಯತ್ರೀ ತತ್ತ್ವವು ಪರಮಾದ್ಭುತವಾದ ಏಕೈಕ ಸಾಧನ. ಗಾಯತ್ರೀ ಪ್ರಭಾವವು ವಿಶೇಷವಾಗಿ ಬುದ್ಧಿ ತತ್ತ್ವದ ಮೇಲೆ ಉಂಟಾಗಿ ಸಂಪೂರ್ಣ ಜೀವನವು ಪುರುಷಾರ್ಥದ ಹಾದಿಯಲ್ಲಿ ನೆಲೆಗೊಳ್ಳುತ್ತದೆ.

ವೇದಮಂತ್ರಗಳಲ್ಲಿ 'ಇದು ಶ್ರೇಷ್ಠ' 'ಇದು ಕನಿಷ್ಠ' ಎಂಬ ಭೇದಭಾವ ಕಲ್ಪಿಸುವುದು ಸರಿಯಲ್ಲ. ಹಾಗಾದರೂ, ಸಾಧಕರ, ಸಾಧನಾಸೌಕರ್ಯದ,

ಸಾಧನಾವಿಷಯದ, ದೃಷ್ಟಿಯಿಂದ ಈ ಮಂತ್ರಕ್ಕೆ ಬಹಳ ಪ್ರಾಧಾನ್ಯತೆ ಇದೆ. ಇದು ಪ್ರಾರ್ಥನಾರೂಪವಾದ ಒಂದು ಮಂತ್ರ. ಆದರೆ ಇದನ್ನು ಇತರ ಪ್ರಾರ್ಥನೆಗಳಿಗೆ ಹೋಲಿಸಿದಾಗ ಗಾಯತ್ರಿಯಲ್ಲಿ ಕಂಡುಬರುವ ಅಸಮಾನ ವಾದ ವೈಶಿಷ್ಟ್ಯವೆಂದರೆ ಇದು ಪರಿಪೂರ್ಣ ಜ್ಞಾನವನ್ನು ಬಯಸುವ ಒಬ್ಬ ಯೋಗಿಯ ಪ್ರಾರ್ಥನೆಯಂತಿದೆ. ಈ ಮಂತ್ರವು ಸಾಮಾನ್ಯ ಮನುಷ್ಯನು ಬಯಸಬಹುದಾದ ಕಾಮನೆಗಳನ್ನು ಹೇಳುವುದಾಗಲೀ, ಕೇಳುವುದಾಗಲೀ, ಮಾಡುವುದಿಲ್ಲ. ಇದು ನಿಷ್ಕಾಮನೂ, ಆಪ್ತಕಾಮನೂ, ಪರಿಪೂರ್ಣ ಕಾಮನೂ ಆದ ಒಬ್ಬ ಯೋಗಿಗೆ ಕಾಣುವ ಅಂತಸ್ಸತ್ಯವನ್ನು ಹೇಳುತ್ತದೆ. ಅವನಲ್ಲಿ ಈ ಪರಿಪೂರ್ಣ ಸತ್ಯವನ್ನು ಕಂಡಾಗ ಉಂಟಾಗುವ ಆನಂದ, ಅಮೃತ, ಜ್ಞಾನ ಇವುಗಳನ್ನು ಹೇಳುವುದರ ಮೂಲಕ ಮನುಷ್ಯನು ಏನನ್ನು ಸಾಧಿಸಬೇಕು ; ಏನನ್ನು ಸಾಧಿಸಿದರೆ ಅವನ ಜೀವನವು ಪರಿಪೂರ್ಣವಾಗು ತ್ತದೆ ಎಂಬುದನ್ನು ಸೂಚಿಸುತ್ತದೆ. ಅಂತಹ ಉತ್ಕೃಷ್ಟವಾದ ಬೆಳವಣಿಗೆ ಉಂಟಾದಾಗ ಅರಿವಿಗೆ ಬರುವ ವಿಜ್ಞಾನದೃಷ್ಟಿಯನ್ನೂ ಸಹ ಇದು ಒಳಗೊಂಡಿರುತ್ತದೆ. ಇದೇ ಇದರ ಪರಮ ಶ್ರೇಷ್ಠತೆ. ಇದರಲ್ಲಿ ತತ್ತ್ವಜ್ಞಾನ ವಿದೆ, ಆತ್ಮಜ್ಞಾನವಿದೆ. ಆತ್ಮಜ್ಞಾನ ಉಂಟಾದಾಗ ಮಾನವನಲ್ಲಿ ಮೂಡಿ ಬರುವ ಪ್ರಕಾಶ, ಆನಂದ ಮತ್ತು ಅಮೃತತತ್ತ್ವಗಳನ್ನು ಇದು ಹೇಳುತ್ತದೆ ಮತ್ತು ಅವುಗಳನ್ನು ಪಡೆಯುವ ಸಾಧನವೂ ಆಗಿರುತ್ತದೆ. ಆದುದರಿಂದಲೇ ಇದಕ್ಕೆ ಸರಿಸಮಾನವಾದ ಪ್ರಾರ್ಥನೆ ಬೇರೆಲ್ಲಿಯೂ ಇಲ್ಲ ; ಬೇರಾವುದೂ ಇಲ್ಲ. ಇದು ಈ ರೀತಿ ಮಹಾರ್ಥಗರ್ಭಿತವಾಗಿರುವುದರಿಂದಲೇ ನಮ್ಮ ದೇಶದಲ್ಲಿ ಅನಾದಿಕಾಲದಿಂದ ಬ್ರಹ್ಮಜ್ಞಾನಿಗಳ ಪರಮಾದರಕ್ಕೆ ಪಾತ್ರ ವಾಗಿದೆ ; ವಿಷಯವಾಗಿದೆ. ಇದು ಆಧ್ಯಾತ್ಮಿಕ ದೃಷ್ಟಿಯಿಂದ ಜ್ಞಾನದ ಕಟ್ಟ ಕಡೆಯ ಹಂತವನ್ನು ತೋರಿಸುತ್ತದೆ. ತಿಳಿವಳಿಕೆಯಲ್ಲಿ, ಉತ್ಕರ್ಷೆಯಲ್ಲಿ ಮತ್ತು ಸಾಧನೆಯಲ್ಲಿ ಯಾವುದೂ ಗಾಯತ್ರಿಗಿಂತ ಮಿಗಿಲಾಗಲಾರದು. ಇದು ಮಾನವನ ಪರಿಪೂರ್ಣತೆಯ ಕುರುಹು. ಯಾವ ಧರ್ಮವೂ ಗಾಯತ್ರಿಗಿಂತ ಮಿಗಿಲಾದ ಧರ್ಮವನ್ನು ಪ್ರತಿಪಾದಿಸಲಾರದು. ಇದು ಮಾನವನ ಶಾಂತಿ, ತೃಪ್ತಿ, ನೆಮ್ಮದಿಗಳೆಲ್ಲಕ್ಕೂ ಕೀಲಿ (ಬೀಗದ ಕೈ). ವಿಶ್ವಮೂಲವಾದ ಜ್ಯೋತಿಯನ್ನು ಹೃದಯದಲ್ಲಿ ಪ್ರತ್ಯಕ್ಷಮಾಡಿಕೊಳ್ಳಲು ಗಾಯತ್ರೀ ಮಂತ್ರವು ಏಕಮಾತ್ರ ಸಾಧನ. ಅಜ್ಞಾನಾಂಧಕಾರದಲ್ಲಿ ಬಿದ್ದವ ನಲ್ಲಿ, ಮೃತಪ್ರಾಯನಾದವನಲ್ಲಿ ಪ್ರೇರಣಾಪೂರ್ವಕ ಚೈತನ್ಯವನ್ನು

ಮೂಡಿಸುವ ಶಕ್ತಿ ಈ ಮಂತ್ರಕ್ಕಿದೆ.

ವಸ್ತುತಃ ಈ ಮಂತ್ರದಲ್ಲಿರುವುದು ಪ್ರಾರ್ಥನೆಯಲ್ಲ; ಸಾಧಕರ ದೃಢ ಸಂಕಲ್ಪ. ಭಗವಂತನ ಪಾಪಬೀಜ ಪ್ರವಾಹಕ ಜ್ಯೋತಿಯನ್ನು ತಾವೇ ಧರಿಸಿಕೊಳ್ಳಬೇಕೆಂಬ ಸ್ಥಿರವಾದ ವ್ರತ. "ಪರಮಾತ್ಮಾ! ನಿನ್ನ ಜ್ಯೋತಿಯನ್ನು ನಾವು ಧರಿಸುತ್ತೇವೆ" ಎನ್ನುವುದರಲ್ಲಿ ಸಾಧಕರ ಸಾಧನಾಸಂಕಲ್ಪ ಅಧಿಕವಾಗಿದೆ. ಸರ್ವೇಶ್ವರನ ಸರ್ವಪಾಪವಿಧ್ವಂಸಕವಾದ ಸಮಸ್ತ ಸದ್ವೃತ್ತಿಗಳಿಗೂ ಸತತ ಸ್ಫೂರ್ತಿ ಸಲ್ಲಿಸುವ ಸರಸ ಸುಂದರ ಸದ್ಯುತಿಯ ಸ್ಮರಣ ಮಾತ್ರವಲ್ಲ; ಸಿದ್ಧಿಗಾಗಿ ಸೆಣಸುವ ಸಾಧಕರ ಸಾಧನಾ ಸೌಂದರ್ಯದಲ್ಲಿ ಸ್ವ-ಸಂಕಲ್ಪದ ಸು-ಸಂಕಲ್ಪದ ಸಂಪತ್ತು ಸ್ವತಃ ಎದ್ದು ಕಾಣುತ್ತದೆ. ಈ ಮಂತ್ರದ ಮೌಲಿಕ ವೈಶಿಷ್ಟ್ಯವೆಂದರೆ 'ದೇವರೇ! ನಮಗೆ ಅದನ್ನು ಕೊಡು, ಇದನ್ನು ಕೊಡು' ಎಂದು ಕೇವಲ ಹೇಳಿಕೆಗಳನ್ನು ಮಂಡಿಸದೆ, ದೇವರೇ ನಮ್ಮ ಬಳಿಗೆ ಇಳಿದು ಬರಲಿ—ಎಂದು ಆಶಿಸದೆ, ಸ್ವತಃ ಸಾಧಕರೇ ಜೀವನವನ್ನು ಮಾನವೀಯ ದೃಷ್ಟಿಯಿಂದ ಸಮೃದ್ಧವಾಗಿ ಮಾಡಿಕೊಳ್ಳಲು ಬೇಕಾಗುವ ಸಾಮಗ್ರಿಗಳನ್ನು ಸಂಪಾದಿಸಿಕೊಳ್ಳಲು ಅವಶ್ಯಕವಾದ ಸಾಮರ್ಥ್ಯವನ್ನು, ಮತಿಶುದ್ಧಿ–ಕೃತಿಶುದ್ಧಿಯನ್ನು ತಮ್ಮಲ್ಲಿಯೇ ಬೆಳೆಸಿಕೊಳ್ಳುವ ಹಂಬಲವನ್ನು ಚಿತ್ರಿಸುತ್ತದೆ. 'ನನಗೆ ಕೊಡು' ಎಂಬುದರಲ್ಲಿ ಪ್ರಾರ್ಥಿಸುವ ಸಾಧಕ ತನ್ನ ಅರ್ಹತ್ವದ ಬಗ್ಗೆ ಯೋಚಿಸುವುದಿಲ್ಲ. 'ತನ್ನಲ್ಲಿ ಉಂಟುಮಾಡು' ಎಂದಾಗ ಸಾಧಕ ತನ್ನ ಯೋಗ್ಯತೆಯ ಕಡೆಗೆ ದೃಷ್ಟಿ ಬೀರುತ್ತಾನೆ. ತನ್ನ ಪಾತ್ರತ್ವದ ಸ್ತರವನ್ನು ನಿರೀಕ್ಷಿಸಿ 'ದೇಹಿ' ಎನ್ನುವುದರ ಬದಲು 'ಧೇಹಿ' ಎಂದರೆ ಆತ್ಮವಿಶ್ವಾಸದತ್ತ ಹೆಚ್ಚು ಗಮನವಿತ್ತಂತೆ ಆಗುತ್ತದೆ. ಬೇರೆ ಬೇರೆ ಪ್ರಾರ್ಥನೆಗಳಲ್ಲಿ ಭಗವಂತನ ಉನ್ನತ ಸ್ತರದಿಂದ ನಮ್ಮ-ನಿಮ್ಮ ಸ್ತರಕ್ಕೆ ಭಗವತ್ಪ್ರದತ್ತ ವರಗಳು ಇಳಿದುಬರುವಂತೆ ಕಂಡರೆ ಗಾಯತ್ರಿಯಲ್ಲಿ ನಾವೇ ಭಗವಂತನ ಸ್ತರಕ್ಕೇರಿ ಅವನಿಂದ ವರಗಳನ್ನು ಪಡೆಯಲು ಬೇಕಾದ ಅರ್ಹತೆಯನ್ನು ಬೆಳೆಸಿಕೊಳ್ಳುತ್ತಿದ್ದೇವೆ ಎಂಬ ಆಧ್ಯಾತ್ಮಿಕ ಔನ್ನತ್ಯ ಕಾಣುತ್ತದೆ. ಆಧ್ಯಾತ್ಮಿಕ ವಿಕಾಸವೆಂದರೆ ಆತ್ಮನ ಉತ್ಥಾನ. ಆ ಉತ್ಥಾನದ ನಿಶ್ಚಿತ ಸಾಧನೆ ಈ ಪವಿತ್ರ ಗಾಯತ್ರೀ. ಗಾಯತ್ರೀ ಉಪಾಸಕನು ಮೇಲಿನಿಂದ ಫಲ ಕೆಳಕ್ಕೆ ಉದುರಲಿ—ಎಂದು ಆಶಿಸದೆ, ತಾನೇ ಆಧ್ಯಾತ್ಮಿಕ ವಿಕಾಸ ಹೊಂದಿ ಮೇಲೇರುತ್ತಾನೆ. ಈ ದೃಷ್ಟಿಯಿಂದ ಗಾಯತ್ರೀ, ಸಾಧಕರನ್ನು ಆಧ್ಯಾತ್ಮಿಕ ದೃಷ್ಟಿಯಿಂದ ಭಗವಂತನ

ಸ್ಫುರದತ್ತ ಏರಿಸುತ್ತದೆ. ಈ ಮಂತ್ರದ ಸಾಧಕ ಸರ್ವಪ್ರಥಮ, ಆ ಸರ್ವ ಪಾಪ ವಿಧ್ವಂಸಕ, ಪಾವನಕರ ದಿವ್ಯ ವರ್ಚಸ್ಸನ್ನು ತನ್ನ ಜೀವನಕ್ಕಿಳಿಸಿ ಕೊಂಡು ಮನಶ್ಶುದ್ಧಿಗೆ ಯತ್ನಿಸುತ್ತಾನೆ. ಆಮೇಲೆ ತನ್ನ ಬುದ್ಧಿ ಕರ್ಮಗಳು ಸನ್ಮಾರ್ಗದಲ್ಲಿ ನಡೆಯುವಂತೆ ಪ್ರೇರಿಸು–ಎಂದು ಕೇಳಿಕೊಳ್ಳುತ್ತಾನೆ. ಈ ಬಗೆಯ ಪ್ರಾರ್ಥನೆಯು ಮಹತ್ವ ವಸ್ತುತಃ ಅಸದೃಶವೇ ಸರಿ. ಗಾಯತ್ರಿಯು ಮಾರ್ಗ ಉತ್ಕರ್ಷದ ಮಾರ್ಗ–ಉತ್ಥಾನದ ಪ್ರಶಸ್ತಿ ಪಥ.

ಗಾಯತ್ರೀ ಮಂತ್ರದ ಉಪಯೋಗ ಸಾಮಾನ್ಯ ಅರ್ಥದಲ್ಲಿಯೂ ಕೂಡ ಲೌಕಿಕ ಭಾಗ್ಯವನ್ನು ಬೇಡಲಿಕ್ಕಲ್ಲ; 'ಧೀಃ' ಶಕ್ತಿಯನ್ನು ಪ್ರಚೋದಿಸ ಲಿಕ್ಕೆ. ಅದರ ಪರ ಅರ್ಥ ಪರಮಾತ್ಮನೂ, ಜೀವಾತ್ಮನೂ ಒಂದೇ ಎಂಬ 'ಸೋಹಂ' ಭಾವದ ಅರಿವಿನ ಅನುಭವ ಪಡೆಯಲಿಕ್ಕೆ. ಇದು ವೇದಮಂತ್ರ ವಾದರೂ ಇತರ ವೇದಮಂತ್ರಗಳಂತೆ ಸಾಮಾನ್ಯಮಟ್ಟದ್ದಲ್ಲ. ವೇದಮಂತ್ರ ಗಳಲ್ಲಿ ಕೆಲವು ನಮ್ಮ ದೈನಂದಿನ ಪಾಪಗಳನ್ನು ಪರಿಹರಿಸುವುದಕ್ಕೂ; ಕೆಲವು ಗ್ರಹಚಾರ ದೋಷಗಳನ್ನು ನಿವಾರಿಸುವುದಕ್ಕೂ; ಕೆಲವುದೇವತೆಗಳ ಆವಾಹನೆ ಮತ್ತು ಸ್ತುತಿಗೆ ಮೀಸಲಾಗಿವೆ. ಆದರೆ ಗಾಯತ್ರೀಮಂತ್ರದ ಮಹಿಮೆ ಇರು ವುದು ಮುಖ್ಯವಾಗಿ ಅದು 'ಧೀಃ' ಶಕ್ತಿಯನ್ನು ಪ್ರೇರಿಸುವುದರಿಂದಾಗಿ. ಮೂಲತಃ ನಮಗೆ ಅಜ್ಞಾನಕ್ಕಿಂತ ದೊಡ್ಡ ಶತ್ರು ಬೇರಾವುದೂ ಇಲ್ಲ. ಅದ್ವೈತ ತತ್ತ್ವಾರ್ಥಗಳ ಎಲ್ಲಾ ಮಹಾನದಿಗಳೂ ಗಾಯತ್ರಿಯಲ್ಲಿ ಸಂಗಮ ವಾಗಿವೆ. ಇಲ್ಲಿ ಇರುವುದು ಬ್ರಹ್ಮವಿದ್ಯೆ. ಇದರ ಉಪಾಸನೆಯಿಂದ ಪ್ರಥಮ ವಾಗಿ ನಮ್ಮ ಕಶ್ಮಲಯುಕ್ತ ಬುದ್ಧಿಶಕ್ತಿಯು ಸ್ವಚ್ಛವಾಗುತ್ತಾ, ತೀಕ್ಷ್ಣ ವಾಗುತ್ತಾ ಹೋಗುವುದು. ತನ್ಮೂಲಕ, ತನ್ನ ಚಂಚಲ ಸ್ವಭಾವವನ್ನು ಕಳೆದುಕೊಂಡು ಏಕಾಗ್ರತೆ ಪಡೆಯುವುದು. ಅನಂತರ ಆಳಕ್ಕೆ ಹೋಗುವ ತೀಕ್ಷ್ಣತೆ ಬೆಳೆಯುವುದು: ನಂತರ ಚುರುಕಾಗಿ ಗ್ರಹಿಸುವ ಸಾಮರ್ಥ್ಯ ಬರುವುದು. ಇದು ಜೀವಾತ್ಮನನ್ನು ಪರಮಾತ್ಮನೆಡೆಗೆ ಒಯ್ಯುವ ಯೋಗ ಶಾಸ್ತ್ರ. ಇಲ್ಲಿ ಮುಖ್ಯವಾದ ನಾಲ್ಕು ಯೋಗಗಳೂ ಇವೆ. ಈ ಮಂತ್ರದ ಉಪಾಸನೆಯಿಂದ ಮರ್ತ್ಯ–ಅಮರ್ತ್ಯನಾಗುತ್ತಾನೆ; ಅಜ್ಞಾನಿ–ಜ್ಞಾನಿ ಯಾಗುತ್ತಾನೆ; ಪಾಪಿ-ಪುಣ್ಯವಂತನಾಗುತ್ತಾನೆ. ಇದೊಂದು ಅಲಭ್ಯಲಾಭ. ಗಾಯತ್ರೀ ಉಪಾಸನೆಯೆಂಬ ಈಜು ಕಲಿತರೆ ಭವಸಾಗರದಲ್ಲಿ ಮುಳುಗದೆ ದಡ ಸೇರಬಹುದು. ಗಾಯತ್ರಿಯನ್ನು 'ವೇದದ ಮುಖ'ವೆಂದು ತಿಳಿಯ ಬೇಕು.

ಗಾಯತ್ರೀ ಮಂತ್ರವು ರೂಪಾಂತರ ಹೊಂದದೆ ಎಲ್ಲಾ ವೇದಗಳಲ್ಲಿಯೂ ಒಂದೇ ರೀತಿಯಲ್ಲಿದೆ. ಋಗ್ವೇದ, ಯಜುರ್ವೇದ ಮತ್ತು ಸಾಮವೇದಗಳಿಗೆ ತ್ರಿಪಾದಾ ಗಾಯತ್ರಿಯಾದರೆ ಅಥರ್ವವೇದಕ್ಕೆ ಬೇರೆ ಗಾಯತ್ರೀ ಇದೆ. ಇದನ್ನು ಬೃಹದಾರಣ್ಯಕ ಉಪನಿಷತ್ತಿನಲ್ಲಿ ಕೊಟ್ಟಿದೆ (೧೪-೫). ಇದರಲ್ಲಿ ನಾಲ್ಕು ಪಾದದ ಗಾಯತ್ರಿಯನ್ನು ಹೇಳಿ 'ಪರೋರಜಸಿ ಸಾವದೋಂ' ಎಂಬುದೇ ನಾಲ್ಕನೆಯ ಪಾದ. (ಮುಂದೆ ವಿವರಿಸಿದೆ.) ಇದು ಪರಮಾತ್ಮ ನಲ್ಲಿದೆ. ಈ ಪಾದಕ್ಕೆ ಪರಮಾತ್ಮ ದೇವತೆ, ಮೋಕ್ಷ ವಿನಿಯೋಗ. ಇದಕ್ಕೆ ಪ್ರತ್ಯೇಕ ಉಪನಯನ ಬೇಕೆಂದು ಹೇಳುತ್ತಾರೆ. ಇದು ಸನ್ಯಾಸಿಗಳು ಮಾತ್ರ ಜಪಿಸಬೇಕೆಂದೂ ಸಹ ಹೇಳುತ್ತಾರೆ. ಈ ಪಾದದ ಮುಖ್ಯ ತತ್ತ್ವ ಈಶ್ವರ ಸೋಪಾನಕ್ಕೆ ಸೇರಿ ಬ್ರಹ್ಮಾಂಡದ ಸೃಷ್ಟಿ ಮತ್ತು ಲಯ ತತ್ತ್ವವಾಗಿ ಅಂತ್ಯ ದಲ್ಲಿ ಪರಬ್ರಹ್ಮ ಒಂದೇ ಇರುವ ತತ್ತ್ವವಾಗಿದೆ. ಈ ಪಾದದ ಉನ್ನತವಾದ ಅರ್ಥವನ್ನು ನೋಡಿದಾಗ ಇದು ಬಹಳ ಮುಂದುವರಿದ ಸಾಧಕರ ವಿಷಯ ವಾಗಿರುತ್ತದೆ ಎಂದು ಅರಿವಾಗುವುದು. ಬ್ರಹ್ಮಚಾರಿಗಳೂ, ಗೃಹಸ್ಥರೂ ತ್ರಿಪಾದ ಗಾಯತ್ರಿಯನ್ನೇ ಜಪಿಸಬೇಕೆಂದು ವೇದವು ವಿಧಿಸಿದೆ. ಉಪನಯನ ಕಾಲದಲ್ಲಿ ಮೊಟ್ಟಮೊದಲು ಉಪದೇಶಿಸುವ ಮಂತ್ರವೇ ಈ ತ್ರಿಪಾದ ಗಾಯತ್ರೀ. ಈ ಕಾಲದಲ್ಲಿ ಪ್ರಣವ ಸಹಿತ, ವ್ಯಾಹೃತಿಯಿಂದೊಡಗೂಡಿದ ಗಾಯತ್ರಿಯನ್ನು ಅರ್ಥಸಹಿತವಾಗಿ ವಟುವಿಗೆ ಪ್ರಪ್ರಥಮವಾಗಿ ಉಪದೇಶ ಮಾಡಬೇಕೆಂದು ಶಾಸ್ತ್ರಗಳು ಹೇಳುತ್ತವೆ.

ಗಾಯತ್ರಿಯು ವೈದಿಕ ಮಂತ್ರವಾಗಿದೆ. ಆದರಿಂದಲೇ ಈ ಉಪ ನಯನ ಸಂಸ್ಕಾರದಿಂದ ಜ್ಞಾನಮಯವಾದ ಎರಡನೆಯ ಜನ್ಮವು ಪ್ರಾಪ್ತ ವಾಗಿ ಗಾಯತ್ರೀ ಮಂತ್ರವನ್ನು ಪಡೆಯಲು ಅಧಿಕಾರ ದೊರೆಯುತ್ತದೆ. ನಿತ್ಯ-ನೈಮಿತ್ತಿಕ ಹಾಗೂ ಕಾಮ್ಯ ಕರ್ಮಗಳ ಸಿದ್ಧಿಯನ್ನು ಪಡೆಯಲು ಈ ಮಂತ್ರಕ್ಕಿಂತಲೂ ಶ್ರೇಷ್ಠವಾದ ಮತ್ತೊಂದು ಮಂತ್ರವಿಲ್ಲವೆಂದು ಹೇಳಬಹುದು. ಈ ಮಂತ್ರದ ಪ್ರಭಾವದಿಂದ ಸರ್ವವನ್ನು ಸಂಧಿಸಬಹುದು. ದ್ವಿಜನು ಕೇವಲ ಗಾಯತ್ರಿಯ ಉಪಾಸನೆಯೊಂದರಿಂದಲೇ ಸಿದ್ಧಿಯನ್ನೂ, ಮೋಕ್ಷವನ್ನೂ ಪಡೆಯಬಲ್ಲನು. ಯಾವನು ವ್ಯಾಹೃತಿ ಸಹಿತವಾದ ಮಂತ್ರ ವನ್ನು ಅರ್ಥಸಹಿತವಾಗಿ ಜಪಿಸುತ್ತ, ಅದರ ಮಹಿಮೆಯನ್ನು ತಿಳಿದು, ತನ್ನ ಬಾಳಿಗಿಳಿಸಿಕೊಂಡು, ಪ್ರಕಾಶಮಯನಾಗಿ ಬೆಳಗುತ್ತಾನೋ ಅತನೇ ಇತರರಲ್ಲಿರುವ ಅಜ್ಞಾನಾಂಧಕಾರವನ್ನು ಹೋಗಲಾಡಿಸಲು ಸಮರ್ಥ

ನಾಗುತ್ತಾನೆ. ಬ್ರಾಹ್ಮಣನಿಗೆ ಗಾಯತ್ರೀ ತಾಯಿಯಂತೆ. ಅವಳೇ ಅವನಿಗೆ ಸ್ವರೂಪದಾಯಿನಿ. ಇದನ್ನು ಅಧ್ಯಯನ ಮಾಡಿ ಅರ್ಥಮಾಡಿಕೊಳ್ಳದಿದ್ದರೆ ಆ ವಿದ್ಯೆ ಬೆಂಕಿ ಇಲ್ಲದಿರುವ ಕಡೆ ಇರುವ ಸೌದೆಯಂತೆ ಯಾವ ಬೆಳಕನ್ನೂ ಕೊಡಲಾರದು. ಆದರೆ ಕ್ರಮವಾದ ಅಭ್ಯಾಸವು ಮಾನವರಿಗೆ ಅಸಾಧ್ಯವನ್ನೂ ಸಾಧ್ಯವಾಗಿ ಮಾಡುತ್ತದೆ. ಎಲ್ಲಕ್ಕಿಂತ ಪುರುಷ ಪ್ರಯತ್ನವೇ ಪ್ರಬಲವಾದದ್ದು.

## ಉಪಾಸಿಸುವುದು ಯಾರನ್ನು ?

ನಾವು ಇಲ್ಲಿ ಉಪಾಸಿಸುವುದು ಗಾಯತ್ರೀ ಛಂದಸ್ಸನ್ನೋ ಅಥವಾ ದೇವತಾ ಶಕ್ತಿಯನ್ನೋ ಎಂಬ ಸಂದೇಹ ಕೆಲವರಲ್ಲಿ ಬರುವುದು ಸಹಜ. ಗಾಯತ್ರೀ ಛಂದಸ್ಸೂ ಹೌದು, ದೇವತಾರೂಪಿಯೂ ಹೌದು, ಮಂತ್ರರೂಪವೂ ಹೌದು. ಈ ಮಂತ್ರದ ಛಂದಸ್ಸು ಗಾಯತ್ರಿಯೇ ಆದರೂ ಇಲ್ಲಿ ನಿರ್ದೇಶಿಸುತ್ತಿರುವುದು ಗಾಯತ್ರೀ ಎಂಬ ದೇವತಾಶಕ್ತಿಯನ್ನು. ಗಾಯತ್ರೀ ಎಂಬ ಹೆಸರು ಛಂದಸ್ಸಿಗೆ ಮಾತ್ರವಾಗಿದ್ದದ್ದರೆ 'ಗಾಯತ್ರೀಮಾವಾಹಯಾಮಿ' ಎಂದು ಹೇಳುವ ವೇದವಾಕ್ಯದಂತೆ ಛಂದಸ್ಸನ್ನೇ ಆವಾಹನೆ ಮಾಡಿಕೊಳ್ಳಬೇಕಾಗುತ್ತದೆ. ಇದು ಹೇಗೆ ಸಾಧ್ಯ ? ಅಲ್ಲದೆ 'ಓಜೋಽಸಿ, ಸಹೋಽಸಿ– ದೇವಾನಾಂ ಧಾಮ ನಾಮಾಸಿ' ಎಂದು ಮುಂತಾಗಿ ಗಾಯತ್ರಿಯ ಅನೇಕ ಮಹಿಮೆಗಳನ್ನು ಹೇಳಿರುವುದು ಛಂದಸ್ಸಿಗೆ ಹೇಗೆ ಅನ್ವಯವಾಗಬಲ್ಲದು ? ಮತ್ತು 'ಗಾಯತ್ರ್ಯಾ ಗಾಯತ್ರೀ ಛಂದೋ' ಎಂದರೆ ಗಾಯತ್ರೀ ಮಂತ್ರಕ್ಕೆ ಗಾಯತ್ರೀ ಛಂದಸ್ಸೆಂಬುದಾಗಿ ವೇದವೇ ತಿಳಿಸುವಾಗ ಗಾಯತ್ರೀ ಎಂಬುದು ಛಂದಸ್ಸೆಂದು ಇಲ್ಲಿ ಹೇಳುವುದು ಸಮ್ಮತವಲ್ಲ. 'ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀಮಹಿ ತನ್ನೋರುದ್ರಃ ಪ್ರಚೋದಯಾತ್' ಇತ್ಯಾದಿ ಮಂತ್ರಗಳಿಗೆ 'ರುದ್ರ ಗಾಯತ್ರೀ, ಬ್ರಹ್ಮ ಗಾಯತ್ರೀ, ವಿಷ್ಣು ಗಾಯತ್ರಿ' ಮೊದಲಾದ ಆಯಾ ದೇವತಾನಾಮಗಳು ಬಂದಿವೆ. ಗಾಯತ್ರೀ ಮಂತ್ರದಲ್ಲಿ ಮಾತ್ರ ಯಾವ ಹೆಸರೂ ಬಂದಿಲ್ಲ, ಅಂದರೆ ಸಕಲದೇವತಾ ಮಂತ್ರಗಳೂ ಚಿದ್ವಸ್ತುವಾದ ಗಾಯತ್ರೀ ಮಂತ್ರದಲ್ಲಿ ಅಂತರ್ಭೂತವಾಗಿರುವುವು. ಇದರಿಂದ ಇಲ್ಲಿ ನಾವು ಗಾಯತ್ರೀ ದೇವತಾಶಕ್ತಿಯ ಭಾವನೆಯಿಂದಲೇ ಉಪಾಸಿಸಬೇಕೆಂಬುದು ವಿದಿತ. ಹಾಗೂ 'ಮುಕ್ತಾವಿದ್ರುಮ' ಎಂಬ

ಮಂತ್ರದ ತತ್ತ್ವದಲ್ಲಿಯೂ ಗಾಯತ್ರಿಯು ಸಕಲದೇವತಾಶಕ್ತಿಸ್ವರೂಪ ಳೆಂದು ಸ್ಪಷ್ಟವಾಗುವುದು. ಆಗ್ನೇಯ ಪುರಾಣ, ಕೂರ್ಮಪುರಾಣ, ವ್ಯಾಸ, ವಸಿಷ್ಠ, ಯಾಜ್ಞವಲ್ಕ್ಯ, ಋಷ್ಯಶೃಂಗ, ಮನು ಮುಂತಾದ ಮಹರ್ಷಿಗಳ ವಚನಗಳಿಂದಲೂ ಗಾಯತ್ರಿಯನ್ನು ಪರದೇವತೆ ಎಂಬ ಭಾವನೆಯಿಂದಲೇ ಉಪಾಸಿಸಬೇಕೆಂಬುದು ವ್ಯಕ್ತವಾಗುವುದು. ಸಂಧ್ಯಾವಂದನೆಯಲ್ಲಿ ಗಾಯತ್ರಿಯನ್ನು ಆಹ್ವಾನ ಮಾಡುವ 'ಆಯಾತುವರದಾದೇವೀ' ಎಂಬ, 'ಗಾಯತ್ರೀ ಮಾವಾಹಯಾಮಿ' ಮತ್ತು ಗಾಯತ್ರೀ ದೇವಿಯ ಇರುವಿಕೆ ಯನ್ನು ಪ್ರದರ್ಶಿಸುವ 'ಸವಿತಾದೇವತಾ' ಎಂಬ ವೇದಾಧಾರಗಳೂ ಇವೆ. ಉಪನಯನ ಕಾಲದಲ್ಲಿಯೂ 'ಹೇ ಭೋ ಸಾವಿತ್ರೀಮನುಬ್ರೂಹಿ' ಎಂಬು ದಾಗಿ ಗಾಯತ್ರೀ ಮಂತ್ರವನ್ನು ಉಪದೇಶಿಸಬೇಕೆಂದು ವಟುವು ಕೇಳ ಕೊಳ್ಳುತ್ತಾನೆ. ಅದು ಗಾಯತ್ರೀ ಎಂಬ ಶಕ್ತಿದೇವತೆಯ ಉಪದೇಶವಲ್ಲದೆ ಅನ್ಯಥಾ ಅಲ್ಲ. ಗಾಯತ್ರಿಯು ಯಾವ ರೂಪಿಯಾಗಿಯೋ ಇರಲಿ ಗಾನ ಮಾಡುವವರನ್ನು ಅಂದರೆ ಜಪಿಸುವವರನ್ನು ರಕ್ಷಣೆ ಮಾಡುವ ವಿಷಯ ಶಾಶ್ವತ ಸತ್ಯ.

ಧ್ಯಾನಕ್ಕೆ ವಿಷಯವಾದ ನಾಲ್ಕು ದೇವತೆಗಳನ್ನು ಈ ಗಾಯತ್ರೀ ಮಂತ್ರವು ಒಳಗೊಂಡಿದೆ. ಇದನ್ನು ಇಲ್ಲಿ ಸಂಕ್ಷೇಪವಾಗಿ ವಿವರಿಸಿದೆ :

(೧) **ಆದಿತ್ಯ :** ಸವಿತೃ ಎಂಬ ಶಬ್ದವು ಸೂರ್ಯ ಎಂಬ ಅರ್ಥದಲ್ಲಿ ಪ್ರಸಿದ್ಧವಾಗಿದೆ. ಗಾಯತ್ರಿಯ ಮೂರನೇ ಪಾದದಲ್ಲಿನ 'ಯಃ' ಎಂದರೆ ಯಾವ ಸೂರ್ಯನು ಎಂದರ್ಥ. ಇಲ್ಲಿ ಪುಲ್ಲಿಂಗದಲ್ಲಿರುವ ಯಚ್ಛಬ್ದದಿಂದ ಸೂರ್ಯನನ್ನೇ ತೆಗೆದುಕೊಳ್ಳಬೇಕು.

(೨) **ಶ್ರೀಮನ್ನಾರಾಯಣ :** ಸವಿತೃದೇವನು ಗಾಯತ್ರೀಮಂತ್ರಕ್ಕೆ ಮುಖ್ಯವಾಗಿ ಪ್ರತಿಪಾದ್ಯನಲ್ಲ. ಆ ಸವಿತೃವೂ ಯಾರನ್ನು ಪ್ರಾರ್ಥಿಸು ತ್ತಾನೋ ಅಂತಹ ಅವನ ಅಂತರ್ಯಾಮಿಯಾದ ದೇವನನ್ನು ಈ ಮಂತ್ರ ಪ್ರತಿಪಾದಿಸುತ್ತದೆ. ನಮಗಿರುವಂತೆ ಸವಿತೃವಿಗೂ ಒಬ್ಬ ಅಂತರ್ಯಾಮಿ ಯಾದ ದೇವನನ್ನು ಈ ಮಂತ್ರ ಪ್ರತಿಪಾದಿಸುತ್ತದೆ ಎಂದು ಅರ್ಥ. ನಮಗಿರುವಂತೆ ಸವಿತೃವಿಗೂ ಒಬ್ಬ ಅಂತರ್ಯಾಮಿಯಾದ ದೇವನಿದ್ದಾನೆ. ಅವನೇ ಆತ್ಮ, ಅವನೇ ಸರ್ವ. ಅಲ್ಲದೆ ಸರ್ವಬುದ್ಧಿವೃತ್ತಿಗಳ ಪ್ರೇರಕತ್ವ ವನ್ನು ಸವಿತೃವು ಹೊಂದಲು ಸಾಧ್ಯವಿಲ್ಲ. ಕಾರಣ ಅವನು ಕೇವಲ ನೇತ್ರೇಂದ್ರಿ

ಯಕ್ಕೆ ಅನುಗ್ರಾಹಕ. ನೇತ್ರಮೂಲಕವಾದ ಬುದ್ಧಿವೃತ್ತಿಗಳಿಗೆ ಮಾತ್ರ ಪ್ರೇರಕನಾಗಬಲ್ಲ. 'ಧೀಃ' ಶಬ್ದವು ಬಹುವಚನದಲ್ಲಿರುವುದರಿಂದ ಎಲ್ಲಾ ಬುದ್ಧಿಗಳಿಗೂ ಪ್ರೇರಕನಾದ ದೇವನನ್ನು ಹೇಳುತ್ತದೆ. 'ತತ್' ಶಬ್ದದಿಂದ ನಾರಾಯಣನ ಜ್ಯೋತಿರ್ಮಯರೂಪವು ವೇದಾಂತಗಳಲ್ಲಿ ಸೂಚಿತವಾಗಿದೆ. ಆದ್ದರಿಂದ ಸರ್ವಜೀವ ಪ್ರೇರಕನಾದ, ತೇಜೋರೂಪನಾದ, ನಾರಾಯಣ ನನ್ನು ಧ್ಯಾನಿಸುವುದಾಗಿದೆ. ಪರಮಾತ್ಮನ ಚಕ್ಷಸ್ಸಿನಿಂದ ಸೂರ್ಯನು ಜನಿಸಿದ ನೆಂದು ವೇದವಾಕ್ಯ. ಪರಮಾತ್ಮನ ಪ್ರಥಮ ರೂಪವು ಬ್ರಹ್ಮಾಂಡ. ಬಾಹ್ಯ ದಲ್ಲಿ ಮಹತ್ತತ್ತ್ವಾದಿಗಳನ್ನು ಸೃಷ್ಟಿಮಾಡಿದ ರೂಪ, ದ್ವಿತೀಯ ರೂಪವು ಬ್ರಹ್ಮಾಂಡದ ಅಂತರ್ಗತ ಮಧ್ಯವರ್ತಿ ಸೂರ್ಯಾಂತರ್ಗತರೂಪ. ತೃತೀಯ ರೂಪವು ಪುರುಷದೇಹಸ್ಥಿತ ಸೂಕ್ಷ್ಮರೂಪ. ಈ ಮೂರರಲ್ಲಿ ಪ್ರಮಿತ ಅಥವಾ ಪ್ರಸಿದ್ಧ ರೂಪವು ಆದಿತ್ಯಾಂತರ್ಗತರೂಪವು. ಅದೇ ಸಂಧ್ಯೋಪಾಸನೆಗೆ ವಿಹಿತ ರೂಪ (ಭಾಗವತ ದ್ವಿತೀಯ ಸ್ಕಂದ).

(೩) **ಶಿವ :** ಆದಿತ್ಯನ ಒಳಗಿರುವ ಜ್ಯೋತಿರ್ಮಯ ರೂಪ ಹಾಗೂ ಆಧ್ಯಾತ್ಮಿಕ ಮತ್ತು ಅಧಿದೈವಿಕ ಅಂತರ್ಯಾಮಿರೂಪ. ಇವೆರಡೂ ಪರಶಿವನ ರೂಪವೆಂದು ಶ್ರುತಿ–ಸ್ಮೃತಿಗಳಿಂದ ತಿಳಿದುಬರುತ್ತದೆ. ಅಲ್ಲದೆ ಗಾಯತ್ರೀ ಮಂತ್ರದಲ್ಲಿರುವ 'ಭರ್ಗ' ಶಬ್ದವು ಅಕಾರಾಂತವಾಗಿದೆ, ಸಕಾರಾಂತವಲ್ಲ. 'ಭರ್ಗ' ಎಂಬುದು ಪರಶಿವನ ವಿಶೇಷನಾಮ. 'ಭರ್ಗ' ಎಂಬ ಶಬ್ದಕ್ಕೆ 'ಧಿಯೋ ಯೋ ನಃ' ಎಂಬ ಮೂರನೇ ಪಾದದಲ್ಲಿರುವ 'ಯೋ' ಎಂಬ ಶಬ್ದದೊಡನೆ ವಿಶೇಷ್ಯರೂಪದಿಂದ ಅನ್ವಯ ಮಾಡಬೇಕು. ಇದರಿಂದ ಪರ ಶಿವನು ಗಾಯತ್ರಿಯಿಂದ ಉಪಾಸ್ಯ ಎಂಬುದು ಅರ್ಥ. ಪ್ರಾಣಿಗಳ ಹೃದಯ ದಲ್ಲಿ ಜೀವಾಂತರ್ಯಾಮಿ ಜೀವರೂಪದಿಂದ ಈ ಭರ್ಗನಾಮಕನೇ ಇರು ತ್ತಾನೆ. ಆತನೇ ಆಕಾಶದಲ್ಲಿ ಆದಿತ್ಯಾಂತರ್ಗತನಾಗಿ ಪುರುಷರೂಪದಿಂದ ಇರುತ್ತಾನೆ (ಯಾಜ್ಞವಲ್ಕ್ಯ ಸಂಹಿತೆ).

(೪) **ಪರಬ್ರಹ್ಮ :** ನಮ್ಮ ಬುದ್ಧಿಗಳ ಪ್ರೇರಕತ್ವವನ್ನು ಆದಿತ್ಯ ರೂಪ ದಿಂದಲೇ ಹೊಂದಲಾಗುವುದಿಲ್ಲ. ಕಾರಣ ಆ ರೂಪ ನಮ್ಮ ಶರೀರದಲ್ಲಿ ಪ್ರವೇಶಿಸಲಾರದು. ಒಂದು ಶರೀರ ಇನ್ನೊಂದು ಶರೀರದಲ್ಲಿರಲು ಸಾಧ್ಯವಿಲ್ಲ. ಆದ್ದರಿಂದ ಶರೀರರಹಿತನೂ, ಎಲ್ಲರ ಹೃದಯಗುಹೆಯಲ್ಲಿ ನಿವಾಸಿಯಾಗಿರು ವವನೂ ಆದ ಪರಮಾತ್ಮನೇ ಗಾಯತ್ರೀ ಮಂತ್ರದಲ್ಲಿ (ಮುಖ್ಯವಾಗಿ)

ಪ್ರತಿಪಾದಿತನಾಗಿದ್ದಾನೆ. 'ಭರ್ಗ' ಶಬ್ದವು ಅಕಾರಾಂತವಾಗಲೀ ಅಥವಾ ಸಕಾರಾಂತವಾಗಲೀ 'ಪ್ರಕಾಶಕತ್ವ' (ಭಾಸಕತ್ವ) ಎಂಬುದೇ ಅದರ ಅರ್ಥ ಎಂದು ತಿಳಿಯುವುದು ಯುಕ್ತ. ಭಾಸಕತ್ವವು ಮುಖ್ಯವಾಗಿ ಆತ್ಮ ಚೈತನ್ಯಕ್ಕೆ ಸಂಭವಿಸುತ್ತದೆ. ಆದ್ದರಿಂದ ಸರ್ವವ್ಯಾಪಕವೂ, ಸರ್ವ ಪ್ರಕಾಶವೂ, ಚೈತನ್ಯ ಜ್ಯೋತಿಸ್ವರೂಪವೂ ಆದ ಬ್ರಹ್ಮವೇ ಗಾಯತ್ರೀ ಮಂತ್ರದಿಂದ ಪ್ರತಿಪಾದಿತವಾಗಿದೆ ಎಂದು ಹೇಳುವುದು ಸಮಂಜಸವಾಗಿದೆ. ಆದ್ದರಿಂದ ಯಾರಿಗೆ ಈ ನಾಲ್ಕು ದೇವತೆಗಳಲ್ಲಿ ಯಾವ ರೂಪದಲ್ಲಿ ಭಕ್ತಿಯೋ, ಆಸಕ್ತಿಯೋ, ಅವರು ಆ ರೂಪವನ್ನೇ ಈ ಗಾಯತ್ರೀಮಂತ್ರದ ಮೂಲಕ ಧ್ಯಾನಿಸಬಹುದು. ಈ ರೀತಿ ನಿರೂಪಣೆಯನ್ನು, ಉಪಾಸಕರ ಬುದ್ಧಿತಾರತಮ್ಯವನ್ನು ಅನುಸರಿಸಿ ಧ್ಯಾನದ ಸೌಕರ್ಯಕ್ಕಾಗಿ ಮಾಡಲಾಗಿದೆ ಎಂಬುದು ಇದರ ತತ್ತ್ವ.

ಈ ಗಾಯತ್ರಿಯು ಜಗತ್ತಿನಲ್ಲಿಯೇ ಅತ್ಯುತ್ತಮವಾದ ಪ್ರಾರ್ಥನಾ ಮಂತ್ರ. ಜ್ಞಾನವೇ ಜೀವನದ ಜೀವಾಳ. ಈ ಪ್ರಚೋದನೆಗಾಗಿ ಭಗವಂತನನ್ನು ಪ್ರಾರ್ಥಿಸುವ ದಿವ್ಯಮಂತ್ರವೇ ಈ ಗಾಯತ್ರೀ. ರಾಷ್ಟ್ರಗೀತೆಯು ನಮಗೆ ರಾಷ್ಟ್ರೀಯ ಭಾವನೆಯನ್ನು ಪ್ರಜ್ವಲಗೊಳಿಸುವಂತೆ ಇದು ನಮ್ಮ ಆಧ್ಯಾತ್ಮಿಕ ಧ್ಯೇಯವನ್ನು ತುಂಬುವ ಬ್ರಹ್ಮಗೀತೆಯಾಗಿದೆ. ಸೂರ್ಯನು ಬಾಹ್ಯ ಜಗತ್ತಿಗೆ ಬೆಳಕನ್ನು ನೀಡಿ ಜಗತ್ತಿನ ಪೋಷಣೆಯನ್ನು ಮಾಡುತ್ತಾನೆ. ಆ ಸೂರ್ಯನ ಒಳಗಿರುವ ಭಗವಂತನು ಅಂತರಂಗದೊಳಗೆ ಜ್ಞಾನದ ಬೆಳಕನ್ನು ನೀಡಿ ಸಕಲ ಚೇತನ ವರ್ಗವನ್ನೂ ಪೋಷಿಸಲಿ ಎಂದು ಗಾಯತ್ರೀ ಮಂತ್ರದ ಮೂಲಕವಾಗಿ ನಾವು ಪರಮಾತ್ಮನಿಗೆ ಪ್ರಾರ್ಥನೆ ಸಲ್ಲಿಸುತ್ತೇವೆ.

**ಮತ್ತೊಂದು ಪ್ರಶ್ನೆ** : ಗಾಯತ್ರೀ ಸ್ತ್ರೀದೇವತೆ. ಮಂತ್ರದಲ್ಲಿ ಬರುವ ಸವಿತೃ ಎಂಬುದು ಪುರುಷದೇವತೆ. ಹಾಗಾದಲ್ಲಿ ಈ ಮಂತ್ರದ ಉಪಾಸ್ಯ ದೇವತೆ ಯಾರು ? ಎಂಬುದು ಇದಕ್ಕೆ ಸಮಾಧಾನ ಹೀಗಿದೆ : ವೇದಗಳಲ್ಲಿ 'ಅತ' 'ಆಕೆ' ಎಂಬ ಪದಗಳನ್ನು ಉಪಯೋಗಿಸುವುದಿಲ್ಲ. 'ಅದು' ಎಂಬ ಪದವನ್ನು ಮಾತ್ರ ಉಪಯೋಗಿಸುವರು. ಏಕೆಂದರೆ ದೇವರು ಪುರುಷ ಅಥವಾ ಸ್ತ್ರೀ ಎಂಬ ಅನುಮಾನಕ್ಕೆ ಕಾರಣವಾಗುವುದು. ಆದಕಾರಣ 'ಅದು' ಎಂಬ ವ್ಯಕ್ತಿಭಾವರಹಿತ ಪದವನ್ನು ಉಪಯೋಗಿಸುತ್ತಾರೆ. ಅಲ್ಲದೆ ಗಾಯತ್ರಿಗೆ ಸಾವಿತ್ರೀ, ಸರಸ್ವತೀ, ಲಕ್ಷ್ಮೀ ಎಂದು ಹೆಸರಿಸಿದರೂ, ಸೂರ್ಯ,

ವಿಷ್ಣು, ಶಿವ, ಪರಮಾತ್ಮ ಎಂಬ ಅರ್ಥಮಾಡಬಹುದಾದರೂ ಈ ಎಲ್ಲಾ ದೇವತಾಶಕ್ತಿಗಳೂ ಗಾಯತ್ರಿಯಲ್ಲಿರುವುದರಿಂದ ಗಾಯತ್ರಿಯನ್ನೇ ಉಪಾಸಿಸಿದಂತಾಗುವುದು. ಇದರ ವಿವರ ಮುಂದೆ ತಿಳಿಯುವುದು.

ಪರಬ್ರಹ್ಮಕ್ಕೆ 'ವಾಚಸ್ಪತೀ' ಎಂಬ ಹೆಸರುಂಟು. ಇಲ್ಲಿ 'ವಾಕ್' ಎಂಬುದು ಸ್ತ್ರೀರೂಪ, 'ಪತಿ' ಎಂಬುದು ಪುರುಷರೂಪ. ಅಂದರೆ ಇದು ಒಂದೇ ತತ್ತ್ವದ ಎರಡು ಮುಖಗಳು, ಅವಿಭಾಜ್ಯ. ಹಾಗೆಯೇ 'ದ್ಯೌಃ ಪಿತಾ ಪೃಥಿವೀ ಮಾತಾ' ಎಂಬಲ್ಲಿಯೂ ದಿವಿಯೇ ತಂದೆ, ಭೂಮಿಯೇ ತಾಯಿ ಎಂದರೆ ಇದೂ ಒಂದೇ ತತ್ತ್ವದ ಎರಡು ಅವಿಭಾಜ್ಯ ರೂಪಗಳು.

ಆದಿತ್ಯ (ಸೂರ್ಯ) ರಶ್ಮಿಯಲ್ಲಿ ಸ್ತ್ರೀ ಮತ್ತು ಪುರುಷ ಪ್ರಕೃತಿಗಳು ಸೇರಿಕೊಂಡಿವೆ. ಆವಿಯ ರೂಪವನ್ನು ಪಡೆದ ಜಲವನ್ನು ಸ್ವೀಕರಿಸಿ ಗರ್ಭಧರಿಸುವುದರಿಂದ ಈ ರಶ್ಮಿಗಳು ಸ್ತ್ರೀರೂಪಗಳು. ವರ್ಷಾಕಾಲದಲ್ಲಿ ಮಳೆಯನ್ನು ಸುರಿಸುವಾಗ ಪುರುಷ ರೂಪವೆಂಬುದು ವಿದ್ವಾಂಸರ ಅಭಿಮತ. ಅಂದರೆ ಪರವಸ್ತುವನ್ನು ಸಗುಣವೆಂದು ಭಾವಿಸಿದಾಗ ಸ್ತ್ರೀಪುರುಷರೂಪಗಳೆರಡೂ ಹೌದು. ಇದೇ ಅಭಿಪ್ರಾಯವನ್ನು ಶ್ವೇತಾಶ್ವತರ ಉಪನಿಷತ್ತು ಸ್ಪಷ್ಟಗೊಳಿಸುತ್ತದೆ.

ಶ್ರೀಗಾಯತ್ರೀ ಮಂತ್ರವನ್ನೇ ಅರ್ಥ ಮಾಡಿದಾಗ, ಅಲ್ಲಿ ಯಾವ ಸ್ಪಷ್ಟವಾದ ರೂಪವಿವರಣೆಯೂ ಕಾಣುವುದಿಲ್ಲ. ಆ ಅರ್ಥದಂತೆ ಗಾಯತ್ರೀ ಗಂಡೂ ಅಲ್ಲ, ಹೆಣ್ಣೂ ಅಲ್ಲ. ಕೇವಲ ಜ್ಞಾನಸೂಚಕವಾದ ತೇಜಸ್ಸಿನ ಬಿಂಬ ಅಷ್ಟೆ.

**ಇನ್ನೊಂದು ವಿಷಯ :** ಅಮೆರಿಕಾ, ಯೂರೋಪ್, ಜಪಾನ್ ದೇಶದವರು ಈ ಗಾಯತ್ರೀ ಜಪವನ್ನಾಗಲೀ ಅಥವಾ ಬೇರಾವ ಆಚರಣೆಯನ್ನಾಗಲೀ ಮಾಡದಿದ್ದರೂ ಅವರು ಬುದ್ಧಿವಂತರಾಗಿಲ್ಲವೆ ? ಎಂಬುದು. ಇದಕ್ಕೆ ಸಮಾಧಾನ ಈ ರೀತಿ ಇದೆ : ಆ ದೇಶದವರಿಗೆ ಬುದ್ಧಿಯೇನೋ ಇದೆ. ಅದು ಭೌತಿಕವಾದ ವಿಷಯದಲ್ಲಿ ಮಾತ್ರಾ. ಅವರಲ್ಲಿ ಸಾತ್ವಿಕ ಬುದ್ಧಿ ಇರುವವರು ಕಡಿಮೆ. ಅವರು ಧನ ಸಂಗ್ರಹ ಮತ್ತು ಅದನ್ನು ಭೌತಿಕ ಜೀವನಕ್ಕಾಗಿ ಉಪಯೋಗಿಸುವುದರಲ್ಲಿಯೂ, ಯುದ್ಧದ ಅಪಾಯಕಾರೀ ಜ್ವಾಲೆಯಲ್ಲಿ ಸುಡುವ ಹಾಗೂ ತಮ್ಮ ಶಕ್ತಿ ಸಾಮರ್ಥ್ಯವನ್ನು ಇತರ ದೇಶಕ್ಕೆ ತೋರಿಸುವುದರಲ್ಲಿಯೂ ವ್ಯಯಮಾಡುತ್ತಿದ್ದಾರೆ. ವೈಜ್ಞಾನಿಕ ಉನ್ನತಿಯಿಂದ

ಮನುಷ್ಯನಿಂದಲೇ ಮನುಷ್ಯನ ರಕ್ತಪಾತವಾಗುವ ದಿಶೆಯಲ್ಲಿ ತಮ್ಮ ಬುದ್ಧಿಯನ್ನು ಉಪಯೋಗಿಸಿ ಸಂತೋಷಪಡುತ್ತಾರೆಯೇ ವಿನಃ ಅವರಿಗೆ ಮನಶ್ಶಾಂತಿಯಾಗಲೀ, ಸಮಾಧಾನವಾಗಲೀ, ತೃಪ್ತಿಯಾಗಲೀ ಇಲ್ಲ. ಈ ವಿಷಯದಲ್ಲಿ ಭಾರತಕ್ಕೆ ಬಂದ ಓರ್ವ ಸುಶಿಕ್ಷಿತ ಅಮೆರಿಕನ್ ದಂಪತಿಗಳ ಮಾತು ಕೇಳಿ (೧೯೫೦ರಲ್ಲಿ): 'ಅಮೆರಿಕಾದಲ್ಲಿ ಎಲ್ಲವೂ ಇದೆ. ಆದರೆ ಒಂದು ಮಾತ್ರ ಇಲ್ಲ. ಅಲ್ಲಿ ಸಕಲ ವೈಭವಗಳಿದ್ದರೂ ಮನಶ್ಶಾಂತಿ, ಆಧ್ಯಾತ್ಮಿಕ ಸುಖ ಮತ್ತು ಆನಂದಕ್ಕೆ ಬಡತನವಿದೆ. ಅಲ್ಲಿಯ ಆನಂದ ಕೃತಕ ಮತ್ತು ಕ್ಷಣಿಕ. ನಿಜವಾದ ಶಾಂತಿ ಭಾರತದಲ್ಲಿ ಮಾತ್ರ ಪ್ರಾಪ್ತವಾಗುತ್ತದೆ.'

**ವಿಜ್ಞಾನದ ಪ್ರಭಾವ :** ಇದು ವಿಜ್ಞಾನಯುಗ. ವಿಜ್ಞಾನವು ತನ್ನ ಅತ್ಯದ್ಭುತ ಸಲಕರಣೆಗಳ ಮೂಲಕ ಮನುಷ್ಯನ ಜೀವನಕ್ರಮದ ಮೇಲೆ ತನ್ನ ವರ್ಚಸ್ಸನ್ನು ಬೀರಿ ಜನರ ಆಲೋಚನೆಗಳ ದಾರಿಯನ್ನೇ ಬದಲಾಯಿಸಿ, ಜೀವನದ ಗುರಿಯನ್ನೇ ಬೇರೆ ಮಾಡಿದೆ. ನಮ್ಮ ಈಗಿನ ಜನಾಂಗಕ್ಕೆ ನಮ್ಮ ಆಚರಣೆಗಳನ್ನು ಧಾರ್ಮಿಕದ ಜೊತೆಗೆ ವೈಜ್ಞಾನಿಕ ಹಿನ್ನೆಲೆಯಲ್ಲೂ ವಿವರಿಸಿದರೆ ಮಾತ್ರ ಅದನ್ನು ಸ್ವೀಕರಿಸುವ ಮನೋಭಾವ ಬೆಳೆದುಬಂದಿದೆ. ಈಗಿನ ಆಧುನಿಕ ಪರಿಸರದಲ್ಲಿ ಭಾರತೀಯ ವೈದಿಕ ಧರ್ಮಾವಲಂಬಿಗಳಾದ ನಮಗೆ ಪಾಶ್ಚಾತ್ಯರ ಸಂಸರ್ಗದಿಂದ—ಭೌತಿಕ ಸುಖ-ಸಮೃದ್ಧಿಯೊಂದೇ ಜೀವನದ ಧ್ಯೇಯವೆಂಬ ಮತ್ತು ಪ್ರತಿಯೊಂದು ವಿಚಾರದ ಸ್ವರೂಪ, ಕ್ರಿಯೆ, ಫಲಗಳನ್ನು ವೈಜ್ಞಾನಿಕ ಚಿಕಿತ್ಸೆಗೆ ಒಳಪಡಿಸಿ ಅದರ ಪರಿಣಾಮವನ್ನು ಪ್ರತ್ಯಕ್ಷವಾಗಿ ಕಾಣದೆ ಅಂಧಾನುಕರಣೆಯಿಂದ ಆಚರಿಸುವುದು ವ್ಯರ್ಥವೆಂಬ ವಿಚಾರಸರಣಿಯನ್ನು ಅಂಗೀಕರಿಸಿ ನಮ್ಮ ಧಾರ್ಮಿಕ ಸಂಪ್ರದಾಯಗಳಲ್ಲಿದ್ದ ಶ್ರದ್ಧೆಯು ಶಿಥಿಲವಾಗಿದೆ.

ನಾವು ಇಲ್ಲಿ ಗಮನಿಸಬೇಕಾದ ಒಂದು ಅಂಶವಿದೆ. ಭೌತಿಕವಾದ ದೃಷ್ಟಿಯಿಂದ ವಿಶ್ವವನ್ನು ನೋಡುವ ಆಧುನಿಕ ವಿಜ್ಞಾನಿಗಳಿಗೂ ಮತ್ತು ಆಧ್ಯಾತ್ಮಿಕ ದೃಷ್ಟಿಯಿಂದ ಅದನ್ನು ನೋಡುವ ಋಷಿಗಳಿಗೂ ಮಧ್ಯೆ ಬಹಳ ಅಂತರವಿದೆ. ಆಧುನಿಕ ವಿಜ್ಞಾನಿಗಳು. ಹೊರಗಡೆಯ ವಿಜ್ಞಾನಿಗಳು. ಮಹರ್ಷಿಗಳು ಒಳಗಡೆಯ ವಿಜ್ಞಾನಿಗಳು. ಆಧುನಿಕ ವಿಜ್ಞಾನಿಗಳು. ಮನುಷ್ಯನು ತನ್ನಿಂದ ದೂರಗಿರುವ, ಗ್ರಹಿಸಲು ಸಾಧ್ಯವಾದ ಪ್ರಪಂಚದಲ್ಲಿ ಮಾಡಿದ ಸಾಧನೆಗಳು. ಇವುಗಳಲ್ಲಿ ಸಾಹಸವಿದೆ, ಬುದ್ಧಿಶಕ್ತಿಯಿದೆ, ಉಪಾಯವಿದೆ. ಆದರೆ ಆತ್ಮಪ್ರಪಂಚದ ವಿಷಯವೇ ಬೇರೆ. ಆದೊಂದು

ಅಜ್ಞಾತ ಪ್ರಪಂಚ. ಇಂದ್ರಿಯಗಳೊಡನೆ ಹುಟ್ಟಿ ಅವುಗಳೊಡನೆ ಜೀವನ ಯಾತ್ರೆ ಮಾಡುತ್ತಿರುವ ನಮಗೆ ಆ ಪ್ರಪಂಚವು ಎಟುಕದು. ಅಂತಹ, ಪ್ರವೇಶಿಸಲು ಅಸಾಧ್ಯವಾದ ಪ್ರಪಂಚವನ್ನು ಪ್ರವೇಶಿಸಿ, ಸತ್ಯ ಅಥವಾ ಆತ್ಮಸಾಕ್ಷಾತ್ಕಾರ ಮಾಡಿದ್ದು ಸಾಮಾನ್ಯ ಕೆಲಸವೇನಲ್ಲ. ಇದು ಹೊರ ಮುಖವಾದ ಯೋಜನೆಯಿಂದ ಸಾಧಿಸುವ ಕೆಲಸವಲ್ಲ ಭೌತವಿಜ್ಞಾನ, ರಸಾಯನ ವಿಜ್ಞಾನ ಮೊದಲಾದ ಶಾಸ್ತ್ರಗಳು ಕೇವಲ ಬುದ್ಧಿ ಶಕ್ತಿಗೆ ಸಾಧ್ಯ ವಾದುವು. ಲೌಕಿಕ ವಸ್ತುಗಳು ಇಂದ್ರಿಯ ಗೋಚರವಾದುವು. ಅವುಗಳು ಪ್ರತ್ಯಕ್ಷ ಪ್ರಮಾಣಕ್ಕೂ, ಅನುಮಾನ ಪ್ರಮಾಣಕ್ಕೂ ಸಿಕ್ಕುತ್ತವೆ. ಆತ್ಮ ವೆಂಬುದು ಅತೀಂದ್ರಿಯವಸ್ತು. ಅದು ನಮ್ಮ ಕೈಯ ಹಿಡಿತಕ್ಕೂ, ತೂಕಕ್ಕೂ, ಅಳತೆಗೂ ಸಿಕ್ಕತಕ್ಕದ್ದಲ್ಲ. ಆದ್ದರಿಂದ ಅದನ್ನು ನಾವು ಕಂಡು ಕೊಳ್ಳಬೇಕಾದರೆ ವೇದಶಾಸ್ತ್ರಗಳ ವಾಕ್ಯಗಳೇ ಇರುವ ಪ್ರಮಾಣ. ಅದನ್ನು ನಂಬಿವೆಂದರೆ ನಮಗೆ ಬೇರೆ ದಾರಿಯೇ ಇಲ್ಲ ತಾಯಿ ಕೊಡುವ ತಿಂಡಿಯನ್ನು ಮಗುವು ನಂಬಿಕೆಯಿಂದ ತಿನ್ನುವಂತೆ, ನಂಬಿಕೆ-ವಿಶ್ವಾಸದಿಂದ ನಾವು ನಮ್ಮ ವೇದಶಾಸ್ತ್ರಗಳನ್ನು ನಂಬಬೇಕು ; ಅನುಸರಿಸಬೇಕು. ತಾಯಿ ಕೊಟ್ಟಿದ್ದು ರುಚಿಸದೆಹೋದರೆ ಮಗು ಅದನ್ನು ಬಿಸುಟು ಬೇರೆ ತಿಂಡಿ ಕೇಳುವಂತೆ ನಾವು ವೇದಶಾಸ್ತ್ರಗಳಲ್ಲಿ ಇರಿಸಬೇಕಾದ ಶ್ರದ್ಧೆ, ನಂಬಿಕೆ, ವಿಶ್ವಾಸ, ನಮ್ಮ ಸ್ವತಂತ್ರ ವಿಚಾರಕ್ಕೆ ವಿರೋಧಿಯಾದದ್ದಲ್ಲ. ಅದು ನಮ್ಮ ಯುಕ್ತ್ಯನುಭವಗಳಿಗೆ ಒಳಪಟ್ಟದ್ದಾಗಿಯೇ ಇರುತ್ತದೆ. ಮೊದಲು ಪರೀಕ್ಷೆ, ಆಮೇಲೆ ವಿಶ್ವಾಸ— ಎಂಬುದು ಲೋಕವ್ಯವಹಾರದ ನೀತಿ ಆತ್ಮ, ಜೀವ, ಧರ್ಮ, ಇವು ಅಲೌಕಿಕ ವಿಷಯಗಳು. ಆದ್ದರಿಂದ ಮೊದಲು ವಿಶ್ವಾಸ, ಆಮೇಲೆ ಅನುಭವಪೂರ್ವಕ ವಿಮರ್ಶೆ, ಇದು ನೀತಿ. ಪ್ರಾಚೀನ ವಾಕ್ಯಗಳು ನಮಗೆ ಮಾರ್ಗದರ್ಶಕ. ನಮಗವು ಬೇಕು. ಅವುಗಳ ಸಹಾಯವಿಲ್ಲದಿದ್ದರೆ ನಾವು ತಪ್ಪುದಾರಿ ಹಿಡಿಯ ಬಹುದು. ಆದರೆ ಅವುಗಳ ಜೊತೆಗೆ ಇನ್ನೊಂದು ಸಾಂಪ್ರತ ವಿಚಾರ ದೃಷ್ಟಿಯೂ ಬೇಕು. ಸಾಂಪ್ರತ ವಿಚಾರದಿಂದ ಪ್ರಾಚೀನ ಸಿದ್ಧಾಂತಕ್ಕೆ ಎಷ್ಟುಮಾತ್ರವೂ ಭಂಗ ಬರಲಾರದು. ನಮ್ಮ ಇಂದಿನ ತಿಳಿವಳಿಕೆ ಪುರಾತನ ತಿಳಿವಳಿಕೆಯೊಡನೆ ಒಂದುಗೂಡಬೇಕು. ಅದೇ ಗತಿಯು ವಿಧಾನ. ಈ ವಿಶ್ವಾಸ ದಿಂದ ನಮ್ಮ ಹಿರಿಯರು ವಿದ್ಯಾನಗರಿಯೂ, ವಿಶ್ವವಿಜ್ಞಾನ ಮಂದಿರವೂ ಆದ ಶರೀರವೆಂಬ ದೇಗುಲವನ್ನು ಧ್ಯಾನದಿಂದ ಪ್ರವೇಶಿಸಿದಾಗ ಸೃಷ್ಟಿಗೆ ಕಾರಣವಾದ ಶಕ್ತಿಗಳನ್ನೂ, ಬ್ರಹ್ಮತತ್ತ್ವಗಳನ್ನೂ ಕಂಡರು. ಇದು ಬುದ್ಧಿಯ

ಯತ್ನಕ್ಕೆ ದೊರೆಯತಕ್ಕದ್ದಲ್ಲ.

ಛಾಂದೋಗ್ಯ ಉಪನಿಷತ್ತು ಈ ರೀತಿ ಹೇಳುತ್ತದೆ : 'ಮನುಷ್ಯನ ಹೊರಗಡೆ ಇರುವ ಲೋಕಗಳನ್ನು ಹೇಳಿರುವಂತೆಯೇ ಮನುಷ್ಯನ ಒಳಗಡೆ ಸಹ ಸಕಲಲೋಕಗಳಿರುತ್ತವೆ. ಈ ಹೊರ ಆಕಾಶವು ಎಷ್ಟು ವಿಸ್ತಾರವಾಗಿದೆಯೋ ಹೃದಯದ ಒಳಗಿರುವ ಆಕಾಶವೂ ಕೂಡ ಅಷ್ಟೇ ವಿಸ್ತಾರವಾಗಿದೆ. ದ್ಯಾವಾ ಪೃಥ್ವಿಗಳೆರಡೂ ಇದರ ಒಳಗಡೆ ಇರಿಸಲ್ಪಟ್ಟಿವೆ. ಅಗ್ನಿ, ವಾಯು, ಸೂರ್ಯ, ಚಂದ್ರ, ವಿದ್ಯುತ್. ನಕ್ಷತ್ರ ಮತ್ತು ಇಲ್ಲಿ ಇರುವುದು, ಇಲ್ಲದಿರುವುದು ಎಲ್ಲವೂ ಇದರ ಒಳಗಡೆ ಸೂಕ್ಷ್ಮವಾದ ಹೃದಯಾಕಾಶದಲ್ಲಿ ಇರುತ್ತದೆ.' ಋಷಿಗಳು ಅವರ ಯೋಗ ಸಾಧನೆಯಿಂದಲೂ, ತಪಸ್ಸಿನಿಂದಲೂ, ತಮ್ಮೊಳಗೆ ಮುಳುಗಿ, ಮನುಷ್ಯನಲ್ಲಿ ಗೂಢವಾಗಿರುವ ಈ ಒಳ ವಿಶ್ವವನ್ನು ಆಮೂಲಾಗ್ರವಾಗಿ ತಿಳಿದರು. ಜೊತೆಗೆ ಈ ವಿಶ್ವಕ್ಕೆ ಮೂಲಸ್ವಾಮಿಯಾದ ಪರಂಜ್ಯೋತಿ ಪರಮಾತ್ಮನನ್ನೂ ಸಾಕ್ಷಾತ್ಕರಿಸಿಕೊಂಡರು. ಇದನ್ನು ನೋಡಬೇಕಾದರೆ ಅತೀಂದ್ರಿಯವಾದ ದೃಷ್ಟಿಬೇಕು; ಅಂತರ್ದೃಷ್ಟಿ ಬೇಕು; ಜ್ಞಾನದೃಷ್ಟಿ ಬೇಕು. ತಪಸ್ಸಿನಿಂದ ಅಥವಾ ಯೋಗದಿಂದ ಅಂತಹ ದೃಷ್ಟಿಯನ್ನು ನಮ್ಮ ಮಹರ್ಷಿಗಳು ಪಡೆದಿದ್ದರು. ಅವರ ಹೃದಯದಲ್ಲಿರುವ 'ದೇವಸುಷಿ'ಗಳು (ರಂಧ್ರ ಅಥವಾ ದ್ವಾರ) ತೆರೆದಿದ್ದುವು. ನಾವು ನಮ್ಮ ಚಿನ್ಮಯ ಚಕ್ಷುಸ್ಸನ್ನು ತೆರೆಯದಹೊರತು ಆ ದ್ರಷ್ಟಾರರು ವಿವರಿಸಿರುವುದನ್ನು ಕಾಣಲಾರೆವು. ಗಾಜಿಗೆ ಸಂಸ್ಕಾರ ಕೊಟ್ಟಾಗ ಅದು ಉತ್ತಮವಾದ ಸೂಕ್ಷ್ಮದರ್ಶಕವೋ ಅಥವಾ ದೂರದರ್ಶಕವೋ ಆಗುತ್ತದೆ. ಹಾಗೆಯೇ ಗಾಯತ್ರಿಯನ್ನು ಸಾಧನವಾಗಿಟ್ಟುಕೊಂಡು ಹೃದಯಕ್ಕೆ ಅವಶ್ಯಕವಾದ ಸಂಸ್ಕಾರ ಕೊಟ್ಟಾಗ ಅದು ಆತ್ಮಜ್ಞಾನವನ್ನು ಹೊಂದುವ ಪಕ್ವತೆಯನ್ನು ಪಡೆಯುತ್ತದೆ. ಯಾವ ಸತ್ಯವು ನಮಗೆ ಪ್ರತ್ಯಕ್ಷ ವಸ್ತುವಲ್ಲವೋ, ಯಾವ ಸತ್ಯವು ಆತ್ಮರೂಪದಲ್ಲಿ ಅನುಭೂಯಮಾನವಾಗಿದ್ದರೂ ರಹಸ್ಯವಾಗಿ ಅನೂಹ್ಯವಾಗಿದೆಯೋ, ಅದರ ವಿಷಯದಲ್ಲಿ ಶ್ರುತಿಪ್ರಮಾಣವನ್ನು ಬಿಟ್ಟರೆ ನಮಗೆ ಗತ್ಯಂತರವಿಲ್ಲ.

ಒಂದು ಮರದ ಯೋಗ್ಯತೆ ಗೊತ್ತಾಗುವುದು ಅದರ ಹಣ್ಣಿನಿಂದ "A tree is known by its fruit" ಎಂದು ಆಂಗ್ಲಗಾದೆ.'ಗಾಯತ್ರೀ ಉಪಾಸನೆ ಧರ್ಮವೋ, ಅಲ್ಲವೋ?' ಎಂದರೆ 'ಮೋಕ್ಷಕ್ಕೆ(ಉತ್ತಮ ಸ್ಥಿತಿಗೆ) ಸಾಧಕವೋ, ಬಾಧಕವೋ? ನೋಡಿರಿ' ಎಂಬುದು ಉತ್ತರ. ನಾವುಮಾಡುವ

ಆಲೋಚನೆ, ನಾವು ಆಡುವ ಮಾತು, ನಾವು ನಡೆಯುವ ನಡವಳಿಕೆ, ನಾವು ಮಾಡುವಕಾರ್ಯ ಅವು ಆ ಸಮಯದಲ್ಲೇ ಆಗಲೀ ಅಥವಾ ಕ್ರಮಕ್ರಮವಾಗಿ ಯಾಗಲೀ ಪ್ರತ್ಯಕ್ಷವಾಗಿಯಾಗಲೀ, ಪರೋಕ್ಷವಾಗಿಯಾಗಲೀ, ಮೋಕ್ಷಗತಿಗೆ (ಉತ್ತಮಸ್ಥಿತಿಗೆ) ಸಹಾಯ ಮಾಡುವುದಾದರೆ ಅದು ಧರ್ಮ, ಅನುಕರಣೀಯ. ಅಡ್ಡಿ ತರುವುದಾದರೆ ಅದು ಅಧರ್ಮ, ತ್ಯಾಜ್ಯ. ಈ ದೃಷ್ಟಿಯಿಂದ ಶ್ರೀಗಾಯತ್ರಿಯ ಉಪಯುಕ್ತತೆಯ ಬಗ್ಗೆ ವೈಜ್ಞಾನಿಕವಾದ ವಿವರಣೆಯನ್ನು ಮುಂದೆ ಕೊಡಲಾಗಿದೆ. ಇಂದಿನ ಜನಾಂಗದ ಅರಿವಿಗಾಗಿ ಶ್ರೀಗಾಯತ್ರಿಯಿಂದ ಫಲ ಪಡೆದ ಮಹಾತ್ಮರಲ್ಲಿ ಕೆಲವರ ವಿವರಗಳನ್ನು ಇಲ್ಲಿ ಕೊಡಲಾಗಿದೆ.

## ಫಲ ಪಡೆದವರು

(೧) ಶೃಂಗೀ—ಪರೀಕ್ಷಿತರಾಜ ಅರ್ಜುನನ ಮೊಮ್ಮಗ. ಈತನು ಒಮ್ಮೆ ಬೇಟೆಗೆ ಹೋಗಿ ಮಧ್ಯಾಹ್ನದ ನಂತರ ಹಿಂದಿರುಗುವಾಗ ಬಾಯಾರಿಕೆ ಯಾಯಿತು. ನೀರನ್ನು ಹುಡುಕುತ್ತಾ ಬರುವಾಗ ಒಂದು ಪರ್ಣಶಾಲೆ ಕಣ್ಣಿಗೆ ಬಿತ್ತು. ಅಲ್ಲಿಗೆ ಬಂದ ರಾಜ ನೀರಿಗಾಗಿ ಕೂಗಿದ. ಯಾರೂ ಉತ್ತರಿಸಲಿಲ್ಲ. ಒಬ್ಬ ವ್ಯಕ್ತಿ ಮಾತ್ರ ಪದ್ಮಾಸನದಲ್ಲಿ ಕುಳಿತು ಕಣ್ಣುಮುಚ್ಚಿಕೊಂಡಿರುವುದು ಕಾಣಿಸಿತು. ರಾಜನು ಎಷ್ಟು ಕೂಗಿದರೂ ಆತನು ಸಹ ಮಾತನಾಡಲಿಲ್ಲ. ರಾಜನಿಗೆ ತಾಳ್ಮೆ ಮೀರಿತು. ಇದು ತನಗೆ ಆದ ಅಪಮಾನ ಎಂದು ಬಗೆದ, ಕೋಪಗೊಂಡ. ಅವನು ಅಲ್ಲಿ ಕುಳಿತಿರುವ ವ್ಯಕ್ತಿಯ ಸಮಾಧಿ ಸ್ಥಿತಿಯನ್ನು ಪರೀಕ್ಷಿಸಲು—ಹತ್ತಿರದಲ್ಲಿ ಸುತ್ತು ಬಿದ್ದಿದ್ದ ಒಂದು ಸರ್ಪವನ್ನು ಆತನ ಕೊರಳಿಗೆ ಮಾಲೆಯಂತೆ ಹಾಕಿ ಹೊರಟುಹೋದ.

ಅಲ್ಲಿ ಸಮಾಧಿಯಲ್ಲಿದ್ದವರು ಶಮೀಕಮಹರ್ಷಿಗಳು. ಪರ್ಣಶಾಲೆಯ ಹೊರಗೆ ಆಟವಾಡುತ್ತಿದ್ದ ಬಾಲಕರು ಪರಿಸ್ಥಿತಿಯನ್ನು ಗಮನಿಸಿ, ಅಲ್ಲಿಯೇ ಸ್ವಲ್ಪ ದೂರದಲ್ಲಿ ಆಟವಾಡುತ್ತಿದ್ದ ಶೃಂಗಿಗೆ ವಿಷಯವನ್ನು ತಿಳಿಸಿದರು. ಶೃಂಗಿ—ಶಮೀಕರ ಮಗ. ಸುಮಾರು ಹತ್ತುವರ್ಷದ ಬ್ರಹ್ಮಚಾರಿ. ತಂದೆಯನ್ನು ನೋಡಿದ ಶೃಂಗಿ ಇದು ಮಹಾ ತಪಸ್ವಿಗೆ ಆದ ಅಪಮಾನವೆಂದು ತೀವ್ರ ಕೋಪಗೊಂಡ. ತಾಳ್ಮೆ ಮೀರಿ, ಕುಶಪಾಣಿಯಾಗಿ, ಆಚಮನಾದಿಗಳನ್ನು ಮಾಡಿ 'ಇಂದಿನಿಂದ ಏಳನೆಯ ದಿನ ಪರೀಕ್ಷಿತ ರಾಜನು ತಕ್ಷಕನಿಂದ ಕಚ್ಚಲ್ಪಟ್ಟು ಮೃತನಾಗಲಿ' ಎಂದು ಶಾಪ ಕೊಟ್ಟನು. ಕೋಪ ಶಮನವಾದ

ನಂತರ ತಾನು ಮಾಡಿದ ತಪ್ಪು ಶೃಂಗಿಗೇ ಅರಿವಾಯಿತು. ತಂದೆಯು ಮುಂದೆ ಅಳುತ್ತಾ ನಿಂತ. ರೋದನವು ಸಮಾಧಿಗೆ ಪ್ರತಿಬಂಧಕವಾದ್ದರಿಂದ ಶಮೀಕರು ಎಚ್ಚೆತ್ತರು. ನಡೆದ ಸಂಗತಿಯನ್ನೆಲ್ಲಾ ಕೇಳಿ ಮರುಗಿದರು. ಅವರು ಮಹಾ ತಪಸ್ವಿಗಳಾದರೂ ಶಾಪವಿಮೋಚನೆಗೆ ಪ್ರಯತ್ನಿಸಲಿಲ್ಲ. ನಡೆದುದನ್ನು ಅಂದು ಸಂಜೆಯೇ ಪರೀಕ್ಷಿತರಾಜನಿಗೆ ಹೇಳಿಕಳುಹಿಸಿದರು.

ರಾಜನಿಗೂ ತಾನು ಮಾಡಿದ ತಪ್ಪು ಅರಿವಾಯಿತು. ಪಶ್ಚಾತ್ತಾಪಪಟ್ಟ. ಹಾಗೂ ಮುಂದಿನ ಅನಿಷ್ಟದ ಬಗ್ಗೆಯೂ ಯೋಚಿಸುತ್ತಿದ್ದ. ವಿಷಯ ತಿಳಿದಾಗ ಅವನು ಯಾವ ಸಂದೇಹವನ್ನೂ ಪಡಲಿಲ್ಲ. ತನ್ನ ಜ್ಯೇಷ್ಠಪುತ್ರ ಜನಮೇಜಯರಾಯನಿಗೆ ರಾಜ್ಯಭಾರದ ಹೊರೆಯನ್ನು ವಹಿಸಿದನು. ತಾನು ಗಂಗಾತೀರದಲ್ಲಿ ಪ್ರಾಯೋಪವೇಶಕ್ಕೆ ಕುಳಿತುಕೊಳ್ಳಲು ನಿರ್ಧರಿಸಿದನು. ಇದಕ್ಕಾಗಿ ಋಷಿಗಳಿಗೂ, ಮುನಿಗಳಿಗೂ, ಜ್ಞಾನಿಗಳಿಗೂ ವಾರ್ತೆಯನ್ನು ಕಳುಹಿಸಿದನು. ವೇದವ್ಯಾಸರಾದಿಯಾಗಿ ಅನೇಕರು ಗಂಗಾತೀರದಲ್ಲಿ ಸೇರಿದರು. ಬಾಲಕ ಶೃಂಗಿ ಕೊಟ್ಟ ಶಾಪವನ್ನು ವಿಶಾಪ ಮಾಡುತ್ತೇವೆಂದು ಯಾವ ತಪಸ್ವಿಯೂ ಮುಂದೆ ಬರಲಿಲ್ಲ. ಬದಲಾಗಿ ಆ ಏಳು ದಿನಗಳೂ ಪರಮಪವಿತ್ರವಾದ ಶ್ರೀಮದ್ಭಾಗವತವನ್ನು ಶ್ರವಣಮಾಡುವಂತೆ ರಾಜನಿಗೆ ಸಲಹೆ ಮಾಡಿದರು. ವೇದವ್ಯಾಸರೂ ಮೌನವಾಗಿಯೇ ಇದ್ದರು.

ಪರೀಕ್ಷಿತರಾಜನೂ ಸಹ ಉತ್ತರೆಯ ಗರ್ಭದಲ್ಲಿದ್ದಾಗಲೇ ಕೃಷ್ಣನ ಸುದರ್ಶನಚಕ್ರದಿಂದ ಅಶ್ವತ್ಥಾಮನ ಬ್ರಹ್ಮಾಸ್ತ್ರದಿಂದ ರಕ್ಷಿಸಲ್ಪಟ್ಟ ಭಗವದ್ಭಕ್ತ. ದೇವಲೋಕದ ತಕ್ಷಕನೂ, ಚಿಕ್ಕವಯಸ್ಸಿನ ಬ್ರಹ್ಮಚಾರಿ, ಶೃಂಗಿಯ ವಚನಕ್ಕಾಗಿ ಭೂಲೋಕಕ್ಕೆ ಬಂದು ಪರೀಕ್ಷಿತನನ್ನು ಕಚ್ಚಿ ಸಾಯಿಸಲು ಉದಾಸೀನನಾಗಲಿಲ್ಲ. ಏಳನೆಯ ದಿನ ಆತನು ವಿಪ್ರವೇಶದಿಂದ ಬಂದು ಸೂಕ್ಷ್ಮರೂಪದಿಂದ ಒಂದು ಫಲದಲ್ಲಿ ಪ್ರವಿಷ್ಟನಾಗಿ, ಪರೀಕ್ಷಿತನ ಕೈ ಕಚ್ಚಿದನು. ಪರೀಕ್ಷಿತನು ಮೃತನಾದನು.

ಬಾಲಕ ಶೃಂಗಿ ಮಹಾ ತಪಸ್ವಿಯಾಗಿರಲಿಲ್ಲ. ಉಪನಯನಾನಂತರ ಎರಡು–ಮೂರು ವರ್ಷಗಳ ಕಾಲ ತಪ್ಪದೆ 'ಗಾಯತ್ರೀ ಉಪಾಸನೆ' ಮಾಡುತ್ತಿದ್ದನಷ್ಟೆ, ಉಪಾಸನೆಯ ಫಲ ತಡೆರಹಿತ ಭೇದಕ ಬ್ರಾಹ್ಮಣಾಸ್ತ್ರವಾಗಿ ರಾಜನನ್ನು ಕೊಂದಿತು. ಇದು ಪುರಾಣ ಇತಿಹಾಸಗಳ ಸಂಧಿ ಕಾಲದ ಮಾತು.

(೨) ಮೊಗಲ್ ಚಕ್ರವರ್ತಿ ಅಕಬರ ಬಾದಷಹನ ಕಾಲ. (1740–

1780 AD ) ಅಕಬರನ ಒಂಬತ್ತು ಜನ ಮಂತ್ರಿಗಳಲ್ಲಿ ಬ್ರಾಹ್ಮಣನೂ, ಮೇಧಾವಿಯೂ, ಜಾಣನೂ, ಹಾಸ್ಯಗಾರನೂ ಆದ ಬೀರಬಲ್ಲನೂ ಒಬ್ಬ. ಈತನನ್ನು ಕಂಡರೆ ಬಾದಷಹನಿಗೆ ತುಂಬಾ ವಿಶ್ವಾಸ. ಇಬ್ಬರೂ ಆಗಾಗ್ಗೆ ವೇಶ ಬದಲಾಯಿಸಿಕೊಂಡು ಸಂಚರಿಸುತ್ತಾ ರಾಜ್ಯದಲ್ಲಿನಡೆಯುವ ವಿಷಯಗಳನ್ನು ಸ್ವತಃ ತಿಳಿದುಕೊಳ್ಳುತ್ತಿದ್ದರು. ಒಂದು ದಿನ ಈ ರೀತಿ ರಾಜಧಾನಿಯಲ್ಲಿ ತಿರುಗಾಡುತ್ತಿರುವಾಗ ಯಾಚಕವೃತ್ತಿ ಮಾಡುತ್ತಿದ್ದ ಒಬ್ಬ ಬ್ರಾಹ್ಮಣ ನನ್ನು ಅಕಬರ ನೋಡಿದ. ಆತನು ಬೀರಬಲ್ಲನ ಕಡೆ ತಿರುಗಿ ಅಸಡ್ಡೆ ಮತ್ತು ಜಿಗುಪ್ಸೆಯನ್ನು ವ್ಯಕ್ತಪಡಿಸಿದ. ಬೀರಬಲ್ಲನಿಗೆ ಬಾದಷಹನ ಇಂಗಿತ ಅರಿವಾಯಿತು. ಅವನು ಮನೆ ಸೇರಿದ ಮೇಲೆ ಆ ಬ್ರಾಹ್ಮಣನಿಗೆ ಬರ ಹೇಳಿ ಕಳುಹಿಸಿದನು. ಮಂತ್ರಿಯ ಅಪ್ಪಣೆಯಂತೆ ಬ್ರಾಹ್ಮಣನು ಬಂದು ಬೀರ ಬಲ್ಲನನ್ನು ಭೇಟಿಯಾದನು. ಆಗ ಬೀರಬಲ್ಲನು 'ನೀವು ಇನ್ನು ಮುಂದೆ ಭಿಕ್ಷಾಟನೆ ಮಾಡಬಾರದು. ಆ ಭಿಕ್ಷಾಟನೆಯಿಂದ ಬರುತ್ತಿದ್ದಷ್ಟು ಮೊಬಲಗನ್ನು ನೀವು ಪ್ರತಿದಿನ ನನ್ನ ಮನೆಗೆ ಬಂದು ತೆಗೆದುಕೊಂಡು ಹೋಗಿ. ಭಿಕ್ಷಾಟನೆಗಾಗಿ ವ್ಯಯವಾಗುತ್ತಿದಷ್ಟು ಕಾಲವನ್ನು ತ್ರಿಕಾಲವೂ ತಪ್ಪದೇ ಕೊನೆಯ ಪಕ್ಷ '೧೦೮ ಗಾಯತ್ರೀಜಪಕ್ಕೆ ಉಪಯೋಗಿಸಿ' ಎಂದು ಹೇಳಿದನು. ಆ ಬ್ರಾಹ್ಮಣನು ಆ ಮಾತಿಗೆ ಒಪ್ಪಿದನು.

ಈ ಒಪ್ಪಂದದಂತೆ ಬ್ರಾಹ್ಮಣನು ಪ್ರತಿದಿನ ಬೀರಬಲ್ಲನ ಮನೆಗೆ ಹೋಗಿ ಹಣ ತರುವುದು, ತ್ರಿಕಾಲದಲ್ಲಿಯೂ ತಪ್ಪದೆ ಗಾಯತ್ರೀ ಜಪಮಾಡುವುದು, ಹೀಗೆ ಮಾಡುತ್ತಾ ಬಂದನು. ಸ್ವಲ್ಪ ಕಾಲಾನಂತರ ಭಿಕ್ಷಾಟನೆಯು ತಪ್ಪಿದ್ದರಿಂದಲೂ ಹೆಚ್ಚು ಕಾಲ ಉಳಿಯುತ್ತಿದ್ದುದರಿಂದಲೂ ಗಾಯತ್ರೀ ಜಪಸಂಖ್ಯೆಯನ್ನು ತ್ರಿಕಾಲದಲ್ಲಿಯೂ ೧೦೮ ರಿಂದ ೧೦೦೦ಕ್ಕೆ ಏರಿಸಿದನು. ಕೆಲಕಾಲ ಕಳೆಯುವ ವೇಳೆಗೆ ಅವನ ಮನೆಗೆ ಅವಶ್ಯಕವಾದ ಪರಿಕರಗಳು ಕೇಳದಯೇ ದಾನ, ಧರ್ಮಗಳ ರೂಪವಾಗಿ ಬರಲಾರಂಭಿಸಿದುವು. ಇದರಿಂದ ಅವನು ಬೀರಬಲ್ಲನ ಮನೆಗೆ ಹಣಕ್ಕಾಗಿ ಹೋಗುವುದನ್ನೂ ನಿಲ್ಲಿಸಿದ.

ಜಪಾನುಷ್ಠಾನಕ್ಕೆ ನದ್ಯಾದಿ ಸ್ಥಳಗಳು ಪ್ರಶಸ್ತವೆಂದು ಯಮುನಾನದಿಯ ತೀರದಲ್ಲಿ ಅನುಷ್ಠಾನ ಮಾಡತೊಡಗಿದನು. ಮೂರು ನಾಲ್ಕು ವರ್ಷಗಳ ಕಾಲ ಸತತ ನಿಷ್ಠೆ–ನಿಯಮಗಳಿಂದ ಜಪಿಸಿದ ಫಲವಾಗಿ ಶ್ರೀಗಾಯತ್ರೀ ದೇವಿಯ ಸಾಕ್ಷಾತ್ಕಾರ–ಅನುಗ್ರಹಗಳು ಆತನಿಗೆ ಲಭಿಸಿದುವು. ಬ್ರಹ್ಮಜ್ಞಾನ, ಬ್ರಹ್ಮವರ್ಚಸ್ಸಿನಿಂದ ಬ್ರಾಹ್ಮಣನು ವಿರಾಜಮಾನನಾದನು. ಆತನ

ಪ್ರವಚನಗಳಿಂದಜನರು ಆನಂದಭರಿತರಾಗುತ್ತಿದ್ದರು. ಈವಿಚಾರ ಬೀರಬಲ್ಲನ ಕಿವಿಗೂ ಮುಟ್ಟಿತು. ಅವನು ಆ ವಿಪ್ರನ ದರ್ಶನಕ್ಕೆ ತಾನೇ ಸ್ವತಃ ಬಂದನು. ಅವನು ತೇಜಸ್ಸು, ವಿನಯ ಸಂತುಷ್ಟತೆಗಳು ಬೀರಬಲ್ಲನನ್ನು ಮುಗ್ಧನನ್ನಾಗಿಸಿದುವು. ಬ್ರಾಹ್ಮಣನನ್ನು ಗುರುತಿಸಿದ ಈತನು 'ತಾವು ಏಕೆ ನನ್ನ ಮನೆಗೆ ಬರುವುದನ್ನೇ ನಿಲ್ಲಿಸಿಬಿಟ್ಟಿರಿ?' ಎಂದು ಕೇಳಿದನು. ಅದಕ್ಕೆ ಆ ಬ್ರಾಹ್ಮಣನು 'ತಾವು ನನಗೆ ಶ್ರೀಗಾಯತ್ರೀ ಜಪೋಪಾಸನೆ ಮಾಡಲು ತಿಳಿಸಿದ ದಿನದಿಂದಲೇ ನನ್ನ ದಾರಿದ್ರ್ಯ ನಾಶವಾಯಿತು' ಎಂದು ಕೃತಜ್ಞತೆಯಿಂದ ಉತ್ತರಿಸಿದನು. ಬೀರಬಲ್ಲನು—'ನಾನು ನಿಮಗೊಂದು ದಾರಿಯನ್ನು ತೋರಿಸಿದೆ, ಅಷ್ಟೆ, ಆದರೆ ನೀವು ಅದನ್ನು ಪ್ರಯೋಗಮಾಡಿ ಫಲ ಪಡೆದಿರಿ' ಎಂದು ಹೇಳಿ ಸಂತೋಷಪಟ್ಟನು.

ಬೀರಬಲ್ಲನು ಇದು ಅಭಿಮಾನದ ಮತ್ತು ಹೆಮ್ಮೆಯ ವಿಷಯವೆಂದು ಭಾವಿಸಿ ಬಾದಷಹನನ್ನು ಆ ವಿಪ್ರನ ಸಂದರ್ಶನಕ್ಕೆ ಕರೆತಂದನು. ಬ್ರಾಹ್ಮಣನ ಬ್ರಹ್ಮವರ್ಚಸ್ಸು, ವಿನಯ, ಮೃದುವಾದ, ಗೌರವಯುತವಾದ ಮಾತುಗಳಿಂದ ಅಕಬರನಿಗೆ ತುಂಬಾ ಸಂತೋಷವಾಯಿತು. ಸಂಭಾಷಣೆಗಳು, ಆಶೀರ್ವಾದಗಳು ಎಲ್ಲವೂ ಮುಗಿದುವು. ಆಗ ಬೀರಬಲ್ಲನು 'ಬಾದಷಾ! ಈ ಬ್ರಾಹ್ಮಣರನ್ನು ತಾವು ಎಲ್ಲಿಯಾದರೂ, ಎಂದಾದರೂ ನೋಡಿದ ನೆನಪಿದೆಯೆ?' ಎಂದು ಕೇಳಿದನು. ಅಕಬರನು 'ಇಲ್ಲಸಲ್ಲಾ' ಎಂದು ಉತ್ತರಿಸಿದನು. ಆಗ ಬೀರಬಲ್ಲನು ಆ ಹಿಂದಿನ ಘಟನೆಗಳನ್ನು ಬಾದಷಹನಿಗೆ ಜ್ಞಾಪಿಸಿದನು. ಅಕಬರನಿಗೆ ಆಶ್ಚರ್ಯವಾಯಿತು. 'ಇದು ಹೇಗಾಯಿತು?' ಎಂದು ಬಾದಷಹನು ಕೇಳಿದನು. 'ನಮ್ಮ ಸಮಾಜದಲ್ಲಿ 'ಗಾಯತ್ರೀ' ಎಂಬ ಅಮೂಲ್ಯ ಮಂತ್ರವಿದೆ. ಅದನ್ನು ತಪ್ಪದೆ ನಿತ್ಯವೂ-ಜಪಿಸಿದರೆ ಹಾಗಿದ್ದವರು ಹೀಗಾಗುತ್ತಾರೆ' ಎಂದು ಬೀರಬಲ್ಲನು ವಿವರಿಸಿದನು. ಅಕಬರ ಆಶ್ಚರ್ಯಚಕಿತನಾದನು. ಈಘಟನೆಯು ಉಲ್ಲೇಖ 'ಅಕಬರನಾಮಾ' ಎಂಬ ಅಕಬರನ ವೈಯಕ್ತಿಕ ಘಟನೆಗಳ ದಾಖಲೆಯಲ್ಲಿದೆ ಎಂದು ತಿಳಿದುಬರುತ್ತದೆ.

**(೩) ಸ್ವಾಮಿ ವಿದ್ಯಾರಣ್ಯರು** :—ಸ್ವಾಮಿ ವಿದ್ಯಾರಣ್ಯರು ವಿಜಯನಗರ ಸಂಸ್ಥಾಪಕರು ಹಲವು ಕಾಲ ಆ ರಾಜ್ಯದ ಮಹಾಮಂತ್ರಿಗಳೂ ಆಗಿದ್ದರು. ಬಹಳ ಧೀಮಂತರೂ, ಸಿಷ್ಣಾವಂತರೂ, ಜ್ಞಾನಿಗಳೂ ಆಗಿದ್ದರು. ಒಂದು ಸಾರಿ ಆ ರಾಜ್ಯದಲ್ಲಿ ಭಾರೀಕ್ಷಾಮ ತಲೆದೋರಿತು. ಬೆಳೆಯಿಲ್ಲ, ಮಳೆಯಿಲ್ಲ, ಕುಡಿಯಲೂ ಸಹ ನೀರಿಲ್ಲ ಎಂಬ ಪರಿಸ್ಥಿತಿಯುಂಟಾಯಿತು. ದನ

ಕರುಗಳ ಮೇವಿಗೂ ತೊಂದರೆಯಾಯಿತು. ಜನ ಜಾನುವಾರುಗಳು ಹಸಿವು ಬಾಯಾರಿಕೆಗಳಿಂದ ಕಂಗಾಲಾದವು. ಆಗ ಸ್ವಾಮಿ ವಿದ್ಯಾರಣ್ಯರು ಶ್ರೀ ಗಾಯತ್ರೀ ಪುರಶ್ಚರಣೆ (ಇಪ್ಪತ್ತು ನಾಲ್ಕು ಲಕ್ಷ ಗಾಯತ್ರೀ ಜಪ) ಮಾಡಿದರು. ಇವರ ಶ್ರದ್ಧೆ ಭಕ್ತಿಗಳಿಗೆ ದೇವಿ ಸಂತುಷ್ಟಳಾಗಿ ದರ್ಶನವಿತ್ತಳು. ಸ್ವಾಮಿಗಳು ರಾಜ್ಯದ ದುರ್ಭರ ಕ್ಷಾಮವನ್ನು ಪರಿಹರಿಸಿ ಜನರಿಗೆ ನೆಮ್ಮದಿಯುಂಟಾಗುವಂತೆ ಮಾಡಲು ದೇವಿಯನ್ನು ಬೇಡಿದರು. ದೇವಿಯ ಅನುಗ್ರಹದಿಂದ ರಾಜ್ಯದಲ್ಲಿ ಉತ್ತಮ ಮಳೆಯಾಗಿ ಬೆಳೆ ಬೆಳೆದು ದೇಶ ಸುಭಿಕ್ಷವಾಯಿತು. ಜನರು ಸಂತುಷ್ಟರಾದರು.

(ಆ) **ಶ್ರೀಬಾಗಣ್ಣ (ಶ್ರೀಗೋಪಾಲದಾಸರು)** :—ಇವರು ರಾಯಚೂರು ಜಿಲ್ಲೆಯ ಉತ್ತನೂರುಗ್ರಾಮದಲ್ಲಿ ಜನಿಸಿದವರು. ಚಿಕ್ಕಂದಿನಲ್ಲಿಯೇ ತಂದೆಯನ್ನು ಕಳೆದುಕೊಂಡು ತಾಯಿಯ ಪೋಷಣೆಯಲ್ಲಿ ಬೆಳೆದರು. ದುರ್ದೈವವಶದಿಂದ ಬಂಧು, ಬಾಂಧವರ ವಿರೋಧ, ಅಸೂಯೆ, ಅನಾದರಣೆ ಪ್ರಾರಂಭವಾಯಿತು. ಆದರೂ ಬಾಗಣ್ಣ ಊರಿನ ಹೊರಗಡೆ ಒಂದು ಮರದ ಕೆಳಗೆ ಏಕಾಂತದಲ್ಲಿ ಕುಳಿತು, ಗಾಯತ್ರೀ ಉಪಾಸನೆಯನ್ನು ಮಾತ್ರ ತಪ್ಪದೆ ಮಾಡುತ್ತಿದ್ದನು. ನಾಲ್ಕಾರು ವರ್ಷಗಳಲ್ಲಿ ದೇವಿಯ ಅನುಗ್ರಹದಿಂದ ಬಾಗಣ್ಣನಿಗೆ ದಿವ್ಯಜ್ಞಾನ ಉಂಟಾಯಿತು. ಜ್ಯೋತಿಷಶಾಸ್ತ್ರದ ಜ್ಞಾನವೃದ್ಧಿಯಾಯಿತು. ಆ ಶಾಸ್ತ್ರದ ಆಧಾರದಿಂದ ತ್ರಿಕಾಲಗಳ ಆಗುಹೋಗುಗಳನ್ನೂ, ಫಲಾಫಲಗಳನ್ನೂ, ಪರಿಹಾರ ಕ್ರಮಂಗಳನ್ನೂ ಸಮಂಜಸವಾಗಿ ಹೇಳುತ್ತಿದ್ದನು. ಇದರಿಂದ ಜನರ ಆದರಕ್ಕೆ ಪಾತ್ರನಾದನು. ಕೆಲಕಾಲದಲ್ಲಿ ಆತನ ದಾರಿದ್ರ್ಯ ನಾಶವಾಗಿ ಉತ್ತಮಸ್ಥಿತಿಯುಂಟಾಯಿತು. ಸ್ವಲ್ಪ ಕಾಲ ಕಳೆದ ಮೇಲೆ ಇವನು ಭೃಗು ಋಷಿಗಳ ಅಂಶ ಸಂಭೂತರೂ ಅವತಾರಪುರುಷರೂ ಆದವಿಜಯದಾಸರ ಶಿಷ್ಯರಾಗಿ ಶ್ರೀಗೋಪಾಲದಾಸರೆನಿಸಿಕೊಂಡರು. ಭಗವಂತನನ್ನು ಅಪರೋಕ್ಷೀಕರಿಸಿಕೊಂಡರು. ಅನ್ನದಾನ, ದಾನಧರ್ಮಾದಿಗಳನ್ನೂ, ತೀರ್ಥಯಾತ್ರೆಗಳನ್ನೂ ಮಾಡಿದರು. ಬಹುಸಂಖ್ಯೆಯಲ್ಲಿ ಭಗವಂತನನ್ನು ಕುರಿತ ಸ್ಫೂರ್ತಿದಾಯಕ ಪದ, ಸುಳಾದಿಗಳನ್ನು ರಚಿಸಿ, ಅವನ ಕೀರ್ತಿಯನ್ನು ಕೊಂಡಾಡಿ, ಭಕ್ತಾಗ್ರೇಸರರೆಂಬ ಅಮೂಲ್ಯ ಕೀರ್ತಿಯನ್ನು ಪಡೆದರು. ಇವರು ಗಣಪತಿಯ ಅಂಶ ಸಂಭೂತರಾದ ಅಪರೋಕ್ಷಜ್ಞಾನಿಗಳು.

(ಇ) **ಸ್ವಾಮಿ ವಿರಜಾನಂದರು** :—ಇರುವ ಮಥುರಾ ಪಟ್ಟಣ (U.P)

ದವರು. ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದವರು. ಹುಟ್ಟಿದ ಕೆಲವು ದಿನಗಳಲ್ಲೇ ಮಾಕಾರಿ(Chicken pox)ಗೆ ತುತ್ತಾಗಿ ಎರಡು ಕಣ್ಣುಗಳನ್ನೂ ಕಳೆದುಕೊಂಡು ಹುಟ್ಟುಕುರುಡರಂತಾದರು. ಇವರ ಐದನೆಯ ವಯಸ್ಸಿನಲ್ಲಿಯೇ ಮಾತಾಪಿತೃಗಳಿಬ್ಬರೂ ದೈವಾಧೀನರಾದರು. ಅತ್ತಿಗೆ, ಅಣ್ಣನ ರಕ್ಷಣೆಯಲ್ಲಿ ಕೆಲವು ಕಾಲ ಬೆಳೆದರು. ಸಕಾಲದಲ್ಲಿ ಉಪ ನಯನ ಸಂಸ್ಕಾರವೂ ಆಯಿತು. ತಮ್ಮ ಎಂಟನೆಯ ವಯಸ್ಸಿನಲ್ಲಿಯೇ ಮನೆಯ ವಾತಾವರಣದಿಂದ, ಅತ್ತಿಗೆಯ ಅನಾದರ ತಾತ್ಸಾರಗಳಿಂದ ಬೇಸತ್ತ ಬಾಲಕ ಕೆಲವು ಯಾತ್ರಿಕರೊಡನೆ ಹೃಷೀಕೇಶಕ್ಕೆ ಬಂದನು. ಅಲ್ಲಿ ಒಂದು ಆಶ್ರಮದಲ್ಲಿ ಆಶ್ರಯ ಪಡೆದನು. ಅಲ್ಲಿಯ ಗಾಯತ್ರೀ ಉಪಾಸನೆ ಯನ್ನು ತಾನೂ ಉಪಾಸಿಸಲು ನಿರ್ಧರಿಸಿದನು. ಸರಿ, ಪ್ರಯತ್ನ ಪ್ರಾರಂಭ ವಾಯಿತು. ಪ್ರತಿದಿನ ಪ್ರಥಮದಲ್ಲಿ ಸಾವಿರ ಸಂಖ್ಯೆಯ ಜಪ ಶೀಘ್ರದಲ್ಲಿಯೇ ಮೂರು ಸಾವಿರಕ್ಕೇರಿತು. ಹೀಗೆ ಸುಮಾರು ಮೂರು ವರ್ಷ ಕಳೆಯಿತು. ಶ್ರೀಗಾಯತ್ರೀ ಮಾತೆ ಸಂತುಷ್ಟಳಾಗಿ ಅವಳ ಹೃದಯ ಸಾಕ್ಷಾತ್ಕಾರ ವಾಯಿತು. ಬಾಲಕನ ನಯನಾಂಧತೆಯು ಉಳಿದರೂ, ಅಜ್ಞಾನಾಂಧತೆ ತೊಲಗಿತು. ಯಾವುದನ್ನಾದರೂ ಒಂದು ಸಾರಿ ಕೇಳಿದ ಮಾತ್ರಕ್ಕೇ ಅದನ್ನು ಗ್ರಹಿಸುವ ಸಾಮರ್ಥ್ಯ ಉಂಟಾಯಿತು. ಒಂದು ಸಾರಿ ನಿರ್ದಿಷ್ಟವಾಗಿ ಶ್ರವಣ ಮಾಡಿದ ವೇದಭಾಗಗಳನ್ನು ನಿರಾಯಾಸವಾಗಿ, ಕೇಳಿದಂತೆ ತಪ್ಪಿಲ್ಲದೆ ಪುನರುಚ್ಚರಿಸುತ್ತಿದ್ದನು. ಹೀಗೆ ನಡೆಯಿತು ವೇದಾಧ್ಯಯನ; ಜ್ಞಾನ ಸಂಗ್ರಹ. ತನ್ನ ಹದಿಮೂರು–ಹದಿನಾಲ್ಕನೇ ವಯಸ್ಸಿನಲ್ಲಿ ಸನ್ಯಾಸಾಶ್ರಮ ವನ್ನು ಸ್ವೀಕರಿಸಿದನು. ಒಂದು ದಿನ ಅವನು ಗಂಗಾತೀರದಲ್ಲಿ ಸ್ನಾನಮಾಡು ತ್ತಿದ್ದಾಗ ಒಬ್ಬ ಬ್ರಾಹ್ಮಣನು ಪಾಣಿನಿಯ ಅಷ್ಟಾಧ್ಯಾಯ ಸೂತ್ರಗಳನ್ನು ಮಂತ್ರಗಳಂತೆ ಪಠಿಸಿದ್ದನ್ನು ಕೇಳಿ ವಿರಜಾನಂದರು ಆ ಬ್ರಾಹ್ಮಣನನ್ನು ಅಲ್ಲಿಯೇ ತನ್ನಲ್ಲಿಗೆ ಕರೆಸಿಕೊಂಡು ಆ ಪಾಣಿನಿ ಸೂತ್ರಗಳನ್ನು ಮತ್ತೊಮ್ಮೆ ತಮಗಾಗಿ ಹೇಳಲು ಕೇಳಿಕೊಂಡರು. ಆ ಬ್ರಾಹ್ಮಣನು ಅವರ–ಮಾತಿನಂತೆ ಮತ್ತೊಂದು ಬಾರಿ ಅವುಗಳನ್ನು ಹೇಳಿದನು. ಶ್ರವಣಮಾತ್ರದಿಂದ ಸ್ವಾಮಿ ವಿರಜಾನಂದರ ವ್ಯಾಕರಣಶಾಸ್ತ್ರದ ಪಾಠ ಮುಕ್ತಾಯವಾಯಿತು. ಮುಂದೆ ಅವರು ವ್ಯಾಕರಣ ಶಾಸ್ತ್ರದಲ್ಲಿ ಬಹಳ ಸಂಶೋಧನೆ ಮಾಡಿದರೆಂದು ತಿಳಿದು ಬರುತ್ತದೆ. ಅವರ ಪ್ರತಿಭೆಯನ್ನು ಕೇಳಿದ ಮಥುರಾ ಪೌರರು ಅವರನ್ನು ಮಥುರೆಗೆ ಕರೆದೊಯ್ದರು. ಅಲ್ಲಿ ಅವರು ಅನೇಕ ಸ್ಥಳಗಳಿಂದ ಬರುತ್ತಿದ್ದ

ಶಿಷ್ಯರಿಗೆ ನ್ಯಾಯಶಾಸ್ತ್ರ, ವೇದಾಂತ, ವೇದ ಮತ್ತು ವ್ಯಾಕರಣ ಶಾಸ್ತ್ರಗಳನ್ನು ಬೋಧಿಸುತ್ತಿದ್ದರು. ಅವರ ಶೇಷಜೀವಿತವನ್ನು ಅಲ್ಲಿ ಪಾಠಪ್ರವಚನಗಳಲ್ಲಿ ಕಳೆದು ಬ್ರಹ್ಮೈಕ್ಯ ಹೊಂದಿದರು.

(೬) ಶ್ರೀಕೃಷ್ಣಾನಂದರು(ಸ್ವಾಮಿ ಪ್ರಭು ಆಶ್ರಿತ್‌ಜೀ): ಶ್ರೀಕೃಷ್ಣಾನಂದರು ಹತ್ತೊಂಬತ್ತನೆಯ ಶತಮಾನದ ಕೊನೆಯಿಂದ ಇಪ್ಪತ್ತನೆಯ ಶತಮಾನದ ಮಧ್ಯಭಾಗದವರೆಗೂ ಇದ್ದವರು. ಇವರು ಗೃಹಸ್ಥಾಶ್ರಮಿಗಳಾಗಿದ್ದಾಗ ದಕ್ಷಿಣ ಆಫ್ರಿಕಾದಲ್ಲಿ ಒಂದು ಕಾರ್ಖಾನೆಯ ಮಾಲೀಕರಾಗಿದ್ದರು. ಕೆಲಕಾಲಾನಂತರ ಕಾರಣಾಂತರಗಳಿಂದ ಕಾರ್ಖಾನೆ ನಷ್ಟಕ್ಕೊಳಗಾಯಿತು. ಕೆಲಸಗಾರರಿಗೆ ವೇತನ ಕೊಡಲೂ ಸಹ ಇವರಲ್ಲಿ ಹಣವಿಲ್ಲದಂತಾಯಿತು. ಕೆಲಸಗಾರರು ತಮ್ಮ ವೇತನಪಾವತಿಗಾಗಿ ನ್ಯಾಯಾಲಯದ ಮರೆ ಹೊಕ್ಕರು. ಆ-ದೇಶದ ಅಂದಿನ ಪ್ರಚಲಿತ ಕಾನೂನಿನಂತೆ ಇಂತಹ ತಪ್ಪಿಗೆ ಐದು ವರ್ಷ ಕಠಿಣ ಶಿಕ್ಷೆ ಮತ್ತು ಹಣವನ್ನೂ ಸಹ ದಂಡವಾಗಿ ತೆರಬೇಕಿತ್ತು.

ಹಣಕ್ಕಾಗಿ ಕೃಷ್ಣಾನಂದರು ಮಾಡಿದ ಎಲ್ಲಾ ಪ್ರಯತ್ನಗಳೂ ವಿಫಲವಾದುವು. ಯಾರೂ ಇವರ ನೆರವಿಗೆ ಬರಲಿಲ್ಲ. ವ್ಯವಹಾರವು ನ್ಯಾಯಾಲಯದ ತೀರ್ಪಿಗೆ ಬರಲು ಇನ್ನು ಒಂದು ದಿವಸ ಮಾತ್ರ ಉಳಿದಿತ್ತು. ಆಗ ಕೃಷ್ಣಾನಂದರು ಅಲ್ಲಿನ ಒಬ್ಬ ಧಾರ್ಮಿಕ ಪ್ರವೃತ್ತಿಯ ವ್ಯಕ್ತಿಯನ್ನು ಭೇಟಿ ಮಾಡಿ ತಮ್ಮ ಸ್ಥಿತಿಯನ್ನು ತಿಳಿಸಿ ತಮಗಾಗಿ ಭಗವಂತನಲ್ಲಿ ಪ್ರಾರ್ಥಿಸಿ ತಮ್ಮನ್ನು ಈ ದುಃಸ್ಥಿತಿಯಿಂದ ಪಾರುಮಾಡಲು ಪ್ರಾರ್ಥಿಸಿದರು. ಆಗ ಆ ವ್ಯಕ್ತಿಯು ನೀವೇ ನೇರವಾಗಿ ಭಗವಂತನನ್ನು ಪ್ರಾರ್ಥಿಸುವುದು ಉತ್ತಮ ಎಂದು ಹೇಳಿ 'ಶ್ರೀಗಾಯತ್ರೀ ಎಂಬ ಈ ಮಂತ್ರವನ್ನು ನಾಳೆ ನಿಮ್ಮ ವ್ಯಾಜ್ಯ ವಿಚಾರಣೆಗೆ ಬರುವವರೆಗೆ ಸ್ವಲ್ಪ ಕಾಲವನ್ನೂ ವ್ಯಯಮಾಡದೆ ಸಾಧ್ಯವಾದಷ್ಟು ಸಾರಿ ಮನಸಾ ಜಪಿಸಿರಿ. ಮಾತೆ ನಿಮಗೆ ಖಂಡಿತ ನೆರವಾಗುತ್ತಾಳೆ' ಎಂದು ತಿಳಿಸಿದರು. ಕೃಷ್ಣಾನಂದರಿಗೆ ಉಳಿದಿದ್ದುದು ಇದೊಂದೇ ಮಾರ್ಗ. ಇವರು ಆ ವ್ಯಕ್ತಿಯ ಮಾತಿನಂತೆ ತಮ್ಮ ಜಪವನ್ನು ಪ್ರಾರಂಭಿಸಿದರು. ಮರುದಿನ ಹನ್ನೊಂದು ಗಂಟೆಗೆ ವಿಚಾರಣೆಗೆ ಬರಬೇಕಾಗಿದ್ದ ಈ ವ್ಯಾಜ್ಯ ಸಾಯಂಕಾಲ ಐದು ಗಂಟೆಗೆ ಬಂತು. ಅವರೆಗೆ ಕೃಷ್ಣಾನಂದರು 'ಶ್ರೀಗಾಯತ್ರೀ ಜಪ'ವನ್ನು ಅವಿರತವಾಗಿ ಮಾಡುತ್ತಲೇ ಇದ್ದರು. ಆ

ವರೆಗೂ ವಿಚಾರಣೆ ನಡೆಸಿ ದಣಿದಿದ್ದರೂ ಸಹ ನ್ಯಾಯಾಧೀಶರು ಶಾಂತಚಿತ್ತ ರಾಗಿಯೇ ಇವರ ವಿಚಾರಣೆಯನ್ನು ನಡೆಸಿದರು ಕೂಡಲೇ ತೀರ್ಪನ್ನೂ ಸಹ ನೀಡಿದರು. ತೀರ್ಪೇನೆಂದರೆ—'ಕೃಷ್ಣಾನಂದರು ಬೇರೆ ಉದ್ಯೋಗಕ್ಕೆ ಸೇರಿ ಬರುವ ಹಣದಿಂದ ಪ್ರತಿತಿಂಗಳೂ ಐದು ಪೌಂಡುಗಳನ್ನು ನ್ಯಾಯಾಲ ಯಕ್ಕೆ ಜಮಾ ಮಾಡಬೇಕು. ಮತ್ತು ಕಾರ್ಖಾನೆಯ ಕೆಲವು ಸಾಮಾನು ಗಳನ್ನು ಮಾರಿ ಬರುವ ಹಣದಿಂದ ಕೆಲಸಗಾರರಿಗೆ ಭಾಗಶಃ ವೇತನ ಕೊಡ ಬೇಕು.' ಶ್ರೀಕೃಷ್ಣಾನಂದರಿಗೆ ಕಾರಾಗೃಹವಾಸ ತಪ್ಪಿತು.

ಕೆಲವು ಕಾಲಾನಂತರ ಇವರು ಭಾರತಕ್ಕೆ ಬಂದರು. ತಮ್ಮ ಆಸ್ತಿಯನ್ನು ತಮ್ಮ ಕುಟುಂಬದವರಿಗೆ ಬರೆದು ತಾವು ಸನ್ಯಾಸ ಸ್ವೀಕರಿಸಿದರು. 'ಪ್ರಭು ಆಶ್ರಿತ ಸ್ವಾಮೀಜಿ' ಎಂದು ಹೆಸರಿಟ್ಟುಕೊಂಡರು. ಗಾಯತ್ರೀ ಉಪಾಸನೆ ಯನ್ನು ಮುಂದುವರಿಸಿ ಆಕೆಯ ಸಾಕ್ಷಾತ್ಕಾರವನ್ನೂ ಪಡೆದರು. ಇವರು 'ಗಾಯತ್ರೀ ರಹಸ್ಯ' ಎಂಬ ಒಂದು ಉಜ್ವಲ ಗ್ರಂಥವನ್ನು ಉರ್ದು ಭಾಷೆ ಯಲ್ಲಿ ಬರೆದಿದ್ದಾರೆ. ಇದು ಇಂಗ್ಲಿಷ್ ಮತ್ತು ಕನ್ನಡ ಭಾಷಗಳಿಗೆ ಅನು ವಾದವಾಗಿದೆ. ಮೈಸೂರಿನ ಶ್ರೀಗಾಯತ್ರಿ ಪ್ರೆಸ್ಸಿನಲ್ಲಿ ಮುದ್ರಿತವಾಗಿದೆ.

(೭) ಎ. ಜಿ. ನಾಗೇಶನ್ (ಅ. ಗಂ. ನಾಗೇಶ್ವರ ಶರ್ಮ) :— ಇದು ಇಪ್ಪತ್ತನೆ ಶತಮಾನದ ಮಧ್ಯಭಾಗದಲ್ಲಿ ನಡೆದ ಘಟನೆ. ಅ. ಗಂ. ನಾಗೇಶ್ವರ ಶರ್ಮ ನಂಜನಗೂಡಿನಲ್ಲಿ ವಾಸವಾಗಿದ್ದವರು. ಆಬಾಲ ಬ್ರಹ್ಮಚಾರಿ. ಶೃಂಗೇರಿ ಜಗದ್ಗುರು ಶ್ರೀ ಶ್ರೀ ಚಂದ್ರಶೇಖರ ಭಾರತೀಸ್ವಾಮಿಗಳವರಿಂದಲೇ ಗಾಯತ್ರೀ ಮಂತ್ರೋಪದೇಶವನ್ನು ಪಡೆದು ಪ್ರತಿ ದಿವಸ ತ್ರಿಕಾಲ ಸಂಧ್ಯಾ ವಂದನೆ, ಗೊತ್ತಾದ ಸಂಖ್ಯೆಯ ಗಾಯತ್ರೀ ಮಂತ್ರ ಜಪವನ್ನು ಎಡಬಿಡದೆ ಮಾಡುತ್ತಿದ್ದವರು. ಒಮ್ಮೆ ಇವರಿಗೆ ಗಂಟಲು ಕಟ್ಟಿಕೊಂಡು ನೀರು ಕೂಡಾ ಕುಡಿಯಲಾಗದ ಸ್ಥಿತಿ ಒದಗಿತು. ಅವರು ಕೂಡಲೇ ಮೈಸೂರಿಗೆ ಬಂದು ತಜ್ಞರಾದ ಒಬ್ಬ ಪಾಶ್ಚಾತ್ಯ ವೈದ್ಯರಲ್ಲಿ ಕ್ಷ-ಕಿರಣ (X-Ray) ಪರಿಶೀಲನೆಗೆ ಒಳಗಾದರು. ಇವರನ್ನು ಪರೀಕ್ಷಿಸಿದ ವೈದ್ಯರು—ಶ್ವಾಸಕೋಶದಲ್ಲಿ ಅರ್ಬುದ ರೋಗ(cancer)ವು ತೀವ್ರವಾಗಿ ಹರಡಿರುವುದಾಗಿಯೂ, ತಕ್ಷಣ ಶಸ್ತ್ರ ಚಿಕಿತ್ಸೆ(operation)ಗೆ ಒಳಗಾದಲ್ಲಿ ಇನ್ನು ಮೂರು-ನಾಲ್ಕು ತಿಂಗಳ ಕಾಲ ಬದುಕಬಹುದೆಂದೂ ತಿಳಿಸಿದರು. ನಾಗೇಶನ್‌ರವರಿಗೆ ದಿಕ್ಕುತೋಚದೆ ಮತ್ತೆ ಬರುವುದಾಗಿ ಅವರಿಗೆ ತಿಳಿಸಿ ತಮ್ಮ ಸ್ಥಳಕ್ಕೆ ವಾಪಸ್ಸಾದರು. ದಾರಿಯಲ್ಲಿ ಹೀಗೆ ಯೋಚಿಸಿದರು. 'ಸಾಯುವುದೇ ನಿಜವಾದರೆ ಅದು ಈಗಾದರೇನು ?

ಇಲ್ಲವೇ ಇನ್ನು ಮೂರು ತಿಂಗಳಾದರೇನು ? ನಿರಂತರವೂ ಮುಂಬರುವ ಸಾವನ್ನು ಮನದಲ್ಲಿ ನೆನೆಯುತ್ತ ಸವೆಯುವುದಕ್ಕಿಂತ ಈಗಲೇ ಸಾವಿಗೀಡಾಗುವುದೇ ಲೇಸು' ಎಂದು ನಿರ್ಧರಿಸಿದರು. ಶ್ರೀಗಾಯತ್ರೀ ದೇವಿಯಡಿಯಲ್ಲಿ ಪ್ರಾಯೋಪವೇಶ ಪೂರ್ವಕವಾಗಿ ತನ್ನ ಜೀವನವನ್ನು ಸಮರ್ಪಿಸಲು ತೀರ್ಮಾನಿಸಿ ಅಂದಿನಿಂದಲೇ ನಿದ್ರಾಹಾರಗಳನ್ನು ತೊರೆದು ಎಡಬಿಡದೆ ಒಂದೇ ಸಮನೆ ಗಾಯತ್ರೀ ಜಪಾನುಷ್ಠಾನದಲ್ಲಿ ಮಗ್ನರಾದರು. ಈ ಸ್ಥಿತಿಯಲ್ಲಿ ಐದು ದಿವಸಗಳು ಕಳೆದುವು. ಅಂದು ಅವರಿಗೆ ಹಸಿವು ಬಾಯಾರಿಕೆ ತಲೆದೋರಿತು. ನಿರಾತಂಕವಾಗಿ ಹೊಟ್ಟೆತುಂಬ ಊಟ ಮಾಡಿದರು. ನಂತರ ವೈದ್ಯಕೀಯ ಪರೀಕ್ಷೆ ಮಾಡಿಸಿಕೊಳ್ಳಲು ಅದೇ ಶಸ್ತ್ರಚಿಕಿತ್ಸಾ ವಿಚಕ್ಷಣನಲ್ಲಿಗೆ ಹೋಗಿ ಕ್ಷ-ಕಿರಣ ಪರೀಕ್ಷೆಗೆ ಒಳಗಾದರು. ಆಗ ಆ ವೈದ್ಯನು ಕಂಡುದ್ದೇನು ? ಅತಿ ವಿಸ್ಮಯಕಾರಿಯಾದ ಪರಿಸ್ಥಿತಿ. ಅರ್ಬುದರೋಗ ಸಂಪೂರ್ಣವಾಗಿ ಕಣ್ಮರೆಯಾಗಿತ್ತು. ಇಷ್ಟು ಕ್ಷಿಪ್ರದಲ್ಲಿ ಅಂತಹ ಪ್ರಬಲವಾದ ರೋಗ ನಿವಾರಣೆ ಯಾದುದಾದರೂ ಹೇಗೆ ? ಎಂದು ವೈದ್ಯನು ಕೇಳಲು—ಶ್ರೀಗಾಯತ್ರೀ ಮಹಾಮಂತ್ರನೆಂಬ ದಿವ್ಯೌಷಧಿಯೇ ಚಿಕಿತ್ಸೆಯನ್ನೇ ಕಾಣದ ರೋಗಕ್ಕೆ ಸೂಕ್ತ ಮದ್ದು ' ಎಂದು ಹೇಳಿದ್ದನ್ನು ಕೇಳಿ ಪಾಶ್ಚಾತ್ಯ ವೈದ್ಯನಿಗೆ ಅವರ್ಣನೀಯ ವಿಸ್ಮಯವಾಯಿತು.

('ಸಂಧ್ಯಾ-ಸಾರ-ಸರ್ವಸ್ವ' (ಮೊದಲನೆಯ ಭಾಗ) ಬುರುಗನಹಳ್ಳಿ ಭೀಮಸೇನ ಶರ್ಮ ವಿರಚಿತ-ವೇದ(ಮಾತಾ)ಪ್ರಕಾಶನ-ಬೆಂಗಳೂರು ಇದರಲ್ಲಿ ಪ್ರಕಾಶಕರ ನುಡಿಯಲ್ಲಿ ನಾಗೇಶ್ವನ್‌ರವರೇ ಮೇಲ್ಕಂಡ ವಿಷಯವನ್ನು ತಿಳಿಸಿರುತ್ತಾರೆ. 1979)

ಇವರದೇ ಮತ್ತೊಂದು ಸಂದರ್ಭ. ಶ್ರೀನಾಗೇಶನ್‌ರವರು ಬೆಂಗಳೂರಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದ ಸಮಯ. ಆ ವೇಳೆಗಾಗಲೇ ಅವರಿಗೆ ಮಂತ್ರೋಪದೇಶವಾಗಿತ್ತು. ಗೊತ್ತಾದ ಸಂಖ್ಯೆಯಲ್ಲಿ ಶ್ರೀಗಾಯತ್ರೀ ಮಂತ್ರ ಜಪವನ್ನು ತಪ್ಪದೆ ಪ್ರತಿ ದಿವಸ ಮಾಡುತ್ತಿದ್ದರು. ಒಂದು ದಿನ ಸಂಜೆ ಇವರು ಸೈಕಲ್‌ಮೇಲೆ ಲಾಲ್‌ಬಾಗ್ ತೋಟದ ಉತ್ತರಕಡೆಯ ಹೆಬ್ಬಾಗಿಲಿನ ಬಳಿಯಿಂದ ಪೂರ್ವದಿಕ್ಕಿನ ಹೆದ್ದಾರಿಯಲ್ಲಿ ಒಂಟಿಯಾಗಿ ಹೋಗುತ್ತಿದ್ದರು. ಕಾವಿಬಟ್ಟೆ, ಜಟೆ, ರುದ್ರಾಕ್ಷಿ, ತ್ರಿಶೂಲ, ದಂಡ ಮುಂತಾದುವನ್ನು ಧರಿಸಿ ಅದೇ ಹಾದಿಯಲ್ಲಿ ಇವರು ಹೋಗುತ್ತಿದ್ದ ದಿಕ್ಕಿಗೇ ಹೋಗುತ್ತಿದ್ದ ಒಬ್ಬ ವ್ಯಕ್ತಿಯನ್ನು ನೋಡಿ, ಆತನು ಮಹಾತ್ಮನೆಂದು ಬಗೆದು

ವಾಹನದಿಂದಿಳಿದು ನಮಸ್ಕರಿಸಿದರು. ಇವರು ಒಂಟಿಯಾಗಿ ನಿಸ್ಸಹಾಯಕ ರಾಗಿರುವುದನ್ನು ಗಮನಿಸಿದ ಆ ವ್ಯಕ್ತಿ—ಮೌನದಿಂದ ತನ್ನನ್ನೇ ಹಿಂಬಾಲಿಸ ಬೇಕೆಂದೂ, ತನ್ನ ಇಷ್ಟದೇವತೆಗೆ ಬಲಿಕೊಡಬೇಕಾಗಿರುವುದೆಂದೂ, ಪ್ರತಿಭಟಿ ಸಿದರೆ ಚೂರಿಯಿಂದ ಇರಿದು ಕೊಲ್ಲುವುದಾಗಿಯೂ ಬೆದರಿಸಿದನು. ನಾಗೇಶನ್‌ರವರಿಗೆ ದಿಕ್ಕುತೋರದೆ ಶ್ರೀಗಾಯತ್ರೀ ಮಂತ್ರವನ್ನು ಮನಸ್ಸಿ ನಲ್ಲಿಯೇ ಜಪಿಸುತ್ತ ಆ ವ್ಯಕ್ತಿಯನ್ನು ಹಿಂಬಾಲಿಸಿದರು. ಸ್ವಲ್ಪದೂರ ಸಾಗಿತು. ಅವರಿಬ್ಬರ ಅಂತರ ಸುಮಾರು ಹತ್ತು ಗಜವಿರಬೇಕು, ಹಠಾತ್ತನೆ —'ನಿಲ್ಲು, ತಡಮಾಡದೆ ಸೈಕಲ್ ಹತ್ತಿ ಹಿಂದಿರುಗು' ಎಂದು ಯಾವುದೋ ಸ್ತ್ರೀ ವ್ಯಕ್ತಿ ಆಜ್ಞಾಪಿಸಿದಂತೆ ಅವರಿಗೆ ಭಾಸವಾಯಿತು. ತಕ್ಷಣವೇ ಶ್ರೀಗಾಯತ್ರೀ ಮಂತ್ರವನ್ನು ಜಪಿಸುತ್ತ ಸೈಕಲನ್ನು ಹಿಂದುರುಗಿಸಿ, ಹತ್ತಿ, ವೇಗವಾಗಿ ಧಾವಿಸಿದರು. ಆ ವ್ಯಕ್ತಿ ಹಿಂದಿರುಗಿ ಚೂರಿಯಿಂದ ಗುರಿಯಿಟ್ಟು ಹೊಡೆದನು. ಆದರೆ ಅದು ಗುರಿತಪ್ಪಿ ಪಕ್ಕದಲ್ಲಿ ಬಿದ್ದಿತು. ಅವನೂ ಹಿಂಬಾಲಿ ಸಿದ. ಆದರೆ ಆ ವೇಳೆಗೆ ಲಾಲ್‌ಬಾಗ್ ಉತ್ತರ ದಿಡ್ಡಿಬಾಗಿಲ ಬಳಿ ಬಂದಿದ್ದ ರಿಂದ ಜನಜಂಗುಳಿಯನ್ನು ನೋಡಿ ಆ ಕ್ರೂರ ವ್ಯಕ್ತಿ ಹಿಂದೆ ಸರಿದ. ಶ್ರೀ ನಾಗೇಶನ್‌ರವರು ಪ್ರಾಣಾಪಾಯದಿಂದ ಪಾರಾದರು.

(ಈ ವಿಷಯವೂ ಸಹ ಮೇಲೆ ತಿಳಿಸಿದ ಪುಸ್ತಕದಲ್ಲಿಯೇ ಲೇಖಕರ ನುಡಿ ಯಲ್ಲಿದೆ.)

**ಅರುಣ :** ಇವನು ಒಬ್ಬ ದಾನವ. ಈತನು ಶ್ರೀಗಾಯತ್ರೀ ಮಂತ್ರಾನು ಷ್ಠಾನದ ಮಹಿಮೆಯಿಂದ ಬ್ರಹ್ಮನನ್ನು ಮೆಚ್ಚಿಸಿದನು. ಆತನಿಂದ 'ತನಗೆ ಯಾರಿಂದಲೂ ಸಾವು ಬಾರದಂತೆ' ವರವನ್ನು ಪಡೆದನು. ಹೀಗಾಗಿ ಇವನು ಲೋಕಕಂಟಕನಾದನು. ದೇವತೆಗಳು ಬೃಹಸ್ಪತಿಯಲ್ಲಿ ಮೊರೆಯಿಟ್ಟರು. ಬೃಹಸ್ಪತಿಯು ಅರುಣನ ಬಳಿಗೆ ಹೋಗಿ ಮಾತನಾಡುವ ಸಂದರ್ಭದಲ್ಲಿ 'ನಾವಿಬ್ಬರೂ ಮಿತ್ರರು, ಶ್ರೀಗಾಯತ್ರೀ ದೇವಿಯು ನಮಗೂ ಹಾಗೂ ನಿನಗೂ ಒಬ್ಬಳೇ ಉಪಾಸ್ಯ ದೇವತೆಯಾಗಿದ್ದಾಳೆ' ಎಂದು ಹೇಳಿದನು. ಆಗ ಅರುಣನು, ದೇವತೆಗಳ ಉಪಾಸ್ಯದೇವತೆಯು ಹಾಗೂ ಅವರ ಸಂಗಡಕ್ಕೆ ಸೇರಿದ ಗಾಯತ್ರಿಯನ್ನು ತಾನು ಉಪಾಸನೆ ಮಾಡುವುದು ಸರಿಯಲ್ಲ ವೆಂದು ಭಾವಿಸಿ ಶ್ರೀಗಾಯತ್ರೀ ಪುನಶ್ಚರಣೆಯನ್ನು ಬಿಟ್ಟುಬಿಟ್ಟನು. ಇದ ರಿಂದಾಗಿ ಈತನು ತೇಜೋಹೀನನಾದನು. ಆಗ ದೇವತೆಗಳ ಪ್ರಾರ್ಥನೆ

ಯಂತೆ ದುರ್ಗೆಯು ಭ್ರಮರರೂಪದಿಂದ ಈತನನ್ನು ಮುತ್ತಲಾಗಿ ಈತನು ಸತ್ತನು (ದೇ. ಭಾ. ೧೦–೧೩).

ಹೀಗೆ ಇನ್ನೂ ಅನೇಕ ಮಹನೀಯರು 'ಶ್ರೀಗಾಯತ್ರೀ' ಉಪಾಸನೆಯನ್ನು ಮಾಡಿ ತಮ್ಮ ಜೀವನವನ್ನು ಸಾರ್ಥಕಪಡಿಸಿಕೊಂಡಿರುತ್ತಾರೆ.

ನೀರು ಹಿಂದಿನ ಯುಗದಲ್ಲಿ ಬಾಯಾರಿದವರ ನೀರಡಿಕೆಯನ್ನು ತಣಿಸುತ್ತಿತ್ತು. ಇಂದೂ ತಣಿಸುತ್ತಿದೆ. ಕಳೆದ ಯುಗದಲ್ಲಿ ಸೂರ್ಯನು ಬೆಳಕು, ಶಾಖ, ಹಾಗೂ ಮಳೆಯನ್ನು ನೀಡುತ್ತಿದ್ದನು, ಈಗಲೂ ನೀಡುತ್ತಿದ್ದಾನೆ. ಅದೇ ರೀತಿ ಗಾಯತ್ರೀ ಮಂತ್ರದ ಮೂಲಕ ನಮ್ಮ ಪೂರ್ವಜರು ಲಾಭ ಪಡೆಯುತ್ತಿದ್ದರೆ ಇಂದು ನಾವೂ ಪಡೆಯಬಲ್ಲೆವು. ಆದರೆ ಅನನ್ಯಭಕ್ತಿ, ಪೂರ್ಣ ಶ್ರದ್ಧೆ, ನಿರ್ವ್ಯಾಜ ಪ್ರೇಮ, ಅಖಂಡ ವಿಶ್ವಾಸ ಮತ್ತು ವಿಧಿಗನುಸಾರ ಅವಿರತ ಪ್ರಯತ್ನವಿದ್ದರೆ ಮಾತ್ರ. ಪರಮಾತ್ಮನ ಆದೇಶವು ಎಲ್ಲಾ ಯುಗಗಳಲ್ಲಿಯೂ, ಎಲ್ಲಾ ಸ್ಥಾನಗಳಲ್ಲಿಯೂ ಒಂದೇ ರೀತಿ ಪ್ರಭಾವವನ್ನು ಬೀರುತ್ತದೆ ಎಂಬುದನ್ನು ನಾವು ಮರೆಯಬಾರದು. ಕುಲಕ್ಕೊಂದು, ಜಾತಿಗೊಂದು, ದೇಶಕ್ಕೊಂದು, ಧರ್ಮಕ್ಕೊಂದು ಗಾಯತ್ರಿಯಿಲ್ಲ, ಎಲ್ಲಕ್ಕೂ ಇರುವುದು ಒಂದೇ ಗಾಯತ್ರೀ.



ಮುಕ್ತಾ ವಿದ್ರುಮ ಹೇಮನೀಲ ಧವಳಚ್ಛಾಯೈರ್ಮುಖೈಸ್ತ್ರೀಕ್ಷಣೈಃ।
ಯುಕ್ತಾಮಿಂದು (ಕಲಾ) ನಿಬದ್ಧರತ್ನ ಮುಕುಟಾಂ ತತ್ತ್ವಾರ್ಥ ವರ್ಣಾತ್ಮಿಕಾಂ ।
ಗಾಯತ್ರೀಂ ವರದಾಽಭಯಾಂಕುಶಕಶಾಃ ಶುಭ್ರಂ (ಶೂಲಂ) ಕಪಾಲಂ ಗಧಾಂ ।
ಶಂಖಂ ಚಕ್ರಮಥಾರವಿಂದಯುಗಳಂ ಹಸ್ತೈರ್ವಹಂತೀಂ ಭಜೇ ॥

# ಶ್ರೀಗಾಯತ್ರೀ ಮಂತ್ರ ವಿವರಣೆ

**ಪ್ರಣವ** = ಓಂ 1
**ವ್ಯಾಹೃತಿ** = ಭೂರ್ಭುವ ಸ್ಸ್ವಃ 2
**ಗಾಯತ್ರೀ** = ತತ್ಸವಿತುರ್ವರೇಣ್ಯಂ (ವರೇಣೀಯಂ) 3
ಭರ್ಗೋ ದೇವಸ್ಯ ಧೀಮಹಿ 4
ಧಿಯೋ ಯೋ ನಃ ಪ್ರಚೋದಯಾತ್ ॥ 5

(ಇದನ್ನು 'ಪಂಚಾವಸಾನ ಗಾಯತ್ರೀ' ಎನ್ನುತ್ತಾರೆ.)

**ಕನ್ನಡ ಪದ್ಯರೂಪ :** ಆ ಸವಿತೃ ದೇವನ ಶ್ರೇಷ್ಠತಮವಾದ। ತೇಜಸ್ಸನ್ನು ಕುರಿತು ನಾನು ಧ್ಯಾನಿಸುವೆನು । ಪ್ರಚೋದಿಸಲಿ (ಪ್ರೇರೇಪಿಸಲಿ) ಆ ದೇವ ನಮ್ಮ ಬುದ್ಧಿಗಳ ॥

**ಯಃ ನಃ ಧಿಯಃ ಪ್ರಚೋದಯಾತ್ ತತ್ಸವಿತುಃ ದೇವಸ್ಯ ವರೇಣ್ಯಂ ಭರ್ಗಃ ತತ್ ಧೀಮಹಿ**

**ಮತ್ತೊಬ್ಬ ವಿದ್ವಾಂಸರು :** ಯಃ ನಃ ಧಿಯಃ ಪ್ರಚೋದಯಾತ್ (ತಸ್ಯ) ಸವಿತುಃ ದೇವಸ್ಯ ಭರ್ಗಃ ವರೇಣ್ಯಂ ತತ್ ಧೀಮಹೀ.

ಗಾಯತ್ರೀ ಮಂತ್ರದ ಪದಗಳನ್ನು ವಿವಿಧ ರೀತಿಯಲ್ಲಿ ಅನ್ವಯಮಾಡಿ, ಆ ಪದಗಳಿಗೆ ವಿಧವಿಧವಾದ ಅರ್ಥಗಳನ್ನೂ ಅಳವಡಿಸಿ ಮಂತ್ರಾರ್ಥಗಳನ್ನು ವಿದ್ವಾಂಸರು ಹೊರಸೂಸಿರುತ್ತಾರೆ.

(೧) ಭೂರ್ಭವಸ್ಸುವಃ ವರೇಣ್ಯಂ ಯಃ ನಃ ಧಿಯಃ ಪ್ರಚೋದಯಾತ್ ಸವಿತುಃ ದೇವಸ್ಯ ತತ್ ಭರ್ಗಃ ಓಂ ಧೀಮಹಿ ॥

(೨) ಭೂರ್ಭವಸ್ಸುವಃ ಸವಿತುಃ ಯೋ ನಃ ಧಿಯಃ ಪ್ರಚೋದಯಾತ್ ತತ್ ದೇವಸ್ಯ ವರೇಣ್ಯಂ ಭರ್ಗಃ ಓಂ ಧೀಮಹಿ ॥

(೩) ಓಂ ಯಃ ನಃ ಧಿಯಃ ಪ್ರಚೋದಯಾತ್ ಸವಿತುಃ ದೇವಸ್ಯ ತತ್ ಭೂರ್ಭವಸ್ಸುವಃ ವರೇಣ್ಯಂ ಭರ್ಗೋ ಧೀಮಹಿ ॥

(೪) ಸವಿತುಃ ದೇವಸ್ಯ ಯತ್ ವರೇಣ್ಯಂ ಭರ್ಗಃ ನೋ ಧಿಯಃ ಪ್ರಚೋದಯಾತ್ ತತ್ ಧೀಮಹಿ (ಕೀದೃಶಂ ತತ್) ಭೂರ್ಭುವಃ ಸುವಃ (ಪುನಃ ಕೀದೃಶಂ ?) ಓಂ ॥

(೫) ಸವಿತು ದೇವಸ್ಯ ತದ್ಭರ್ಗಃ ಓಂ ಧೀಮಹಿ ಭೂರ್ಭುವಸ್ಸುವಃ ವರೇಣ್ಯಂ ಯೋ ನೋ ಧಿಯಃ ಪ್ರಚೋದಯಾತ್ ॥

(೬) ತತ್ ದೇವಸ್ಯ ವರೇಣ್ಯಂ ಭರ್ಗಃ ಓಂ ಧೀಮಹಿ ಭೂರ್ಭುವಸ್ಸುವಃ ಸವಿತುರ್ಯೋ ನೋ ಧಿಯಃ ಪ್ರಚೋದಯಾತ್ ॥

(೭) ಸವಿತುರ್ದೇವಸ್ಯ ತದ್ಭೂರ್ಭುವಸ್ಸುವಃ ವರೇಣ್ಯಂ ಭರ್ಗೋ ಧೀಮಹಿ ಓಂ ಯಃ ನಃ ಧಿಯಃ ಪ್ರಚೋದಯಾತ್ ॥

(೮) ತತ್ ಸವಿತುರ್ದೇವಸ್ಯ ಓಂ ಭೂರ್ಭುವಸ್ಸುವರ್ವರೇಣ್ಯಂ ಭರ್ಗೋ ಧೀಮಹಿ ಧಿಯಃ ಪ್ರಚೋದಯಾತ್ ॥

(೯) ತತ್ ಓಂ ಧೀಮಹಿ ಭೂರ್ಭವಸ್ಸುವ ರ್ವರೇಣ್ಯಂ ಸವಿತು ರ್ದೇವಸ್ಯ ಭರ್ಗಃ ಯೋ ನೋ ಧಿಯಃ ಪ್ರಚೋದಯಾತ್ ॥

ಗಾಯತ್ರೀ ಮಂತ್ರ ಕುರಿತಾದ ಸಂಭಾವ್ಯಮಾನವಾದ ನಾನಾ ವಿಧವಾದ ಅರ್ಥಗಳಲ್ಲಿ ಕೆಲವನ್ನು ಸಂಗ್ರಹಿಸಿ ಬರೆಯಲಾಗಿದೆ. ಈ ಅರ್ಥಗಳೆಲ್ಲಾ ಸುಮಾರು ಒಂದೇ ರೀತಿಯವುಗಳಾಗಿದ್ದರೂ ಶಾಬ್ದಬೋಧದಲ್ಲಿ ತುಸು ತುಸು ಅಂತರವಿರುತ್ತದೆ.

**ಪದಗಳ ಅನ್ಯೋನ್ಯ ಸಂಬಂಧ–ಸವಿತುಃ–ದೇವಸ್ಯ–ವರೇಣೀಯಂ–ತತ್–ಭರ್ಗಃ–ಧೀಮಹಿ–ಯಃ–ನಃ–ಧಿಯಃ–ಪ್ರಚೋದಯಾತ್ ॥**

**ಮಂತ್ರಾರ್ಥ :** ಯಃ = ಯಾವ ಪರಮಾತ್ಮನು, ನಃ = ನಮ್ಮ, ಧಿಯಃ = ಬುದ್ಧಿ ಕರ್ಮಾದಿಗಳನ್ನು, ಪ್ರಚೋದಯಾತ್ = ಪ್ರೇರೇಪಿಸುತ್ತಿದ್ದಾನೆಯೋ, ತತ್ = ಆ ಪ್ರಸಿದ್ಧನಾದ, ದೇವಸ್ಯ = ಕ್ರೀಡಾದಿಗುಣವಿಶಿಷ್ಟನಾದ, ಸೂರ್ಯಪ್ರಕಾಶನಾದ, ಸವಿತುಃ = ಜಗತ್ಕಾರಣನಾದ. ವರೇಣ್ಯಂ = ಶ್ರೇಷ್ಠವಾದ, ಭರ್ಗಃ = ಜೀವನಿಗೆ ಜ್ಞಾನಾನಂದ ಕೊಡತಕ್ಕ ತೇಜೋಮಯ ರೂಪವನ್ನು. ಧೀಮಹಿ = ಧ್ಯಾನ ಮಾಡುತ್ತೇನೆ.

ಓಂ = ಸಚ್ಚಿದಾನಂದ ಸ್ವರೂಪನಾದ ಪರಮಾತ್ಮನು ಸರ್ವರಕ್ಷಕನು. ಭೂಃ = ಅವನು ಈ ಪೃಥ್ವಿಯಲ್ಲೆಲ್ಲಾ ವ್ಯಾಪಿಸಿ, ಸರ್ವನಾಯಕನಾಗಿ, ಪರಮಸ್ತುತ್ಯನಾಗಿ, ಪ್ರಾಣಗಳೆಲ್ಲಾ ಪ್ರಾಣಸ್ವರೂಪನಾಗಿದ್ದಾನೆ. ಭುವಃ = ಅವನು ಅಂತರಿಕ್ಷದಲ್ಲೆಲ್ಲಾ ವ್ಯಾಪಿಸಿ, ಸರ್ವಸಂಚಾಲಕನಾಗಿ, ಶಾಂತಿಪ್ರದನಾಗಿ, ಸರ್ವರ ದುಃಖಗಳನ್ನೂ ದೂರೀಕರಿಸುತ್ತಿದ್ದಾನೆ. ಸ್ವಃ = ಅವನು ದ್ಯುಲೋಕದಲ್ಲಿಯೂ ವ್ಯಾಪಕನಾಗಿ ಅದರಣೀಯನೂ ಅಖಂಡನೂ ಆಗಿ ಉಪಾಸ್ಯನಾಗಿ, ಸರ್ವಾಂತರ್ಯಾಮಿ ರೂಪದಲ್ಲಿ ಆನಂದ ರಸಪಾನ

ಮಾಡುತ್ತಿದ್ದಾನೆ. ಸವಿತುः=ಸರ್ವೋತ್ಪಾದಕನೂ,ಸರ್ವಪ್ರೇರಕನೂ ಆದ, ದೇವಸ್ಯ=ಆ ಪ್ರಕಾಶಮಯನೂ, ಸರ್ವದಾತೃವೂ, ಸರ್ವಪ್ರಕಾಶಕನೂ ಆದ, ತತ್‌ವರೇಣೀಯಂ ಭರ್ಗಃ=ಆ ಸರ್ವರಿಗೂ ಸ್ವೀಕರಣೀಯವಾದ, ಪಾಪಬೀಜದಾಹಕವಾದ, ದೈವಿಕ ತೇಜಸ್ಸನ್ನು, ಧೀಮಹಿ=ಧ್ಯಾನಿಸೋಣ, ಧರಿಸೋಣ, ನೆಲಗೊಳಿಸೋಣ. ಯಃ=ಯಾವನು ಸವಿತೃದೇವನೋ, ಅವನು, ನಃ ಧಿಯಃ=ನಮ್ಮ ಬುದ್ಧಿಗಳನ್ನು ಮತ್ತು ಕರ್ಮಗಳನ್ನು, ಪ್ರಚೋದಯಾತ್=ಸನ್ಮಾರ್ಗದಲ್ಲಿ ಸದಾ ಪ್ರೇರಿಸುತ್ತಿರಲಿ.

**ತಾತ್ಪರ್ಯ** : ಯಾವ ಪರಬ್ರಹ್ಮನ ತೇಜಸ್ಸು ಸೂರ್ಯಮಂಡಲಾಂತರ್ಗತವಾಗಿ ನಮ್ಮ ಅಂತಃಕರಣ ವ್ಯಾಪಾರಗಳನ್ನು ಆಯಾ ಇಂದ್ರಿಯಗಳ ಮೂಲಕ ಆಯಾ ಕಾರ್ಯಗಳಲ್ಲಿ ತೊಡಗುವಂತೆ ಪ್ರೇರಿಸುತ್ತದೆಯೋ, ಅಂತಹ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣಭೂತವೆನಿಸಿದ, ಸರ್ವಸ್ವರೂಪವಾಗಿ ಕಂಗೊಳಿಸುವ ಪರಮಾತ್ಮನ ದಿವ್ಯತೇಜಸ್ಸನ್ನು ಸ್ವಸ್ವರೂಪ ಸಾಕ್ಷಾತ್ಕಾರ(ಪರಬ್ರಹ್ಮಜ್ಞಾನೋಪದೇಶ)ಕ್ಕಾಗಿ ಧ್ಯಾನ ಮಾಡುತ್ತೇನೆ.

**ಸಾಯಣಾಚಾರ್ಯರ ಭಾಷ್ಯ** : ಯಾವ ಪರಮಾತ್ಮನು ನಮ್ಮ ಬುದ್ಧಿ ವೃತ್ತಿಗಳನ್ನು ಪ್ರೇರಿಸುತ್ತಲಿರುವನೋ ಪ್ರಕಾಶಮಾನನಾಗಿಯೂ, ಸರ್ವಾಂತರ್ಯಾಮಿಯಾಗಿಯೂ, ಸರ್ವಪ್ರೇರಕನಾಗಿಯೂ, ಜಗತ್‌ಸೃಷ್ಟೃವಾಗಿಯೂ ಇರುವ ಪರಮೇಶ್ವರನ ಆತ್ಮಭೂತವಾದಂಥ, ಶ್ರೇಷ್ಠವಾದ, ಸರ್ವಪ್ರಾಣಿಗಳಿಂದಲೂ ಉಪಾಸ್ಯವಾದ, ಅವಿದ್ಯಾತತ್ಕಾರ್ಯನಾಶಕವಾದ, ಸ್ವಯಂಪ್ರಕಾಶವಾದ ಪರಮಾತ್ಮನ ಸಂಬಂಧಿಯಾದ, ತೇಜಸ್ಸನ್ನು ಧ್ಯಾನ ಮಾಡುತ್ತೇನೆ.

**ಸೂತ ಸಂಹಿತೆಯಲ್ಲಿನ** ಭಾಷ್ಯ : ಅಂತರ್ಯಾಮಿ ರೂಪದಿಂದಿರತಕ್ಕ ಸ್ವಯಂ ಪ್ರಕಾಶನಾಗಿಯೂ, ಚಿದ್ರೂಪನಾಗಿಯೂ, ಸರ್ವಪ್ರಾಣಿಗಳ ಹೃದಯಕಮಲದಲ್ಲಿ ಇರುವವನಾಗಿಯೂ, ಅಂತಃಕರಣಸಾಕ್ಷಿಯಾಗಿಯೂ, ಇರುವ ಆತ್ಮನು ನಮ್ಮ ಬುದ್ಧಿಗಳನ್ನು ಧರ್ಮಜ್ಞಾನಾದಿಗಳಲ್ಲಿ ಪ್ರೇರಿಸುತ್ತಿರುವನೋ ಅಂಥ ಸ್ವಯಂಪ್ರಕಾಶನಾದ, ಸ್ವರೂಪಪ್ರೇರಕನಾದ, ಯಾವ ಆತ್ಮನು ಸರ್ವಪ್ರಾಣಿಗಳಿಂದಲೂ ಸೇವಿಸಲು ಯೋಗ್ಯವಾದ, ಸರ್ವಪಾಪ ನಿವರ್ತಕವಾದ, ಸತ್ಯಜ್ಞಾನಾದಿಲಕ್ಷಣವಾದ, ತನ್ನ ಮಾಯಾಶಕ್ತಿಯಿಂದ ಶಿವ, ವಿಷ್ಣ್ವಾದಿ ರೂಪಗಳನ್ನು ಹೊಂದಿರುವ, ಸೂರ್ಯಮಂಡಲದಲ್ಲಿದ್ದು,

ಸೂರ್ಯದೇವನಿಗೂ ಪ್ರೇರಕನಾಗಿರತಕ್ಕ ಮತ್ತು ವಾಕ್ಕಿಗೂ, ಮನಸ್ಸಿಗೂ ಅಗೋಚರನಾಗಿರುವ ಪರಬ್ರಹ್ಮವಸ್ತುವನ್ನು ಅಂಥಾ ಬ್ರಹ್ಮವೇ ನಾನೆಂಬು ದಾಗಿ ಧ್ಯಾನಮಾಡುತ್ತೇನೆ.

**ಶ್ರೀ ಮಧ್ವಾಚಾರ್ಯರ ಭಾಷ್ಯ :** ಯಾವ ಸೂರ್ಯನಿಯಾಮಕನಾಗಿರುವ ಶ್ರೀಮನ್ನಾರಾಯಣನು ನಮ್ಮ ಬುದ್ಧಿವೃತ್ತಿಗಳನ್ನು ಇಲ್ಲವೇ ಜ್ಞಾನಕರ್ಮೇಂದ್ರಿಯಗಳನ್ನು ಪ್ರೇರಿಸುತ್ತಿದ್ದಾನೆಯೋ ಆ ಕ್ರೀಡಾದಿಗುಣಗಳಿಂದ ಒಡಗೂಡಿದ, ಪ್ರಕಾಶಮಾನವಾದ, ಸರ್ವಜಗತ್ತಿಗೂ ಜನಕವಾಗಿರುವ, ಕಲ್ಯಾಣಗುಣಗಳಿಂದ ನಿಬಿಡವಾಗಿರುವುದರಿಂದಲೇ ಸರ್ವಶ್ರೇಷ್ಠವಾದ, ಶ್ರೀಮನ್ನಾರಾಯಣನ ರೂಪತೇಜೋವಿಶೇಷವನ್ನು ಧ್ಯಾನಮಾಡುತ್ತೇನೆ.

**ಶ್ರೀಶಂಕರಾಚಾರ್ಯರ ವಿವರಣೆ :** ಯಾವ ಸವಿತಾಸೂರ್ಯದೇವನು ನಮಗೆ ಭೇದಭಾವವಿಲ್ಲದೆ, ಭಗವಂತನಲ್ಲಿ ಒಂದಾಗಲು ಯೋಗ್ಯವಾದ, ಅವಿದ್ಯಾನಾಶಕವಾದ, ಪರಮಾತ್ಮನ ದರ್ಶನಪ್ರಾಪ್ತಿ ಮಾಡಿಕೊಳ್ಳಲು ಆ ಸವಿತೃದೇವನ ತೇಜಸ್ಸನ್ನು ತಿಳಿಯಲು ಪ್ರೇರೇಪಿಸಲಿ. ಆ ಪ್ರಸಿದ್ಧನಾದ, ಸರ್ವಾಂತರ್ಯಾಮಿಯೂ ಪರಮೇಶ್ವರನೂ, ಲೋಕಪ್ರಸಿದ್ಧನೂ, ಬುದ್ಧಿ ಪ್ರೇರಕನೂ, ಮಹಾತೇಜಸ್ವಿಯೂ, ದಿವ್ಯಪ್ರಭೆಯನ್ನು ಬೀರುವವನೂ, ಕ್ರೀಡಾತ್ಮಕನೂ, ಆಹ್ಲಾದಕರನೂ, ಮಾನವಹೃದಯದಲ್ಲಿ ಅಜ್ಞಾನ ಅಂಧಕಾರವನ್ನು ನಾಶಮಾಡುವ ಪರಂಜ್ಯೋತಿಯೂ, ಪೂಜಾರ್ಹನೂ, ಶ್ರವಣ, ಮನನ, ನಿದಿಧ್ಯಾಸನಕ್ಕೆ ನಿಲುಕುವವನೂ, ಶಾಂತನೂ, ಆನಂದರೂಪಿಯೂ, ದುಃಖ ಪರಿಹಾರಕನೂ, ಜಗತ್ಸಂಹಾರಕರ್ತನೂ ಆದ ಆ ಪರಮಾತ್ಮನನ್ನು ಧ್ಯಾನರೂಪದಲ್ಲಿ ಧಾರಣೆ ಮಾಡುತ್ತೇನೆ.

**ಶ್ರೀ ವಿದ್ಯಾರಣ್ಯರು :** ಸೂರ್ಯಮಂಡಲಾಂತರ್ಗತವಾಗಿ, ಮಾತು—ಮನಗಳಿಗೆ ಗೋಚರವಾಗದ ಇದ್ದರೂ ಸಹಸ್ರ ಜೀವಿಗಳ ಚೈತನ್ಯಸ್ವರೂಪವಾದ (ಆ ಪರಬ್ರಹ್ಮವಸ್ತುವನ್ನು) ವಿಶ್ವದೊಳಗಣ ಸಮಸ್ತ ವಸ್ತುಗಳ ಸೃಷ್ಟಿ-ಸ್ಥಿತಿ-ಲಯಗಳಿಗೆ ಕಾರಣವಾದ, ಸ್ವಯಂ ಪ್ರಕಾಶದಿಂದಲೂ, ಆತ್ಮಾನಂದದಿಂದಲೂ ಕ್ರೀಡಿಸುತ್ತಿರುವ, ಸಮಸ್ತಕ್ಕೂ ಆಶ್ರಯ ಕೊಟ್ಟು ಎಲ್ಲರ ಮನೋಭೀಷ್ಟಗಳನ್ನು ಸಲ್ಲಿಸಲು ಶಕ್ತಿಯಿರುವ ಮತ್ತು ಎಲ್ಲರಿಂದಲೂ ಪ್ರಾರ್ಥಿಸಲ್ಪಡುವ, ಜೀವಿಗಳು ಅಜ್ಞಾನದಿಂದ ಮಾಡಿದ ಪಾಪಗಳ ಫಲಗಳ

ನ್ನೆಲ್ಲಾ ಸುಟ್ಟು ನಾಶಗೊಳಿಸುವ ಆ ಪರಬ್ರಹ್ಮ ವಸ್ತುವು (ಬ್ರಹ್ಮ ಚೈತನ್ಯವು) ನಮ್ಮ ಅಂತಃಕರಣ ವೃತ್ತಿಗಳನ್ನು ಸನ್ಮಾರ್ಗ ಪ್ರವರ್ತನೆಗಾಗಿ ಪ್ರೇರಿಸಲಿ.

**ವಿಶ್ವಾಮಿತ್ರರು :** ಶ್ರೀಗಾಯತ್ರೀ ಮಂತ್ರದ ಅಧಿದೇವತೆ ಸೂರ್ಯಾಂತ ರ್ಗತ ಪರಬ್ರಹ್ಮವೇ. ಆದುದರಿಂದ ಆ ಬ್ರಹ್ಮವೇ ನಮ್ಮ ಬುದ್ಧಿಗಳ ವೃತ್ತಿ ಗಳನ್ನು ಸನ್ಮಾರ್ಗದೆಡೆಗೆ ಒಯ್ಯಲಿ.

**ಅಗಸ್ತ್ಯ ಮಹರ್ಷಿಗಳು :** ಸೂರ್ಯಮಂಡಲಾಂತರ್ಗತನಾದ ಪರ ಬ್ರಹ್ಮವಸ್ತುವು, ಸ್ವಪ್ರಕಾಶವೂ ಮತ್ತು ಅವಿದ್ಯೆಯಿಂದುಂಟಾದ ಪಾಪ ಭಜಂಕವೂ ಆಗಿರುವುದರಿಂದ ಆ ಬ್ರಹ್ಮವು ನಮ್ಮ ಬುದ್ಧಿವೃತ್ತಿಗಳನ್ನು ಸನ್ಮಾರ್ಗದಲ್ಲಿ ಪ್ರವರ್ತಿಸುವಂತೆ ಪ್ರೇರಿಸಲಿ.

**ನಿರುಕ್ತಭಾಷ್ಯ :** ಯಾವ ಬ್ರಹ್ಮವಸ್ತುವು ಸರ್ವ ಚೈತನ್ಯಾತ್ಮಕವಾಗಿ ನಮ್ಮೆಲ್ಲರ ಹೃದಯದಲ್ಲಿ ನೆಲಸಿ, ನಮ್ಮ ಬುದ್ಧಿವೃತ್ತಿಗಳನ್ನು ಸನ್ಮಾರ್ಗ ದಲ್ಲಿಯೇ ಪ್ರವರ್ತಿಸುವಂತೆ ಪ್ರೇರಿಸಬಲ್ಲುದೋ ಮತ್ತು ನಮಗಂಟಿರುವ ಅವಿದ್ಯಾಪೂರ್ವಕ ಪಾಪಕರ್ಮಗಳನ್ನೆಲ್ಲವನ್ನೂ ದಹಿಸಿ, ನಮ್ಮನ್ನು ಪರಿಶುದ್ಧ ಗೊಳಿಸುವುದೋ, ರವಿಮಂಡಲದಲ್ಲಿ ನೆಲಸಿ ನಿತ್ಯವೂ ಪ್ರಜ್ವಲಿಸುತ್ತಿರುವ ಅಂತಹ ಬ್ರಹ್ಮವಸ್ತುವನ್ನು ನಾವು ನಿರಂತರವೂ ಧ್ಯಾನಿಸಬೇಕಾಗಿರುವು ದರಿಂದ ಈ ವಿಧವಾದ ಅನುಗ್ರಹವನ್ನು ಪಡೆದು ನಾವೂ ಆ ಬ್ರಹ್ಮವಸ್ತು ವನ್ನು ಸದಾ ಭಜಿಸುತ್ತಿರುತ್ತೇವೆ.

**ಖಂಡರಾಜ ದೀಕ್ಷಿತರು :** ಪ್ರತ್ಯಕ್ಷ ದೈವವೆನಿಸಿದ ಯಾವ ಸೂರ್ಯ ದೇವನು ಮಾನವರ ಬುದ್ಧಿವೃತ್ತಿಗಳನ್ನು ಸನ್ಮಾರ್ಗದ ಕಡೆಗೆ ಹೋಗುವಂತೆ ಪ್ರೇರಿಸುತ್ತಾನೆಯೋ, ಅಂತಹ ಸ್ವಪ್ರಕಾಶನಾದ, ಸರ್ವರಿಂದಲೂ ಸೇವ್ಯ ನಾದ ಮತ್ತು ಪಾಪಗಳನ್ನೂ, ಅವಿದ್ಯಾತಮಸನ್ನೂ ಕಳೆದು ಉಪಾಸಕನನ್ನು ಶುದ್ಧನನ್ನಾಗಿಯೂ, ಜ್ಞಾನಿಯನ್ನಾಗಿಯೂ ಮಾಡಬಲ್ಲನೋ ಆ ಸೂರ್ಯ ದೇವನನ್ನು, ಇಲ್ಲವೆ ಸೂರ್ಯಾಂತರ್ಗತ ಚೈತನ್ಯಸ್ವರೂಪವನ್ನು ನಾವೆಲ್ಲರೂ ನಿರಂತರವೂ ಧ್ಯಾನಮಾಡೋಣ.

(ಜೀವಿಗಳ ಅಂತರಾತ್ಮನಾಗಿಯೂ, ಸಾಕ್ಷೀಭೂತನಾಗಿಯೂ, ಅಜ್ಞಾನವೆಂಬ ತಮಸ್ಸನ್ನು ನಿರ್ಮೂಲಿಸುವ ಜ್ಯೋತಿಸ್ವರೂಪನಾಗಿಯೂ, ವಿಶ್ವದ ಸೃಷ್ಟಿ- ಸ್ಥಿತಿ-ಲಯಗಳಿಗೆ ಕಾರಣಭೂತನಾಗಿಯೂ ಇದ್ದು ಜೀವಿಗಳ ಬುದ್ಧಿಗಳನ್ನು

ಸನ್ಮಾರ್ಗದೆಡೆಗೆ ಪ್ರೇರಿಸುವವನಾಗಿಯೂ (ಇರುವ) ಆ ಪರಬ್ರಹ್ಮವಸ್ತು ವನ್ನೇ ನಾವು ಸದಾ ಧ್ಯಾನಿಸುತ್ತಿರುವೆವು.

**ಬೇರೊಬ್ಬರು :** ಪ್ರತ್ಯಕ್ಷ ದೈವನೆನಿಸಿದ ಯಾವ ಸೂರ್ಯದೇವನು ಮಾನವರ ಬುದ್ಧಿವೃತ್ತಿಗಳನ್ನು ಸನ್ಮಾರ್ಗದ ಕಡೆಗೆ ಹೋಗುವಂತೆ ಪ್ರೇರಿಸು ತ್ತಾನೆಯೋ ಅಂತಹ ಸ್ವಪ್ರಕಾಶನಾದ, ಸರ್ವರಿಂದಲೂ ಸೇವ್ಯನಾದ ಮತ್ತು ಪಾಪಗಳನ್ನೂ ಅವಿದ್ಯಾತಮವನ್ನೂ ಕಳೆದು ಉಪಾಸಕನನ್ನು ಶುದ್ಧನನ್ನಾ ಗಿಯೂ, ಜ್ಞಾನಿಯನ್ನಾಗಿಯೂ ಮಾಡಬಲ್ಲನೋ ಆ ಸೂರ್ಯದೇವನನ್ನು ಇಲ್ಲವೇ ಸೂರ್ಯಾಂತರ್ಗತ ಚೈತನ್ಯಸ್ವರೂಪವನ್ನು ನಾವೆಲ್ಲರೂ ನಿರಂತರವೂ ಧ್ಯಾನ ಮಾಡೋಣ.

**ಗಾಯತ್ರಿಗೆ ಆಂಗ್ಲ ಭಾಷಾ ಅರ್ಥ :**

Om=Vishnu, Bhuh=Eternal, Bhuvah=Creator of the world, Suvah=Complete with Bliss/Independent entity, Yah=who, Nah=Om (Devotee), Dhiyah=wisdom/knowledge and right action, Prachodayat=Induce, Govern, Motivate, Tat=that ominplesent, Savituh=That form responsible from creation to salvation, Devasya=Always active without motive like sports/crown among God, Vorenyam=Always prayed by worthy ones, Bhargo=The effulgent form who feeds and sets the world into action, Dhimahi=We meditate upon.

**Vedavyasa**=We meditate upon that form of Lord Narayana, dwelling in the Sun, who induces in us wisdom and right action who is responsible for protection and activation. Who is prayed/worshipped by worthy Souls

with the Vedic hymn Gayatri.

**Yajnavalkya Samhite**—In the heart of every being(not body)i.e. in the heart of every soul called by the name Jiva, He dwells. He is also known as Bhargo, responsible for protection and motivation.

Gayatri mantra first describes the greatness of Lord Narayana by mentioning His extra–ordinary qualities worthy of praise. Then it says, because of that we meditate on the auspicious form of Lord Narayana who induces in us right action.

ಗಾಯತ್ರೀ ಮಂತ್ರವು ಋಗ್ವೇದದಲ್ಲಿ (3-62-10), ಶುಕ್ಲ ಯಜುರ್ವೇದ ದಲ್ಲಿ (3-35-30-2, 36-3) ತೈತ್ತಿರೀಯ ಕೃಷ್ಣ ಯಜುಸ್ಸಂಹಿತೆಯಲ್ಲಿ (4-1), (1-5) ಸಾಮವೇದದ ಉತ್ತರಾರ್ಚಿಕದಲ್ಲಿ (13-3) ತೈತ್ತಿರೀಯ ಆರಣ್ಯಕದಲ್ಲಿ (1-11-1), ಅಥರ್ವವೇದದಲ್ಲಿ (3-10-2) ಮಂತ್ರವಾಗಿ ಪ್ರಸಿದ್ಧವಾಗಿದೆ.

ಶ್ರೀ ಗಾಯತ್ರಿಯೂ ವೇದ ಮಂತ್ರವಾಗಿದೆ. ಇದರಲ್ಲಿ ಗಾಯತ್ರಿಯಲ್ಲಿ 'ಬ್ರಹ್ಮ ಗಾಯತ್ರೀ' ಮತ್ತು 'ವಿಶ್ವಾಮಿತ್ರ ಗಾಯತ್ರೀ' ಎಂದು ಎರಡು ವಿಧ. ವ್ಯಾಹೃತಿರಹಿತವಾದುದು 'ಬ್ರಹ್ಮ ಗಾಯತ್ರೀ.' ವ್ಯಾಹೃತಿಸಹಿತ ವಾದುದು 'ವಿಶ್ವಾಮಿತ್ರ ಗಾಯತ್ರೀ.' ಬ್ರಹ್ಮೋಪದೇಶ ಕಾಲದಲ್ಲಿ 'ವಿಶ್ವಾಮಿತ್ರ ಗಾಯತ್ರೀ'ಯನ್ನೇ ಉಪದೇಶಿಸುವ ಪದ್ಧತಿ ಇದೆ. ಇದಲ್ಲದೆ 'ಜಾತವೇದಸೇ ಸುನವಾಮ ಸೋಮ ಮರಾತೀಯತೋ ನಿದಹಾತಿ ವೇದಃ। ಸನಃ ಪರ್ಷದತಿ ದುರ್ಗಾಣಿ ವಿಶ್ವಾನಾವೇವ ಸಿಂಧುಂದುರಿ ತಾತ್ಯಗ್ನಿಃ॥'(ಋ. ೧-೯೯-೧)ಮತ್ತು 'ತ್ರ್ಯಂಬಕಂಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ। ಉರ್ವಾರುಕಮಿವ ಬಂಧನಾನ್ಮೃತ್ಯೋರ್ಮುಕ್ಷೀಯ ಮಾಮೃತಾತ್ ॥' (ಋ. ೧-೫೯-೧೨) ಎಂಬ ಕ್ರಮವಾಗಿ ೪೪ ಮತ್ತು ೩೨ ಅಕ್ಷರಗಳುಳ್ಳ ಎರಡು ಮಂತ್ರಗಳೂ ೨೪ ಅಕ್ಷರಗಳುಳ್ಳ 'ಗಾಯತ್ರೀ

ಮಂತ್ರವೂ' ಸೇರಿ 'ಶತಾಕ್ಷರ ಗಾಯತ್ರೀ' ಎಂದು ಪ್ರಸಿದ್ಧವಾಗಿದೆ. ಯಜುರ್ವೇದ ೩೬-೩ನೇ ಭಾಗದಲ್ಲಿ ಬರುವ ಗಾಯತ್ರಿಯು 'ದೇವಿ ಬೃಹತೀ' ಛಂದಸ್ಸಿನಲ್ಲಿದೆ. ವ್ಯಾಹೃತಿಗಳಲ್ಲದೆ ಇತರ ಭಾಗಗಳಲ್ಲಿ ಬರುವ ಮೂಲ ಗಾಯತ್ರಿಯು 'ನಿ ಚೃದ್ ಗಾಯತ್ರೀ' ಛಂದಸ್ಸಿನಲ್ಲಿದೆ. ಕಾರಣ ಇವುಗಳಲ್ಲಿ ೨೩ ಅಕ್ಷರಗಳು ಮಾತ್ರ ಇವೆ. ಅಂದರೆ ನಿಜವಾದ ಗಾಯತ್ರೀ ಛಂದಸ್ಸಿಗೆ ಒಂದಕ್ಷರ ಕಡಿಮೆಯಾಗಿದೆ. ಆದುದರಿಂದ ಜಪಮಾಡುವಾಗ ಇಪ್ಪತ್ತು ನಾಲ್ಕು ಅಕ್ಷರಗಳಿಂದ ಕೂಡಿದ ('ವರೇಣ್ಯಂ ಎಂಬುದಕ್ಕೆ ಬದಲಾಗಿ 'ವರೇಣೀಯಂ' ಎಂದು ಹೇಳಬೇಕು) ಗಾಯತ್ರಿಯನ್ನು ಜಪಿಸಬೇಕು. (ತೈ.ಸಂ. 2.5 10.3, 5.3 3.4; ಮೈ.ಸಂ. 1.6.10, ಐ.ಬ್ರಾ. 3.39, ಜೈ. ಬ್ರಾ 1.4.3.2 ತೈ.ಆ. 10.35). ಪ್ರಥಮ ಪಾದದಲ್ಲಿ ಎಂಟು ಅಕ್ಷರ ಗಳೆಂದು ಭಾವಿಸಬೇಕೆಂಬ ಬೃಹದಾರಣ್ಯಕೋಪನಿಷತ್ತಿನ (ಬೃ.ಉ. 5-14 ಶಾ.ಭಾ) ಶಂಕರ ಭಾಷ್ಯದಲ್ಲಿ ಹೇಳಿದೆ. ಆದರೆ 'ವರೇಣ್ಯಂ' ಎಂದು ಮೂರು ಅಕ್ಷರಗಳನ್ನೇ ಉಚ್ಚರಿಸಬೇಕೆಂದು ನಿರ್ಣಯಕಲ್ಪ (ನಿ.ಕ.ಪು. 135) ದಲ್ಲಿ ನಿರ್ಧರಿಸಲಾಗಿದೆ.

ಗಾಯತ್ರೀ ಮಂತ್ರದಲ್ಲಿ ಮೂರು ಪಾದಗಳಿವೆ. ಆರಂಭದಿಂದ 'ವರೇಣ್ಯಮ್' ಎಂಬಲ್ಲಿಯವರೆಗೆ ಮೊದಲನೆಯ ಪಾದ, ಅಲ್ಲಿಂದ ಮುಂದೆ 'ಧೀಮಹಿ' ಎಂಬಲ್ಲಿಯವರೆಗೆ ಎರಡನೆಯ ಪಾದ. ಉಳಿದದ್ದು ಮೂರನೆಯ ಪಾದ(ಜೈ.ಬ್ರಾ. 3.6, ಶಾಂ.ಬ್ರಾ. 10-5-4, ತೈ.ಆ. 10.35. ರೌ.ಬ್ರಾ. 16-11-10).

'ಗಯ' ಶಬ್ದದ ಅರ್ಥ ಇಂದ್ರಿಯಗಳ ಬಲ ಹಾಗೂ ಪ್ರಾಣ ಬಲ. 'ತ್ರ'ದ ಅರ್ಥ ರಕ್ಷಣೆ ಮಾಡುವವರು. ಇಂದ್ರಿಯಗಳ ಒಲ ಜನರನ್ನು ವಿಷಯದ ಕಡೆಗೆ ಸೆಳೆದೊಯ್ದು ಅವರು ದೂಷಣೆಗೆ ಒಳಗಾಗುವಂತೆ ಮಾಡುತ್ತದೆ. ಇದರಿಂದ ರಕ್ಷಿಸುವುದು ಪ್ರಾಣಗಳ ಬಲ. ಬಲಿಷ್ಠವಾದ ಪ್ರಾಣಬಲ ಉಳ್ಳವ ನಾದರೆ ಮೃತ್ಯುವನ್ನೂ ಕೂಡ ತನ್ನ ಹಿಡಿತದಲ್ಲಿಟ್ಟುಕೊಳ್ಳಬಲ್ಲವನಾಗು ತ್ತಾನೆ. ಭೀಷ್ಮಪಿತಾಮಹರು ಶರಶಯ್ಯೆಯಲ್ಲಿ ಹಲವು ತಿಂಗಳುಗಳವರೆಗೆ ಮಲಗಿದ್ದು ಉತ್ತರಾಯಣ ಬರುವವರೆಗೆ ಮೃತ್ಯುವನ್ನು ಹತ್ತಿರ ಬರ ಗೊಡಲಿಲ್ಲ.

ಗಾಯತ್ರಿಗೆ ವೇದಗಳಲ್ಲಿ ಪ್ರಥಮ ಸ್ಥಾನ. ವೇದಗಳಲ್ಲಿ ಬೆಳಗುವ ವಿದ್ಯಾ ಜ್ಯೋತಿ, ಕಾಮಧೇನು ವಿದ್ಯೆ. ಈ ಮಂತ್ರವನ್ನು ವೈದಿಕ ಸಾಹಿತ್ಯದಲ್ಲಿ

ಸರ್ವೋತ್ತಮವೆಂದು ತಿಳಿಸಲಾಗಿದೆ. 'ಸ್ತುತೋಮಯಾವರದಾ ವೇದ ಮಾತಾ' ಇಲ್ಲಿ ಗಾಯತ್ರಿಯನ್ನು 'ವೇದಮಾತಾ' ಎಂದೇ ಸಂಬೋಧಿಸ ಲಾಗಿದೆ. ವೇದವೆಂದರೆ ಜ್ಞಾನ; ಮಾತೆಯೆಂದರೆ ನಿರ್ಮಾಣಮಾಡುವವಳು ಎಂದರ್ಥ. ವರ ಎಂದರೆ ಶ್ರೇಷ್ಠ; ಶ್ರೇಷ್ಠ ಭಾವನೆಗಳನ್ನು ಪ್ರದಾನಮಾಡು ವವಳಾದ್ದರಿಂದ ಈಕೆ 'ವರದಾ' ಎನ್ನಿಸಿಕೊಳ್ಳುತ್ತಾಳೆ. ಈಕೆಯನ್ನು 'ಪಾವನೀ' ಎನ್ನಲಾಗಿದೆ. ಇವಳು 'ಪಾವಮಾನೀ.' ವೇದಗಳಿಗೆ ಇದು ಮೂಲ ವಾಗಿರುವುದರಿಂದ ಇದು 'ವೇದಮಾತಾ' (೧೯–೩೧–೧). ಮೂರು ವೇದ ಗಳ ಮೊದಲ ಮಂತ್ರಗಳೆಲ್ಲವೂ ಗಾಯತ್ರೀ ಛಂದೋರೂಪವಾಗಿಯೇ ಪ್ರಾರಂಭವಾಗಿವೆ. ಈ ಗಾಯತ್ರೀ ಮಂತ್ರದಲ್ಲಿ ಮಹಾಶಕ್ತಿಯು ಅಡಗಿರು ವುದರಿಂದ ಇದನ್ನು 'ಮಂತ್ರರಾಜ' ಅಥವಾ 'ರಾಜಮಂತ್ರ' ಎನ್ನುತ್ತಾರೆ. ಸರ್ವದೇವಶಕ್ತಿ ಸಮೂಹರೂಪವಾದುದರಿಂದ 'ಸರ್ವಶಕ್ತಿಮಯಿ. 'ಇದನ್ನು 'ಸಪ್ತಕೋಟಿ ಮಹಾಮಂತ್ರ ಮಾತಾ' ಎಂದೂ ಕರೆಯುತ್ತಾರೆ. ಸವಿತೃ ದೇವನಿಗೆ ಪ್ರಕಾಶವನ್ನು ಕೊಡುವುದರಿಂದಲೂ, ಸವಿತೃದೇವನ ಸಂಬಂಧ ಮಂತ್ರವಾಗಿರುವುದರಿಂದಲೂ ಇದನ್ನೇ 'ಸಾವಿತ್ರೀ ಮಂತ್ರ' ಎಂದೂ ನಿರ್ದೇಶಿಸುತ್ತಾರೆ. (ಭರದ್ವಾಜ ಸ್ಮೃತಿ)' ಇದನ್ನು 'ಗುರುಮಂತ್ರ'ವೆಂಬು ದಾಗಿಯೂ ಕರೆಯುವರು. ಗಾಯತ್ರಿಗಿಂತ ಉತ್ತಮವಾದ ಯಾವುದೇ ಜಪವು ಇರಲಿಲ್ಲ, ಮುಂದೆ ಇರುವುದೂ ಇಲ್ಲ. (ಬೃ.ಉ. ೧೯–೧೦) ಮಾನವ ಧರ್ಮಶಾಸ್ತ್ರಕಾರನಾದ ಮನುವು ತನ್ನ ಸ್ಮೃತಿಯಲ್ಲಿ ಗಾಯತ್ರಿ ಯನ್ನು 'ಸಾವಿತ್ರೀ'ಯೆಂದೇ ಕರೆದಿದ್ದಾನೆ. ಸಮಸ್ತ ವೇದಗಳ ಸಾರ ಭೂತತತ್ತ್ವ ಗಾಯತ್ರೀ. ಗಾಯತ್ರೀ ನಿಜವಾಗಿ ವೇದಗಳ ಮಹಿಮೆಯನ್ನು ಅಳೆದು ತೋರಿಸುತ್ತದೆ; ವೇದಗಳಿಗೆ ಗೌರವ ತರುತ್ತದೆ. ಅಂಧಶ್ರದ್ಧೆ ವೇದ ಗಳ ತತ್ತ್ವವಲ್ಲ, ವಿಚಾರ ಪ್ರಚೋದನೆಯೇ ವೇದಾದೇಶ–ಎಂದು ಸಾರು ತ್ತದೆ. ಮಹರ್ಷಿಗಳು ಗಾಯತ್ರೀ ಮಂತ್ರವನ್ನು 'ಮಹಾಮಂತ್ರ' ಎಂದು ಕರೆದಿದ್ದಾರೆ. ಈಶ್ವರನು ಗಾಯತ್ರಿಯನ್ನು 'ಕಾಮಧೇನು'ವೆಂದು ಹೆಸರಿಸಿ ದ್ದಾನೆ. ಹಾಗೂ ಸಮಸ್ತ ಯೌಗಿಕ ಸಾಧನಗಳ ಮೂಲಾಧಾರವೂ, ಕಲಿ ಯುಗದಲ್ಲಿ ಸರ್ವಶ್ರೇಷ್ಠ ಸಿದ್ಧಿಗಳನ್ನು ಅನುಗ್ರಹಿಸುವುದೂ ಶ್ರೀಗಾಯತ್ರೀ ಮಂತ್ರವೇ ಎಂದು ಆದೇಶ ನೀಡಿದ್ದಾನೆ. ಶೃಂಗೀ ಋಷಿಯು ಇದನ್ನು 'ಮೋಕ್ಷದ ಮೂಲ ಕಾರಣ'ವೆಂದು ಸಾರಿದ್ದಾನೆ. ವ್ಯಾಸಮುನಿಯು 'ಗಾಯತ್ರೀ' ಹಾಗೂ 'ಬ್ರಹ್ಮ' ಇವರಲ್ಲಿ ಯಾವ ವ್ಯತ್ಯಾಸವೂ ಇಲ್ಲವೆಂದೂ,

ಗಾಯತ್ರಿಯು 'ಬ್ರಹ್ಮನ ಮುಖ'ವೆಂದೂ ತಿಳಿಸಿದ್ದಾನೆ. ಅಲ್ಲದೆ ಈಕೆಯ ಮೊದಲ ಪಾದದಲ್ಲಿಯೇ ಮೂರು ಲೋಕಗಳ ವೈಭವವನ್ನು ಪಡೆಯಲು ಘೋಷಿಸಿದ್ದಾನೆ. ಶ್ರೀ ಶಂಕರಾಚಾರ್ಯರು ಈಕೆಯನ್ನು 'ಜಗನ್ಮಾತಾ' ಎಂದು ಕರೆದಿದ್ದಾರೆ. ಜನಕಮಹಾರಾಜನು'ಗಾಯತ್ರೀ ಉಪಾಸಕನು ಎಷ್ಟೇ ಪಾಪಗಳನ್ನು ಮಾಡಿದ್ದರೂ ಅವುಗಳೆಲ್ಲವನ್ನೂ ಶ್ರೀಗಾಯತ್ರಿಯು ಸುಟ್ಟು ಭಸ್ಮಮಾಡಿ ಪವಿತ್ರಗೊಳಿಸುತ್ತಾಳೆ' ಎಂದು ಹೇಳಿದ್ದಾನೆ. ಭೀಷ್ಮಪಿತಾ ಮಹರು 'ಶ್ರೀಗಾಯತ್ರೀ ಜಪ ನಡೆಯುವಲ್ಲಿ ಬಾಲಮೃತ್ಯು ಸಂಭವಿಸು ವುದಾಗಲೀ, ಬೆಂಕಿ ಅನಾಹುತವಾಗಲೀ ಇಲ್ಲವೆಂದೂ, ಗೋವುಗಳು ಸಮೃದ್ಧಿ ಯಾಗಿ ಹಾಲುಕೊಡುವುವೆಂದೂ, ಗಾಯತ್ರಿಯು ಸರ್ವಭೂತಗಳ ಹೃದಯವೂ, ಸರ್ವಶ್ರೇಷ್ಠ ಶ್ರುತಿಯೂ ಆಗಿರುವಳೆಂದೂ' ಹೇಳಿದ್ದಾರೆ. ಇದು ವೇದಮಾತೆ, ವರದಾಯಿನೀ. ಆಯು, ಸ್ವಾಸ್ಥ್ಯ, ಸಂತಾನ, ಧನ, ಧಾನ್ಯ, ಪಶು, ವೈಭವ, ಶುದ್ಧಬುದ್ಧಿ, ಉತ್ತಮ ವಿಚಾರ ಶಕ್ತಿ, ಶ್ರದ್ಧಾ ಭಕ್ತಿ ಹಾಗೂ ಯಶಸ್ಸನ್ನು ನೀಡುವ ಮತ್ತು ಪರಮಾತ್ಮನ ದರ್ಶನ ಮಾಡಿ ಸುವ ಮಂತ್ರವಾಗಿರುವುದಾಗಿದೆ. ಈ ಗಾಯತ್ರೀ ವೃದ್ಧಿಕ್ಷಯವಿಲ್ಲದ ಚಿದ್ರೂಪಳು. ಈ ಜಗತ್ತೇ ಈ ದೇವಿಯ ರೂಪವಾಗಿರುವುದು. ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರ, ತಿರೋಭಾವ ಮತ್ತು ಅನುಗ್ರಹ ಇವು ಈಕೆಯ ಪಂಚಕೃತ್ಯಗಳು. ತ್ರಿಕೋಣಾಕಾರವಾದ ಕುಂಡಲಿನಿಯಿಂದ ಸ್ವರವ್ಯಂಜನ ಗಳು ಬಂದುದರಿಂದ ದೇವಿಯೂ ವೇದಮಾತಾ. (ದೇವೀಪುರಾಣ) ಶ್ರೀ ಮಾತೆಗೂ, ಗಾಯತ್ರಿಗೂ ಭೇದವಿಲ್ಲದಿರುವುದರಿಂದ ಗಾಯತ್ರೀ ಪದವುದೇವಿ ಯನ್ನು ಸೂಚಿಸುತ್ತದೆ. ಎಲ್ಲರೂ ಅವಳನ್ನು ಕುರಿತು ಹಾಡುವುದರಿಂದಲೂ, ಬರೆಯುವುದರಿಂದಲೂ ಅವಳು ಗಾಯತ್ರೀ (ದೇವೀಪುರಾಣ). ಇದು ಹಾಡುತ್ತದೆ,(ಹೇಳುತ್ತದೆ), ಕಾಪಾಡುತ್ತದೆ ಎಂದು ಶ್ರುತಿ (ಛಾಂ.ಉ. ೩-೧೨-೧). ಗಾಯತ್ರಿಯು ಬ್ರಹ್ಮದಿಂದ ಬೇರೆ ಎಂದು ತಿಳಿಯಬಾರದು. ಯಾವ ವಿಧದಿಂದಾಗಲೀ 'ನಾನೇ ಅವಳು' ಎಂದು ಉಪಾಸಿಸಬೇಕು. (ವ್ಯಾಸ ಸ್ಮೃತಿ). ಅಕ್ಷರರೂಪದಲ್ಲಿರುವವಳು 'ಮಾತೃಕಾ'(ಸೂತ ಸಂಹಿತೆ- ೪.೪.೧೮). ಲಕ್ಷ್ಮೀಬೀಜಕ್ಕೆ ಮಾತಾ ಎಂದು ಸಂಜ್ಞೆ, 'ಅ'ಕಾರದಿಂದ 'ಕ್ಷ'ಕಾರದವರೆಗೆ ಇರುವ ೫೧ ವರ್ಣಗಳಿಗೆ ಮಾತೃಕೆಗಳೆಂದು ಹೆಸರು. ಈ ಅಕ್ಷರಗಳಿಗೆ ಬೇರೆಬೇರೆ ಬಣ್ಣಗಳಿವೆ. 'ಅ'ಕಾರ ಸ್ವರಗಳು ಧೂಮ್ರ ವರ್ಣ ದಲ್ಲಿವೆ. 'ಕ'ಕಾರ ಮೊದಲಾದುವು ಸಿಂಧೂರವರ್ಣ. 'ದ'ಕಾರದಿಂದ

'ಫ'ಕಾರದವರೆಗೆ ಗೌರವರ್ಣ. 'ಬ'ದಿಂದ ಐದು ಅಕ್ಷರಗಳು ಅರುಣವರ್ಣ. 'ಲ'ಕಾರಾದಿಗಳು ಕಾಂಚನವರ್ಣ. 'ಹ' ಮತ್ತು 'ಕ್ಷ' ವಿದ್ಯುತ್ ವರ್ಣದಲ್ಲಿರುವುವು. (ಸನತ್ಕುಮಾರ ಸಂಹಿತೆ). ಸುಷುಮ್ನಾ, ಇಡಾ ಮತ್ತು ಪಿಂಗಳಾ ಈ ಮೂರು ನಾಡಿಗಳೇ ('ತ್ರಿಪುರ') ಮನಸ್ಸು ಬುದ್ಧಿ ಮತ್ತು ಚಿತ್ತ.ದೇವಿಯು ಇವುಗಳಲ್ಲಿದ್ದಾಳೆ(ತ್ರಿಪುರಾರ್ಣವ) ಇಚ್ಛೆ, ಜ್ಞಾನ ಮತ್ತು ಯತ್ನ ಎಂಬ ಗುಣತ್ರಯವು ದೇವಿಯ ಸ್ವರೂಪ. ಶಿರಃ ಪ್ರದೇಶವು ಇಚ್ಛೆ ; ಮಂಡಲವು ಜ್ಞಾನ ಮತ್ತು ಕಾಲುಗಳು ಕ್ರಿಯಾ, ಹೀಗೆ ಈ ಮೂರು ಶಕ್ತಿಗಳು ದೇವಿಯ ಶರೀರವಾಗಿವೆ (ಸಂಕೇತ ಪದ್ಧತಿ). ದೇವಿಯು ಬ್ರಹ್ಮ, ವಿಷ್ಣು, ಈಶ ಎಂಬುವರಲ್ಲಿರುವವಳು. ಇವಳೇ ಜ್ಞಾನಶಕ್ತಿ, ಕ್ರಿಯಾಶಕ್ತಿ ಮತ್ತು ಇಚ್ಛಾಶಕ್ತಿ. ಬ್ರಹ್ಮನು ಸೃಷ್ಟಿಸಲು ಇಚ್ಛಿಸಿದಾಗ ಪರಾಶಕ್ತಿಯು ಇಚ್ಛಾಶಕ್ತಿಯಾಗಿ, 'ಇದು ಹೀಗೆ ಇರಲಿ' ಎಂದು ಬ್ರಹ್ಮನಿಗೆ ಜ್ಞಾಪಿಸಿದಾಗ ಜ್ಞಾನಶಕ್ತಿಯಾಗಿ, ಹಾಗೆ ತಿಳಿದುಕೊಂಡು ಬ್ರಹ್ಮನು ಕೆಲಸ ಮಾಡುವಾಗ ಇವಳು ಕ್ರಿಯಾಶಕ್ತಿಯಾಗುವಳು (ಮಾಲಿನೀ ವಿಜಯತಂತ್ರ), ದೇವಿಯು ಸೂರ್ಯ, ಚಂದ್ರ, ಅಗ್ನಿ ಇವರನ್ನು ಮೂರು ಕಣ್ಣುಗಳಾಗಿ ಹೊಂದಿರುವಳು (ತ್ರ್ಯಂಬಕಾ) (ದೇವೀಪುರಾಣ ನಿರ್ವಚನಾಧ್ಯಾಯ). ನಾಲಗೆಯಲ್ಲಿ ಸದಾ ವಾಗ್ರಸವನ್ನುಂಟುಮಾಡುತ್ತಾಅದರಲ್ಲಿ ನೆಲೆಸಿರುವುದರಿಂದ ಗಾಯತ್ರಿಯನ್ನು 'ಸರಸ್ವತೀ' ಎನ್ನುವರು. ಸರಸ್ವತಿಯು ಜ್ಞಾನಾಭಿಮಾನಿಯಾದ ದೇವತೆ. ವಿಷಯಗಳಿಂದ ಅವಿಚ್ಛಿನ್ನವಾಗದ ಜ್ಞಾನಸ್ವರೂಪಳು. ದೇವೀ ಶಕ್ತಿಯು ಸುಕೃತಗಳಿಂದ ಜ್ಞಾನಿಗಳ ಹೃದಯದಲ್ಲಿ ಆತ್ಮಲಕ್ಷ್ಮಿಯಾಗಿ ಬೆಳಗುತ್ತಾಳೆ. ಪಾಪಾತ್ಮರಲ್ಲಿ ಅಲಕ್ಷ್ಮಿಯಾಗಿರುತ್ತಾಳೆ. ಬುದ್ಧಿವಂತರಲ್ಲಿ ಬುದ್ಧಿಯಾಗಿ ಪ್ರಕಾಶಿಸುತ್ತಾಳೆ. ಸಜ್ಜನರ ಹೃದಯದಲ್ಲಿ ಶ್ರದ್ಧಾ ರೂಪದಿಂದ ಇರುತ್ತಾಳೆ. ಕುಲಜನರಲ್ಲಿ ಲಜ್ಜಾ ರೂಪದಲ್ಲಿ ಶೋಭಿಸುತ್ತಾಳೆ. ಮಹಾಕಾಳಿ ರೂಪದಿಂದ ಭಕ್ತರ ಅಂತಃಕರಣದಲ್ಲಿ ಆಸುರೀಸಂಪತ್ತನ್ನು ನಾಶಪಡಿಸುತ್ತಾಳೆ ; ಅಂತಃಕರಣದ ಸಂಸ್ಕಾರಗಳನ್ನು ಹೋಗಲಾಡಿಸುತ್ತಾಳೆ. ಮಹಾಲಕ್ಷ್ಮೀ ರೂಪದಿಂದ ಭಕ್ತರ ಅಂತಃಕರಣದಲ್ಲಿ ಬೆಳಗುತ್ತಾಳೆ ; ದೈವೀ ಸಂಪತ್ತನ್ನು ತುಂಬಿಕೊಡುತ್ತಾಳೆ, ಬ್ರಹ್ಮಜ್ಞಾನ ಸ್ವರೂಪಿಣಿಯಾದ ಸರಸ್ವತಿಯಾಗಿ ಆತ್ಮಜ್ಞಾನಸಂಪತ್ತನ್ನು ತುಂಬಿಕೊಡುತ್ತಾಳೆ. ಭಕ್ತರ ಪ್ರಾಣಗಳನ್ನು ರಕ್ಷಿಸುವುದರಿಂದ 'ರನಾ'ಗೆ ಗಾಯತ್ರೀ ಎಂದು ಹೆಸರು. ಶ್ರುತ್ಯಂತರದಲ್ಲಿ ಸಾವಿತ್ರೀ ಎಂಬುದಾಗಿ ಹೇಳುತ್ತಾರೆ.ಸೃಷ್ಟಿಕರ್ತನಾದ್ದರಿಂದ

ಶ್ರೀಹರಿಗೆ 'ಸವಿತಾ' ಎಂದು ಹೆಸರು. ಅವನ ಸಂಬಂಧದಿಂದ ರಮೆಯೇ 'ಸಾವಿತ್ರೀ.' 'ಗಾಯತ್ರೀ ಛಂದಸಾಂ ಮಾತಾ' (ಮಹಾನಾರಾಯಣೋಪನಿಷತ್ತು ೩೪-೧) 'ವೇದಮಾತಾ ಮನೋನ್ಮನೀ' (ವಸಿಷ್ಠ ಕೃತ ಗಾಯತ್ರೀ ಅಷ್ಟೋತ್ತರ) 'ಏವಂ ಹಿ ಸರ್ವವೇದಾನಾಂ ಗಾಯತ್ರೀ ಸಾರಮುಚ್ಯತೇ' 'ಸಾವಿತ್ರ್ಯಾಸ್ತುಪರಂನಾಸ್ತಿ' (ಮನು ೮೩) ಗಾಯತ್ರೀ ವಾ 'ಇದಂ ಸರ್ವಂ ಭೂತವನ್' ಎಂಬ ಉಪನಿಷತ್ ವಾಕ್ಯವು ಚರಾಚರಾತ್ಮಕವಾದ ಸಕಲ ಭೂತ ಸಮುದಾಯವೂ ಗಾಯತ್ರೀರೂಪವಾಗಿರುತ್ತದೆ ಎಂದು ಹೇಳುತ್ತದೆ.

ಅಗ್ನಿಯನ್ನು ನೀರು ಆರಿಸುತ್ತದೆ; ಸೂರ್ಯೋದಯದಿಂದ ಕತ್ತಲು ಕಾಣದಾಗುತ್ತದೆ. ಹಾಗೆಯೇ ದೇವಿಯ ನಾಮಕೀರ್ತನೆಯಿಂದ ಕಲಿಯ ಪಾಪಸಮೂಹಗಳು ನಾಶವಾಗುವುವು (ಕೂರ್ಮ ಪುರಾಣ). ಕುಂಡಲಿನೀಯಿಂದ ಹುಟ್ಟಿದ ಗಾಯತ್ರಿಯು ಪ್ರಾಣಧಾರಿಣಿಯೂ, ಪ್ರಾಣವಿದ್ಯೆಯೂ ಆಗಿ ಮಹಾವಿದ್ಯೆಯಾಗಿರುತ್ತಾಳೆ (ಯೋಗಶಾಸ್ತ್ರ). ಪ್ರಣವವೇ ಪುರುಷ, ಗಾಯತ್ರಿಯೇ ಪ್ರಕೃತಿ. ಪ್ರಣವ ಮತ್ತು ಗಾಯತ್ರಿಯಿಂದ ಪುಂಪ್ರಕೃತ್ಯಾತ್ಮಕವಾದ ಈ ಸೃಷ್ಟಿಯಾಗಿದೆ. ಮಾನವ ಸಮುದಾಯವನ್ನು ಸತ್ಕರ್ಮನಿರತರನ್ನಾಗಿಮಾಡುವ, ಪರಮಾತ್ಮನ ಗುಣ, ಕರ್ಮಸ್ವಭಾವಗಳನ್ನು ಪ್ರತ್ಯಕ್ಷೀಕರಿಸುವ, ಸರ್ವಪಾಪಗಳನ್ನೂ ದಹಿಸುವ ಜ್ಯೋತಿಯನ್ನು ಧಾರಣೆ ಮಾಡಿಕೊಳ್ಳುವುದೇ ಈ ಗಾಯತ್ರೀಮಂತ್ರ. ಬ್ರಹ್ಮಜ್ಞಾನದಲ್ಲಿ ಹೋಗಿ ಸ್ಥಿರವಾಗಿ ನೆಲಸುವಂತೆ ಮಾಡುವುದೇ ಇದರ ಗುರಿ.

ಮಾನವಶರೀರದಲ್ಲಿರುವ ಜ್ಞಾನೇಂದ್ರಿಯಗಳಿಗೂ, ಕರ್ಮೇಂದ್ರಿಯಗಳಿಗೂ ತಮ್ಮತಮ್ಮದೇ ಆದ ವೈಶಿಷ್ಟ್ಯಗಳಿವೆ. ಎಲ್ಲಾ ಇಂದ್ರಿಯಗಳಿಂದಲೂ ಕೆಲಸ ಮಾಡಿಸುವ ಶಕ್ತಿಕೇಂದ್ರ ಮನಸ್ಸು. ಮನಸ್ಸು ಮಾಡಬಯಸದ ಕಾರ್ಯವನ್ನು ಇಂದ್ರಿಯಗಳು ಮಾಡಲಾರವು. ಇಂದ್ರಿಯಗಳಿಗೂ—ವಸ್ತುಗಳಿಗೂ ಮಧ್ಯ ಸಂಪರ್ಕ ಸಾಧನ ಈ ಮನಸ್ಸು. ಮಾನವನನ್ನು ದೇವನನ್ನಾಗಿಯೂ, ದಾನವನನ್ನಾಗಿಯೂ ಮಾಡಬಲ್ಲ ತತ್ತ್ವವು ಮನಸ್ಸು. ಮನಸ್ಸು ಮುನಿದರೆ ಕಾರ್ಯಗಳೂ ಇಲ್ಲ; ಒಲವೂ ಇಲ್ಲ; ದೀರ್ಘಕಾಲ ಸತ್ಯದರ್ಶನ ಮಾಡುವ ಕಾಮನೆಯೂ ಇಲ್ಲ, ಜೀವಿತವೂ ಇಲ್ಲ. ಸ್ವಭಾವತಃ ಅದು ರಿಕ್ತವಾಗಿರಲಾರದು. ಕೇವಲ ಅಭಾವನನ್ನೇ ತನ್ನಲ್ಲಿ ತುಂಬಿಕೊಳ್ಳುವ ಅವಕಾಶವನ್ನು ಅದಕ್ಕೆ ಕೊಡಬಾರದು. ಒಳ್ಳೆಯ ವಿಚಾರ ಸಾಮಗ್ರಿಗಳನ್ನು ಅದಕ್ಕೆ ನಾವು ಒದಗಿಸದಿದ್ದರೆ, ಅದು ಘಾತಕಭಾವನೆಗಳನ್ನೇ ತನ್ನಲ್ಲಿ ತುಂಬಿಕೊಳ್ಳು

ತ್ತದೆ. ಆದ್ದರಿಂದ ನಾವು ಈ ಮನಸ್ಸಿಗೆ ಪರಮಪವಿತ್ರವಾದ, ಆತ್ಮೋ ನ್ನಾಯಕವಾದ, ಸರ್ವಹಿತ ಸಾಧಕವಾದ, ಚಿಂತನವಸ್ತುವನ್ನು ಕೊಡಬೇಕು. ಆಲೋಚಿಸಿದಷ್ಟೂ ಆಳವೇ ಆಗುತ್ತಾಹೋಗುವ, ಆತ್ಮನನ್ನು ಕ್ಷಣಕ್ಷಣಕ್ಕೂ ಆಧ್ಯಾತ್ಮಿಕ ಔನ್ನತ್ಯಕ್ಕೆ ಏರಿಸುತ್ತಾಹೋಗುವ ಚಿಂತನ ಸಾಮಗ್ರಿ ಗಾಯತ್ರೀಮಂತ್ರ. ಇದು ಮನುಷ್ಯನನ್ನು ಉನ್ನತವಾದ ಸ್ಥಿತಿಯಲ್ಲಿರಿಸುವ ಶಕ್ತಿಯಿಂದ ಕೂಡಿದೆ. ನಮ್ಮ ಧಾರ್ಮಿಕ ಜೀವನದಲ್ಲಿ ಇದಕ್ಕೆ ಇರುವಷ್ಟು ಉನ್ನತವಾದ ಸ್ಥಾನ ಪ್ರಾಯಃ ಬೇರಾವುದಕ್ಕೂ ಇಲ್ಲ ; ಇದಕ್ಕಿಂತ ಅಧಿಕ ಸತ್ತ್ವಸಂಪನ್ನ ಮಂತ್ರ ಬೇರೊಂದಿಲ್ಲ ಇದಕ್ಕಿಂತ ಅಧಿಕ ಅರ್ಥಗಾಂಭೀರ್ಯವುಳ್ಳ ಪ್ರಾರ್ಥನೆ ಎಲ್ಲಿಯೂ ಇಲ್ಲ ; ಯಾವುದೂ ಇಲ್ಲ. ಇದು ಜ್ಞಾನದ ಅಗ್ನಿಕುಂಡವನ್ನು ಕಲಕಿ ಪುನಃ ಕಿಡಿಯಾಡುವಂತೆ ಮಾಡುತ್ತದೆ; ಸಂಸಾರ ಮಹೋದಧಿಯನ್ನು ದಾಟುವ ಸೇತುವೆಯಂತಿದೆ. ಮನಶ್ಚಾಂಚಲ್ಯ ಅಳಿಯಬೇಕು; ಮನಃಪಾವಿತ್ರ್ಯ ಉಳಿಯಬೇಕು; ಇಹದಲ್ಲಿಯೇ ಪರದ ಸೊಗಸು ಸುಳಿಯಬೇಕು ; ಪಾಪಭಾವನೆಯ ಬೀಜವನ್ನು ಮೊಳೆಯಲಾಗದಂತೆ ಆಳಕ್ಕೆ ತುಳಿಯಬೇಕು ಮತ್ತು ಮನಸ್ಸಿನಲ್ಲಿ ಮನೋಹರವಾದ, ಮಮತಾಯುಕ್ತವಾದ, ಮಾನವತ್ವದ, ಮಾಧುರ್ಯದ, ಮಳೆಯನ್ನು ಮಹೀತಳಕ್ಕೆಲ್ಲಾ ಸುರಿಸುತ್ತಾ ದೇವತ್ವದಲ್ಲಿ ಪರಿಣತರಾಗಬೇಕು ಎಂಬ ಕಾಮನೆಯಿದ್ದರೆ ಭಗವದ್ದತ್ತವಾದ ಗಾಯತ್ರೀ ಸದಾಸಿದ್ಧವಾಗಿದೆ. ಮಾತು,ಮನಸ್ಸು,ಕೃತಿ ಒಂದಾಗಬೇಕಾದರೆ ಗಾಯತ್ರೀ ಉಪಾಸನೆ ಅಗತ್ಯ. ಗಾಯತ್ರೀ ನಿಜವಾಗಿ ಗಾಯತ್ರಿಯೇ ಆಗಬೇಕಾದರೆ, ಉಪಾಸಕ, ಉಪಾಸ್ಯನಿಗೆ ಸರ್ವತೋಭಾವೇನ ಸಮೀಪಸ್ಥನಾಗಬೇಕು. ಎಲ್ಲಾ ಸಿದ್ಧಿಗಳಿಗೂ ಮುಖ್ಯವಾದ ಮೂಲಗಾಯತ್ರೀ ಸಾಧನೆಯೇ ಆಗಿದೆ. ಚಳಿಯಿಂದ ನಡುಗುವ ಪುರುಷ ಬೆಂಕಿಯ ಹತ್ತಿರ ಹೋಗುವುದರಿಂದ ಚಳಿಹೋಗುವ ಹಾಗೆ ಗಾಯತ್ರಿಯ ಸಮೀಪಕ್ಕೆ ಹೋಗುವುದರಿಂದ ಸಮಸ್ತದೋಷ, ದುಃಖಗಳೂ ದೂರವಾಗಿ ಆಕೆಯ ಅನುಗ್ರಹ ಉಂಟಾಗುವುದು. ಅದು ಒಂದು ಜ್ಞಾನಬೀಜ. ಬೆಳಕು ಒಳಗಡೆ ಇದೆ. ಆ ಬೆಳಕನ್ನು ಪಡೆದ ಮಾನವನು ಪುನಃ ಕತ್ತಲಲ್ಲಿರಲಾರನು ; ಅವನಿಗೆ ಜ್ಞಾನೋನ್ನತಿಯಾಗುವುದು. ಮಾನವರಿಂದ ಬ್ರಹ್ಮನವರೆಗೆ, ವಿಶ್ವದ ಚಲಿಸುವ, ಚಲಿಸದ ಸಮಸ್ತ ಜೀವರೂ ಗಾಯತ್ರೀ ಉಪಾಸಕರೇ. 'ಯಾಂ ಸದಾಂ ಸರ್ವಭೂತಾನಿ ಸ್ಥಾವರಾಣಿ ಚ ರಾಣಿ ಚ' ಎಂಬುದು ಇದನ್ನು ಸ್ಪಷ್ಟಪಡಿಸುತ್ತದೆ. ಚತುರ್ಮುಖಬ್ರಹ್ಮನೂ ಗಾಯತ್ರೀ

ಉಪಾಸನೆ ಮಾಡುತ್ತಾನೆ ಎಂದು ದೇವೀ ಭಾಗವತ(೧೧-೧೬)ತಿಳಿಸುತ್ತದೆ. ಗಾಯತ್ರಿಯನ್ನು ಶ್ರೀರಾಮಾದಿ ಮಹಾಪುರುಷರೂ ಜಪಿಸುತ್ತಿದ್ದರೆಂದು ವಾಲ್ಮೀಕಿ ರಾಮಾಯಣದಿಂದ ತಿಳಿದುಬರುತ್ತದೆ. (ಕೌಸಲ್ಯಾ ಸುಪ್ರಜಾ ರಾಮಾ ಪೂರ್ವಾ ಸಂಧ್ಯಾಪ್ರವರ್ತತೇ') ಗಾಯತ್ರಿಯನ್ನು ಶ್ರೀಕೃಷ್ಣನೂ ಸಹ ಉಪಾಸಿಸಿರುತ್ತಾನೆ ಎಂದು ಭಾಗವತದಿಂದ (೧೦-೩೯-೬೦) ಗೊತ್ತಾಗುತ್ತದೆ. ಈಕೆಗೆ ಇಂದ್ರ ಮೊದಲಾದ ದೇವತೆಗಳೂ ಮಣಿಯುವರೆಂದು ಪುರಾಣಗಳಲ್ಲಿದೆ. ಅಂದರೆ ಇದು ಅನಾದಿಕಾಲದಿಂದ ಸರ್ವರೂ ಉಪಾಸಿಸಿಕೊಂಡು ಬಂದುದಾಗಿದೆ.

ಗಾಯತ್ರೀ. ಸಾವಿತ್ರೀ, ಸರಸ್ವತೀ, ಲಕ್ಷ್ಮೀ, ಸಂಧ್ಯಾ ಇವರು ಪ್ರತ್ಯೇಕರಲ್ಲ ; ಎಲ್ಲರೂ ಪರಾಶಕ್ತಿಯ ಸ್ವರೂಪರೇ, ಒಬ್ಬ ಅಧಿಕಾರಿಯು ಕಾರ್ಯಭೇಧಗಳಿಂದ ಅನೇಕ ಅಧಿಕಾರದ ನಾಮಗಳನ್ನು ಪಡೆಯುವಂತೆ ಒಂದಾದ ಪರಾಶಕ್ತಿ ಗಾಯತ್ರೀ ದೇವಿಯೇ ಕಾರ್ಯಭೇದಗಳಿಂದ ಬೇರೆಬೇರೆ ಹೆಸರುಗಳಿಂದ ಕರೆಯಲ್ಪಡುತ್ತಾಳೆ. ಇವಳು ೧. ಸೂರ್ಯಶಕ್ತಿಯಾಗಿ, 'ಸಾವಿತ್ರೀ' ಎಂದೂ, ೨. ನಾದಶಕ್ತಿಯಾಗಿ 'ಸರಸ್ವತೀ' ಎಂದೂ, ೩. ಸಂಧಿಶಕ್ತಿಯಾಗಿ ಆತ್ಮಸಾಕ್ಷಾತ್ಕಾರದ ಕಾರ್ಯಮಾಡುವವಳಾಗಿ 'ಸಂಧ್ಯಾ' ಎಂದೂ, ೪. ಆನಂದಸ್ವರೂಪಳಾಗಿ 'ಲಕ್ಷ್ಮೀ' ಎಂದೂ, ಗಾನಮಾಡುವವರನ್ನು ಕಾಪಾಡುವವಳಾಗಿ 'ಗಾಯತ್ರೀ' ಎಂದೂ ಕರೆಯಲ್ಪಡುವಳು.

ಗಾಯತ್ರಿಯು ಪ್ರಾತಃಕಾಲದಲ್ಲಿ ಕೆಂಪು ಪದ್ಮಾಸನದಲ್ಲಿ, ಕೆಂಪು ಬಟ್ಟೆಯನ್ನು ಧರಿಸಿ, ಕೆಂಪು ಬಣ್ಣದವಳಾಗಿ ರಕ್ತಮಾಲಾ, ಕೆಂಪುಬಣ್ಣದ ಗಂಧಲೇಪನ ಮಾಡಿಕೊಂಡು, ನಾಲ್ಕುಮುಖಗಳ, ಎಂಟು ಭುಜಗಳುಳ್ಳವಳಾಗಿ, ತ್ರಿನೇತ್ರಾ, ದಂಡಾಕ್ಷಮಾಲಾ, ಕಮಂಡಲು ಸ್ರುಕ್ಸ್ರುವಧಾರಿಣಿಯಾಗಿ, ಸರ್ವಾಭರಣಗಳನ್ನು ಧರಿಸಿಕೊಂಡು, ಕೌಮಾರಿಯಂತೆ, ಸಿಂಹವಾಹಿನಿಯಾಗಿ ಋಗ್ವೇದವನ್ನು ಹೇಳುತ್ತಾ, ಸೂರ್ಯಬಿಂಬದಲ್ಲಿ ಬ್ರಹ್ಮಸ್ವರೂಪಳಾಗಿ ವಿರಾಜಿಸುವಳು ಇವಳೇ ಬ್ರಾಹ್ಮೀ.

ಸಾವಿತ್ರಿಯೆಂದು ಕರೆಸಿಕೊಳ್ಳುವ ಈಕೆಯು ಮಧ್ಯಾಹ್ನದಲ್ಲಿ ಬಿಳಿಯ ಪದ್ಮಾಸನದಲ್ಲಿ, ಬಿಳಿಯ ಬಟ್ಟೆಯನ್ನು ಧರಿಸಿ ಬಿಳಿಯ ಬಣ್ಣದಿಂದ, ಬಿಳಿಯ ಮಾಲೆ, ಬಿಳಿಯ ಗಂಧ ಲೇಪನ ಮಾಡಿಕೊಂಡು, ಐದು ಮುಖಗಳ, ಹತ್ತು ಭುಜಗಳುಳ್ಳವಳಾಗಿ, ಮೂರು ಕಣ್ಣುಗಳಿಂದ, ತ್ರಿಶೂಲ, ಅಕ್ಷಮಾಲ, ಕಮಂಡಲುಧಾರಿಣಿಯಾಗಿ, ಸರ್ವಾಭರಣ ಭೂಷಿತಳಾಗಿ, ಯುವತಿಯಂತೆ

ಯಜುರ್ವೇದವನ್ನು ಹೇಳುತ್ತಾ, ವೃಷಭವಾಹಿನಿಯಾಗಿ ಸೂರ್ಯಬಿಂಬದ ಮಧ್ಯದಲ್ಲಿ ರುದ್ರಸ್ವರೂಪಳಾಗಿ ಕಂಗೊಳಿಸುವಳು.

ಸರಸ್ವತೀ ಎಂದು ಕರೆಸಿಕೊಳ್ಳುವ ಈಕೆಯು ಸಾಯಂಕಾಲದಲ್ಲಿ ಶ್ಯಾಮಲ ಬಣ್ಣದ ಕಮಲದಲ್ಲಿ ಕಪ್ಪುಬಟ್ಟೆಯನ್ನು ಧರಿಸಿ ಶ್ಯಾಮಲ ವರ್ಣದವಳಾಗಿ ಕಪ್ಪುಮಾಲೆ, ಕಪ್ಪುಗಂಧವನ್ನು ಲೇಪಿಸಿಕೊಂಡು ಏಕಮುಖಳಾಗಿ, ನಾಲ್ಕು ಭುಜಗಳಿಂದಲೂ, ಎರಡು ನೇತ್ರಗಳಿಂದಲೂ, ಚಕ್ರಾಕ್ಷಮಾಲಾ, ಕಮಂಡಲು, ಶಂಖಧಾರಿಣಿಯಾಗಿ, ಸರ್ವಾಭರಣಭೂಷಿತೆಯಾಗಿ, ವೃದ್ಧ ವೈಷ್ಣವಿಯಂತೆ, ಗರುಡವಾಹನೆಯಾಗಿ, ಸಾಮವೇದವನ್ನು ಹೇಳುತ್ತಾ, ಸತ್ವಗುಣಯುಕ್ತಳಾಗಿ ರವಿಬಿಂಬದಲ್ಲಿ ವೃದ್ಧೆಯಂತೆ ಶೋಭಿಸುವಳು (ಗಾಯತ್ರ್ಯುಪನಿಷತ್).

ಸಂಧ್ಯಾದೇವಿಯಾದ ಈಕೆ ಕೆಂಪು–ಬಿಳುಪು ಮತ್ತು ಶ್ಯಾಮಲ (ಕಪ್ಪು) ಬಣ್ಣದ ಮೂರು ಮುಖಗಳುಳ್ಳವಳಾಗಿ, ಬ್ರಹ್ಮ, ವಿಷ್ಣು, ರುದ್ರರೆಂಬ ತ್ರಿಮೂರ್ತ್ಯಾತ್ಮಿಕಳು, ಗಾಯತ್ರೀಮಂತ್ರದ ಇಪ್ಪತ್ತನಾಲ್ಕು ಅಕ್ಷರಮಾಲೆಯುಳ್ಳವಳು, ಸೂರ್ಯ, ಚಂದ್ರ, ಅಗ್ನಿ ಇವುಗಳ ಹೊಳಪಿನ ಮೈಬಣ್ಣವುಳ್ಳವಳು, ಸತ್ಯ ಜ್ಞಾನ ಸುಖಾತ್ಮಭಾವದವಳು, ಸತ್ತ್ವ ರಜಸ್ತಮೋ ಗುಣಗಳ ಸಮಭಾವದಿಂದ ಕೂಡಿದವಳು, ಋಗ್ಯಜುಸ್ಸಾಮನೆಂಬ ವೇದ ತ್ರಯಗಳ ತಾಯಿಯಾದವಳು, ಓಂಕಾರಾತ್ಮಕ ತತ್ತ್ವಪೀಠದಲ್ಲಿ ಈ ದೇವಿ ನೆಲೆಸಿರುವಳು. ಆ ಕಾರಣದಿಂದಲೇ ಈ ದೇವಿಯು ಲಿಂಗರೂಪಾತ್ಮಕಳು.

ಗಾಯತ್ರಿಯ ಶಿರಸ್ಸಿನಲ್ಲಿ ಚತುರ್ಮುಖಬ್ರಹ್ಮನೂ, (ಬ್ರಹ್ಮ ಶಿರಃ) ಮುಖದಲ್ಲಿ ಅಗ್ನಿಯೂ, (ಅಗ್ನಿರ್ಮುಖಂ) (ಅಗ್ನಿ ಮುಖರಾಗಿ ಗಾಯತ್ರಿಯ ಸ್ವರೂಪವನ್ನು ತಿಳಿಯುವ ಉಪಾಸಕರು ಅಗ್ನಿಯಂತೆ ಪವಿತ್ರರೂ, ಅಜರೂ, ಅಮೃತರೂ ಆಗುತ್ತಾರೆ.) ಹೃದಯದಲ್ಲಿ ವಿಷ್ಣುವೂ, (ವಿಷ್ಣು ಹೃದಯ) ಶಿಖೆಯಲ್ಲಿ ರುದ್ರನೂ (ರುದ್ರಶಿಖಾ) ಇರುವರು. ಭೂಮಿಯೇ ಇವಳ ಆವಾಸಸ್ಥಾನ (ಕೂಡಿಕೊಳ್ಳುವ ಸ್ಥಳ, ಯೋನಿ). (ಪೃಥಿವೀ ಯೋನಿಃ). ಇವಳು ಪ್ರಾಣ. ಅಪಾನ, ವ್ಯಾನ, ಉದಾನ ಮತ್ತು ಸಮಾನಗಳೆಂಬ ಪಂಚವಾಯುಗಳ, ನಾಗ, ಕೂರ್ಮ, ಕೃಕರ, ದೇವದತ್ತ ಮತ್ತು ಧನಂಜಯಗಳೆಂಬ ಪಂಚ ಉಪವಾಯುಗಳ ಸ್ವರೂಪಳು. ಬಿಳಿಯ ಬಣ್ಣ ಉಳ್ಳವಳು, ಪ್ರಾಣಾಪಾನ ವ್ಯಾನೋದಾನ ಸಮಾನ ಸಪ್ರಾಣಾ ಜ್ಞಾನಮಾರ್ಗದಲ್ಲಿ ಅವತರಿಸಿದವಳು, (ಶ್ವೇತವರ್ಣ) ಸಾಂಖ್ಯಾಯನ

(ಸಾಂಖ್ಯ ಎಂದರೆ ಜ್ಞಾನಬೋಧಕ, ಅಯನ=ಎಂದರೆ ಮಾರ್ಗ) ಗೋತ್ರ =ಎಂದರೆ ಉದ್ಭವಿಸು. ಅಥವಾ ಅವತರಿಸು ಎಂದರ್ಥ. (ಸಾಂಖ್ಯಾಯನಸ ಗೋತ್ರಾ) ಅಂದರೆ ಜ್ಞಾನಮಾರ್ಗದಲ್ಲಿ ಅವತರಿಸಿದವಳು ಎಂದರ್ಥ. ಮಹರ್ಷಿಯು ಸಗೋತ್ರೆ. ಈಕೆಯು ಮಂತ್ರವು ಇಪ್ಪತ್ತುನಾಲ್ಕು ಅಕ್ಷರ ಗಳುಳ್ಳದ್ದು, ಚತುರ್ವಿಂಶತ್ಯಕ್ಷರಾ)ಮೂರು ಪಾದಗಳುಳ್ಳದ್ದು. (ತ್ರಿಪಾದಾ) ಪೂರ್ವ ಪಶ್ಚಿಮ, ದಕ್ಷಿಣ, ಉತ್ತರ, ಮೇಲೆ ಮತ್ತು ಕೆಳಗೆ ಈ ಆರೂ ಈಕೆಯ ಉದರಸ್ಥಾನಗಳು (ಷಟಕುಕ್ಷಿಃ) (ಅಂದರೆ ಬ್ರಹ್ಮಾಂಡ ಸ್ವರೂಪಳು). ಆದಿತ್ಯ, ಅಂಬಿಕೆ, ವಿಷ್ಣು, ಗಣಪತಿ ಮತ್ತು ಮಹೇಶ್ವರರೆಂಬ ಪಂಚಾಯತನ ಶಕ್ತಿ ಗಳೇ ಈಕೆಯ ಪಂಚ ಶಿರಸ್ಸುಗಳು (ಪಂಚಶೀರ್ಷಃ) (ಅಂದರೆ ಪಂಚ ಬ್ರಹ್ಮ ಸ್ವರೂಪಳು). ವೇದಾಧ್ಯಯನ ಯೋಗ್ಯತಾರ್ಥವಾದ ಉಪನಯನ ಕರ್ಮ ದಲ್ಲಿ ವಿನಿಯೋಗವು (ಉಪನಯನೇ ವಿನಿಯೋಗಃ) ಅಂದರೆ ವೇದಾಧಿಕಾರ ಉಂಟಾಗುವುದಕ್ಕೆ ಉಪನಯನದಲ್ಲಿ ಗಾಯತ್ರೀ ಮಂತ್ರವನ್ನು ಉಪದೇಶಿ ಸುವರು.), ಮುತ್ತು, ಹವಳ, ಚಿನ್ನ, ನೀಲಿ ಮತ್ತು ಬಿಳುಪುಗಳು ಇವಳ ಪಂಚಮುಖಕಾಂತಿಗಳು. ಒಂದೊಂದು ಮುಖದಲ್ಲಿಯೂ ಮೂರು ಕಣ್ಣು ಗಳುಳ್ಳವಳು. ಚಂದ್ರಕಳೆಗಳಿಂದ ಕೂಡಿದ ರತ್ನಖಚಿತವಾದ ಕಿರೀಟಗಳುಳ್ಳ ವಳು. 'ಓಂ'ಕಾರ ಮುಂತಾದ ವರ್ಣ (ಅಕ್ಷರ) ರೂಪಳು. ಹತ್ತು ಕೈಗಳುಳ್ಳ ವಳು. ಈ ಹತ್ತು ಕೈಗಳಲ್ಲಿಯೂ ವರದ, ಅಭಯ (ಅಂದರೆ ಉಪಾಸಕರಿಗೆ ವರವನ್ನೂ, ಅಭಯವನ್ನೂ ಕೊಟ್ಟು ಕಾಪಾಡುವ ಹಸ್ತಗಳುಳ್ಳವಳು) ಮುದ್ರೆಗಳು, ಅಂಕುಶ, ಚಾಟಿ, ಕಪಾಲ, ಗದೆ, ಶಂಖ, ಚಕ್ರ ಮತ್ತು ಕಮಲದ ಮೊಗ್ಗುಗಳುಳ್ಳವಳು. ಈಕೆಗೆ ವಿಷ್ಣುವಿಗಿರುವಂತೆ ಶಂಖ, ಚಕ್ರ ಗಳಿವೆ, ಶಿವನಿಗಿರುವಂತೆ ತ್ರಿಶೂಲ, ಕಪಾಲಗಳಿವೆ, ಪಾರ್ವತಿಗಿರುವಂತೆ ಕಶಾ, ಅಂಕುಶಗಳಿವೆ. ಲಕ್ಷ್ಮಿಗಿರುವಂತೆ ಕಮಲದ ಮೊಗ್ಗುಗಳಿವೆ. ಬ್ರಹ್ಮನಿಗಿರುವ ಕಮಲಾಸನವೇ ಗಾಯತ್ರಿಯದಾಗಿದೆ. ಈಕೆಯು ಇಂದ್ರಿಯಗಳ ಸೂಕ್ಷ್ಮ ಶಕ್ತಿಸ್ವರೂಪಳು(ಓಜೋಽಸಿ) ಶತ್ರುಗಳನ್ನು ನಿಗ್ರಹಿಸುವ ಶಕ್ತಿಯುಳ್ಳವಳು (ಸಹೋಽಸಿ), ಹೆಚ್ಚು ಸಾಮರ್ಥ್ಯ (ಇಂದ್ರಿಯಗಳ ಸ್ಥೂಲಶಕ್ತಿ) ರೂಪದಿಂದ ಇರುವವಳು (ಬಲಮಸಿ) ಮತ್ತು ಜ್ಞಾನತೇಜೋರೂಪಗಳಾಗಿರುವವಳು (ಭ್ರಾಜೋಽಸಿ), ಇಂದ್ರಾದಿ ದೇವತೆಗಳ ನಿವಾಸಸ್ಥಾನಳು (ದೇವಾನಾಂ ಧಾಮ ನಾಮಾಸಿ) ನಾಮರೂಪಿಣಿಯೂ ಆಗಿರುವವಳು, ಸ್ಥಾವರ ಜಂಗಮಾದಿ ಸರ್ವಜಗದ್ರೂಪಳು (ವಿಶ್ವಮಸಿ), ಪ್ರಪಂಚದ ಪೂರ್ಣವಾದ

ಆಯುಃಸ್ಯ (ಸ್ಥಿತಿ ಅಥವಾ ಸತ್ತಾ) ಸ್ವರೂಪಳೂ (ವಿಶ್ವಾಯುಃ) ಆಗಿರುವ ವಳು, ಸರ್ವಜೀವನ ಹೇತುವು (ಸಕಲ ಸ್ಥಿತಿರೂಪಳೂ, ಸೃಷ್ಟಿಸ್ಥಿತಿಲಯ ಸ್ವರೂಪಳು—ಸರ್ವಮಸಿ ಸರ್ವಾಯುಃ), ಪಾಪನಿವಾರಿಣಿಯೂ, ಓಂಕಾರ ವಾಚ್ಯವಾದ ಪರಬ್ರಹ್ಮತತ್ತ್ವವೂ (ಅಭಿಭೂರೋಂ) ಆಗಿರುವವಳು ಈ ಗಾಯತ್ರೀದೇವಿಯೇ. ಇವಳು ವೇದ ಸಮುದಾಯಕ್ಕೆಲ್ಲಾ ಜನನಿ, ಸಕಲ ವರ್ಣಸ್ವರೂಪಿಣಿ, ದಿವ್ಯತೇಜೋಭರಿತೆ, ಸಂಧ್ಯಾಸ್ವರೂಪದಿಂದ ಕಂಗೊಳಿ ಸುವ ಜ್ಞಾನಸ್ವರೂಪಿಣಿ ಮತ್ತು ವಿದ್ಯಾಭಿಮಾನ ದೇವತೆಯಾಗಿರುವಳು. ಹತ್ತು ಪದಗಳ ಈ ಗಾಯತ್ರಿಯಲ್ಲಿ ಪರಮಾತ್ಮನ ದಶಾವತಾರಗಳಿವೆ.

ಗಾಯತ್ರಿಯಲ್ಲಿ ಸಗುಣೋಪಾಸನೆ ಹಾಗೂ ನಿರ್ಗುಣೋಪಾಸನೆಗಳೆರ ಡಕ್ಕೂ ಅವಕಾಶವಿದೆ. ಇದು ಒಂದು ಅತಿ ಹೆಚ್ಚಿನ ಹಿರಿಮೆ. ನಾವು, ರೂಪ ಮತ್ತು ಗುಣಗಳಿಂದ ಕೂಡಿದ ಚಿತ್ರಣವು ನಮ್ಮ ಮನಸ್ಸಿನಲ್ಲಿ ಮಾತೆಯ ಸ್ಮರಣೆಗೆ ಸಹಾಯವಾಗುವುದು. ವಿಗ್ರಹ, ಚಿತ್ರ ಇವು ಆಧ್ಯಾತ್ಮಿಕ ಶೈಶವಾ ಸ್ಥೆಯಲ್ಲಿ ನಮಗೆ ಸಹಾಯ ಮಾಡುವುವು. ನಾವು ಅವುಗಳನ್ನು ಮೀರಿ ಮುಂದುವರಿಯಬೇಕು. ಮಾನವನಿಗೆ ಮೊದಮೊದಲು ತನ್ನ ಪವಿತ್ರ ಸ್ವರೂಪವನ್ನು ಒಂದು ವಿಗ್ರಹ ಅಥವಾ ಚಿತ್ರದ ಮೂಲಕ ತಿಳಿದುಕೊಳ್ಳು ವುದು ಸಾಧ್ಯವಾದರೆ ಅದನ್ನು ತಪ್ಪು ಎನ್ನುವುದು ಸರಿಯೆ ? ವಿಗ್ರಹ, ಚಿತ್ರ ಮುಂತಾದುವು ಆಧ್ಯಾತ್ಮಿಕ ಭಾವನೆಗಳನ್ನು ನೇತುಹಾಕುವುದಕ್ಕೆ ಹೊಡೆದ ಗೂಟಗಳು. ತಿಳಿದುದರಿಂದ ಮೊದಲು ಮಾಡಿಕೊಂಡು ತಿಳಿಯದುದನ್ನು ತಿಳಿಸುವುದೇ ಶೈಕ್ಷಣಿಕ ಮನಶ್ಶಾಸ್ತ್ರದ ಕ್ರಮವಾಗಿದೆ. ವೇದದ ಕ್ರಮವೂ ಹೀಗೆಯೇ. ಮೇಲ್ಮಟ್ಟದ ಉಪಾಸನೆಗೆ ಗಾಯತ್ರೀ ಜಪದಲ್ಲಿ ಪರಬ್ರಹ್ಮ ರೂಪವೇ ಆದ 'ಓಂ'ಕಾರ, ವಿಶ್ವದ ವಿಶಾಲತೆಯನ್ನು ಸ್ಮರಣೆಗೆ ತರುವ 'ವ್ಯಾಹೃತಿ'ಗಳು, ಬ್ರಹ್ಮಸೂಚಕವೂದ 'ತತ್' ಶಬ್ದ, ಜ್ಞಾನದ ಚಿನ್ಹೆಯಾದ ತೇಜಸ್ಸು ಇವು ಉಪಾಸಕನಿಗೆ ಇವೆ. ಗಾಯತ್ರಿಗೆ ಅವ್ಯಕ್ತದಲ್ಲಿ ಪರಬ್ರಹ್ಮ ಸ್ಥಾನ (ಬ್ರಹ್ಮಲೋಕ) ಮತ್ತು ವ್ಯಕ್ತದಲ್ಲಿ ಸೂರ್ಯಮಂಡಲ. ಇವಳು ಸಗುಣ ಮತ್ತು ನಿರ್ಗುಣಗಳೆರಡರಲ್ಲಿಯೂ ಗೋಚರವಾಗುವ ತತ್ತ್ವದವ ಳಾದುದರಿಂದ ಇವಳಿಗೆ 'ದ್ವಿಜಾತಾ' ಎನ್ನುವರು. ಈಕೆಯನ್ನು ಅಂತರ್ಮುಖ ದಲ್ಲಿ ಉಪಾಸಿಸುವಾಗ ನಮ್ಮಲ್ಲಿಯೂ ಇರುವ ಸೂರ್ಯ ತೇಜಸ್ಸಿನೊಳಗೆ ಸುಕೃತ ವಿಶೇಷದಿಂದ ನಮ್ಮ ಜ್ಞಾನ ಚಕ್ಷಸ್ಸು ತೆರೆದು ದಿವ್ಯತೇಜೋರೂಪ ದಲ್ಲಿ ಆ ದೇವಿಯ ದರ್ಶನವು ಲಭ್ಯವಾಗುವುದು. ಸಗುಣವಾದ ತೇಜೋ

ರೂಪವನ್ನು ದಾಟಿದರೆ ಪರಬ್ರಹ್ಮಸ್ಥಿತಿಯೇ ಅವಳ ಮುಖ್ಯ ಸ್ಥಾನ. ಗಾಯತ್ರೀದೇವಿಯು ಅಂತರ್ಮುಖದ ಉಪಾಸನಾಕಾಲದಲ್ಲಿ ಕುಂಡಲಿನಿಯು 'ಭೂ'ತತ್ತ್ವವಾದ ಮೂಲಾಧಾರದಿಂದ ಉಪಾಸನೆಯಾಗಿ ಸಹಸ್ರಾರು ಕಮಲವನ್ನು ಸೇರಲು ಹೊರಡುವುದು. ಬಹಿರ್ಮುಖವಾದಾಗ ಪುನಃ ಮೂಲಾಧಾರಕ್ಕೆ ಬಂದು ನೆಲಸುವುದು. ಬ್ರಹ್ಮಾಂಡಪಿಂಡಾಂಡಗಳೆರಡೂ ಗಾಯತ್ರಿಯ ಮಹಿಮೆಯಿಂದಲೇ ನಿಂತಿವೆ. ಲಕ್ಷ್ಮೀ–ಗಾಯತ್ರೀದೇವಿಯರು ಕಮಲಾಸನದಲ್ಲಿರುವರು. ಮನುಷ್ಯನ ಶಿರಸ್ಸಿನಲ್ಲಿ ಕಮಲವಿದೆ. ಗಾಯತ್ರೀ, ಲಕ್ಷ್ಮಿಯರು ಮನುಷ್ಯರಲ್ಲಿಯೂ ಈ ಕಮಲದಲ್ಲಿರುವರು. ನದಿಗೆ ದೊಡ್ಡ ಪಾತ್ರೆಯನ್ನು ತೆಗೆದುಕೊಂಡುಹೋದರೆ ಹೆಚ್ಚು ನೀರು ತರಬಹುದು. ಸಣ್ಣ ಪಾತ್ರೆ ತೆಗೆದುಕೊಂಡುಹೋದರೆ ಕಡಿಮೆ ನೀರು ತರಬೇಕಾಗುವುದು. ಯಾವ ಪಾತ್ರೆಯನ್ನೂ ತೆಗೆದುಕೊಳ್ಳದೆ ನದಿಗೆ ಹೋದರೂ ಕೈಯಿಂದ ನೀರನ್ನು ತೆಗೆದು ಕುಡಿದು ತಾತ್ಕಾಲಿಕವಾಗಿಯಾದರೂ ಬಾಯಾರಿಕೆಯಿಂದ ಪಾರಾಗ ಬಹುದು. ಹಾಗೆಯೇ ತನ್ನೆಡೆಗೆ ಯಾವ ರೀತಿಯಿಂದಲಾದರೂ ಸರಿಯೆ ಬಂದ ಯಾರನ್ನೂ ಗಾಯತ್ರೀ ಹಾಗೆಯೇ ಕಳುಹಿಸುವುದಿಲ್ಲ. 'ಮಂತ್ರ ದೇವತೆ ಯಾರು?' ಎಂಬುದನ್ನರಿಯದೆ, ಅದರ ಅರ್ಥವನ್ನೂ ತಿಳಿದುಕೊಳ್ಳದೆ ಕೇವಲ ಉಚ್ಚಾರಣೆಮಾಡಿದ ಮಾತ್ರದಿಂದಲೇ ನಿರ್ದಿಷ್ಟವಾದ ಎಷ್ಟೋ ಫಲಪ್ರಾಪ್ತ ವಾಗುವುದು. ಆದರೆ ಆ ದೇವತೆಯ ಸ್ವರೂಪವನ್ನರಿತು, ಮಂತ್ರದ ಅರ್ಥ ವನ್ನು ತಿಳಿದು, ಕ್ರಮವಾಗಿ ಉಚ್ಚರಿಸುವುದರಿಂದ ಪೂರ್ಣ ಫಲವು ಪ್ರಾಪ್ತ ವಾಗುವುದು. ನಾವು ಬರೀ ಸೃಷ್ಟಿಯನ್ನೇ ಕುರಿತು ವಿಚಾರ ಮಾಡಿದಾಗ ಅದರಲ್ಲಿ ಇರುವ ವ್ಯತ್ಯಾಸಗಳು ಕಂಡುಬರುತ್ತವೆಯೇ ವಿನಃ ಅದರ ಮೂಲ ದಲ್ಲಿರುವ ಏಕತೆ ತಿಳಿದುಬರುವುದಿಲ್ಲ. ಅದು ತಿಳಿಯಬೇಕಾದರೆ ಮನಸ್ಸು ಸೃಷ್ಟಿಯಿಂದ ಸೃಷ್ಟಿಕರ್ತನ ಕಡೆಗೆ ಹರಿಯಬೇಕು. ನಾವು ಪ್ರಭುವನ್ನು ಯಾವ ದೃಷ್ಟಿಯಿಂದ ನೋಡುತ್ತೇವೋ, ನಮ್ಮ ಭಾವನೆಗಳಿಗನುಗುಣವಾಗಿ ಅದೇ ರೀತಿಯಲ್ಲಿ ಆತನು ನಮಗೆ ಪ್ರತ್ಯುತ್ತರ ಕೊಡುತ್ತಾನೆ.

ನಮ್ಮ ದೇಶದ ಕಾವ್ಯ, ಇತಿಹಾಸ, ಧರ್ಮಶಾಸ್ತ್ರ, ತಂತ್ರ, ಮಂತ್ರ, ಆಗಮಶಾಸ್ತ್ರ ಮುಂತಾದವುಗಳೆಲ್ಲವೂ ಹೆಜ್ಜೆಹೆಜ್ಜೆಗೂ ಗಾಯತ್ರಿಯ ಸ್ಮರಣೆಯಿಂದ ಪುನೀತವಾಗಿವೆ. ಪರಂಪರೆಯ ಪ್ರಕಾರ ಸಕ್ರಮವಾಗಿ ಗಾಯತ್ರಿಯ ಉಪದೇಶವಾಗದವನಿಗೆ ವೇದಾಧ್ಯಯನ ಮಾಡುವ ಅಧಿಕಾರ ವಿಲ್ಲ. ದ್ವಿಜರಲ್ಲಿಯೂ ಬ್ರಾಹ್ಮಣರಿಗೆ ಮಂತ್ರಸಿದ್ಧಿಗೂ, ಇತರ ಕರ್ಮಾ

ಚರಣೆಗಳಿಗೂ, ತಪಶ್ಶಕ್ತಿಗೂ, ದೇಹಯಾತ್ರೆಗೂ ಗಾಯತ್ರೀದೇವಿಯೇ ಪ್ರಧಾನ ದೇವತೆ. ಈ ದೇವಿಯನ್ನು ಬಿಟ್ಟರೆ ದ್ವಿಜತ್ವವೇ ಇರುವುದಿಲ್ಲ. ಇದು ಸಕಲ ಇಷ್ಟಾರ್ಥಸಾಧಕ. ಅಂತೆಯೇ ವಿಶೇಷವಾದ ತೇಜಸ್ಸನ್ನು ಕರುಣಿಸುವುದು.

ಸಕಲ ದೇವತಾಮಂತ್ರಗಳೂ ಚಿದ್ವಸ್ತುವಾದ ಗಾಯತ್ರೀ ಮಂತ್ರದಲ್ಲಿ ಅಂತರ್ಭೂತವಾಗಿರುವುವು. ಆದುದರಿಂದಲೇ ರುದ್ರಗಾಯತ್ರೀ, ಬ್ರಹ್ಮ ಗಾಯತ್ರೀ ಹಂಸಗಾಯತ್ರೀ, ವಿಷ್ಣು ಗಾಯತ್ರೀ, ಇತ್ಯಾದಿ ನಾಮಗಳು ಆಯಾಯಾ ದೇವತಾ ನಾಮಗಳೊಡಗೂಡಿರುವುದರಿಂದ ಬಂದಿದೆ. ಆದರೆ ಗಾಯತ್ರೀ ಮಂತ್ರದಲ್ಲಿ ಮಾತ್ರ ಯಾವ ಹೆಸರೂ ಬಂದಿಲ್ಲ. ಆದುದರಿಂದಲೇ ಗಾಯತ್ರೀದೇವಿಯ ಮಂತ್ರಕ್ಕೆ ಶಿವ, ವಿಷ್ಣು, ಸೂರ್ಯ ಮುಂತಾದ ದೇವತೆ ಗಳ ಪರವಾಗಿ ಅರ್ಥಮಾಡಬಹುದಾದರೂ ಗಾಯತ್ರೀ ದೇವಿಯ ಭಾವನೆ ಯಿಂದಲೇ ಆ ಭುವನೇಶ್ವರಿಯನ್ನು ಉಪಾಸಿಸಬೇಕು. 'ಗಾಯತ್ರೀ' ಎಂಬ ಶಬ್ದ ವರ್ಣ ವ್ಯತ್ಯಯದಿಂದ 'ತ್ರೀಗಾಯಾ' 'ತ್ರೀಗಮನಾ' ಎಂದಾಗಿ ಸಾಧಕ ನಿಗೆ ಮಾನಸಿಕವಾಗಿಯೂ, ವಾಚಿಕವಾಗಿಯೂ, ದೈಹಿಕವಾಗಿಯೂ ಉತ್ತಮ ಗತಿಯನ್ನು ಕೊಡುವಂತಹುದು—ಎಂಬ ಭಾವ ಸೂಚಿತವಾಗು ತ್ತದೆ. ಯಾವುದು ಮನಸ್ಸಿನಲ್ಲಿ, ಮಾತಿನಲ್ಲಿ ಮತ್ತು ಕೃತಿಯಲ್ಲಿ, ಈ ಮೂರು ಕರಣಗಳಲ್ಲಿಯೂ ಊರ್ಧ್ವಗತಿಯನ್ನು ಹುರಿದುಂಬಿಸುತ್ತದೆಯೋ ಅದೇ 'ತ್ರೀಗಮನಾ' 'ತ್ರೀಗಾಯಾ.' ಅದೇ 'ಗಾಯತ್ರೀ.'

ಗಾಯತ್ರಿಯು ವೇದಮಂತ್ರ. ವೇದಗಳಿಗಿಂತ ಹಿಂದಿನ ಮಂತ್ರವೇ ಇಲ್ಲ. ಏಕೆಂದರೆ ಬ್ರಹ್ಮನು ವೇದಗಳ ಸಹಾಯದಿಂದಲೇ ಸೃಷ್ಟಿಯನ್ನು ಆರಂಭಿಸಿ ದನು. ವೇದಾಧ್ಯಯನ ಮತ್ತು ವೇದಾರ್ಥಗಳ ತಿಳಿವಳಿಕೆಗೆ ಗಾಯತ್ರೀ ಉಪಾಸನೆಯು ಅಸ್ತಿಭಾರದಂತಿರುವುದೆಂದು ವೇದರ್ಷಿಗಳು ವಿಧಿಸಿರುವರು. ದೈಹಿಕ ಶ್ರೇಯೋಭಿವೃದ್ಧಿಯನ್ನು ಸಾಧಿಸುತ್ತಿರುವ ವೇಳೆಯಲ್ಲಿಯೇ ಕ್ರಮ ವಾಗಿ ಆತ್ಮಸಾಕ್ಷಾತ್ಕಾರಕ್ಕೆ ಎಡೆಮಾಡಿಕೊಡುತ್ತಿರುವುದೇ ಗಾಯತ್ರೀ ಮಂತ್ರದ ಹೆಚ್ಚುಗಾರಿಕೆ. ಪಂಚಭೂತಗಳಿಂದಾದ ಈ ಶರೀರದ, ತಮೋ ಮಯವಾದ ಅಂತಃಕರಣಗಳನ್ನು ಶುದ್ಧ ಮಾಡಿ, ಅಲ್ಲಿ ಜ್ಞಾನದ ಬೆಳ ಕನ್ನು ಮೂಡಿಸುವುದೇ ಗಾಯತ್ರೀಮಂತ್ರದ ಶಕ್ತಿ. ಇದು ನಮಗೆ ಪರ ಮಾತ್ಮನೆಂಬ ಸೂರ್ಯನ ಕಡೆಗಿರುವ ಕಿಟಕಿಯನ್ನು ತೆರೆಯಲು ಕಲಿಸಿ, ತನ್ಮೂಲಕ ಜ್ಞಾನನೆಂಬ ಸೂರ್ಯನ ಬೆಳಕು ಒಳಕ್ಕೆ ಪ್ರವೇಶಿಸುವಂತೆ

ಮಾಡಿ, ಅಲ್ಲಿರುವ ಪಾಪ ಮತ್ತು ಅಜ್ಞಾನಗಳನ್ನು ನಾಶವಮಾಡಲಾರಂಭಿಸುತ್ತದೆ. ಪುಟ್ಟಕೃಷ್ಣನ ಪುಟ್ಟಬಾಯಲ್ಲಿ ಬ್ರಹ್ಮಾಂಡವೇ ಅಡಗಿರುವಂತೆ ಈ ಚಿಕ್ಕಮಂತ್ರದಲ್ಲಿ ಸಕಲತತ್ತ್ವಗಳೂ ತುಂಬಿವೆ. ಕಾಗದದ ನೂರಾರು ಹಾಳೆಗಳಿಗಿಂತಲೂ, ರಾಷ್ಟ್ರಮುದ್ರೆ ಇರುವ ಒಂದು ನೋಟಿನ ಬೆಲೆ ಅಧಿಕ. ನಾವು ಗಾಯತ್ರಿಯ ಉಪಾಸನಾರೂಪವಾದ ಕರ್ಮಗಳನ್ನು ಮಾಡಹೊರಟರೆ ಅವೇ ನಮ್ಮ ಆತ್ಮಸೌಂದರ್ಯವನ್ನು ಬೆಳಗಿಸುವ ಪುಷ್ಪಹಾರ, ಆಭರಣಗಳಾಗುವುವು. ಸಮುದ್ರ ಬಯಸದೇ ಇದ್ದರೂ, ಎಲ್ಲಾ ಭಾಗಗಳಿಂದ ನೀರು ಸಮುದ್ರದ ಕಡೆಗೆ ಧಾವಿಸಿಬರುವಂತೆ ಸಕಲ ಸಿದ್ಧಿಗಳೂ ಲಭ್ಯವಾಗುವುವು. ಇಷ್ಟೇ ಅಲ್ಲದೆ ಈ ಮಂತ್ರವು ದೇವತೆಗಳಿಗೂ, ಮಾನವರಿಗೂ ಸಂಪರ್ಕ ಕಲ್ಪಿಸುವ ತಂತು (Fuse wire) ಎಂದು ಹೇಳುತ್ತಾರೆ.

ಗಾಯತ್ರೀ ಮಂತ್ರವು ಮನುಷ್ಯನನ್ನು ರಹಸ್ಯವಾದ ಯೋಗಮಾರ್ಗದಲ್ಲಿ ಕರೆದುಕೊಂಡು ಹೋಗುವ ಆಶಯದಿಂದ ಕೂಡಿರುತ್ತದೆ. ಯೋಗದ ಎಂಟು ಅಂಗಗಳ ಗುರಿ ಯಾವುದೋ ಅದನ್ನೇ ಗಾಯತ್ರಿಯೂ ಜಪದ್ವಾರ ಮುಟ್ಟಲು ಎಳಸುತ್ತದೆ. ಇದು ಯೋಗದೊಡನೆ ಗಾಢವಾಗಿ ಹೊಸೆದುಕೊಂಡಿರುತ್ತದೆ ; ಅದು ಒಂದು ಬಗೆಯ ಯೋಗವೇ ಆಗಿರುತ್ತದೆ. ಯೋಗದ ರಹಸ್ಯವಾದ ಅಂಶಗಳೆಲ್ಲವೂ ಇದರಲ್ಲಿ ಸೇರಿಕೊಂಡಿವೆ. ಗಾಯತ್ರೀ ಉಪಾಸನಾಕ್ರಮದಲ್ಲಿ ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ ಮತ್ತು ಸಮಾಧಿಗಳೆಂಬ ಯೋಗದ ಅಂಗಗಳು ಒಂದರೊಡನೊಂದು ಸೇರಿಹೋಗಿವೆ. ಅದಕ್ಕೂ ಯಮ, ನಿಯಮ, ಆಸನಗಳು ತಳಹದಿಯಾಗಿರುತ್ತವೆ. ಈ ಕಾರಣದಿಂದಲೇ ಇದು ಯೋಗದ ದೃಶ್ಯ, ಮತಿ ಮತ್ತು ಗತಿಗಳನ್ನು ಸಾಧಿಸಲು ಒಂದು ಪ್ರಶಸ್ತವಾದ ಸಾಧನವಾಗಿರುತ್ತದೆ. ಇದನ್ನು ಸಾಧಿಸಿದವನಿಗೆ ಅವುಗಳು ಅವಶ್ಯಕವಾಗಿ ಪ್ರಾಪ್ತವಾಗುತ್ತವೆ ಎಂಬುದು ಸ್ಪಷ್ಟವಾಗುತ್ತದೆ. ಪರಮಾತ್ಮಯೋಗವೇ ಗಾಯತ್ರಿಯ ಲಕ್ಷ್ಯ. ಇಷ್ಟೇ ಅಲ್ಲದೆ ಗಾಯತ್ರಿಯು, ಪ್ರಣವ, ಹಂಸ, ಕುಂಡಲಿನೀ ಮತ್ತು ಮಂತ್ರಯೋಗಗಳಿಗೆ ಸಂಬಂಧಿಸಿದ, ಸೂಕ್ಷ್ಮವಾದ ದರ್ಶನ, ಶ್ರವಣ ಮತ್ತು ಅನುಭವಗಳೆಲ್ಲವನ್ನೂ ತನ್ನಲ್ಲಿ ಒಳಗೊಂಡಿರುತ್ತದೆ. ಎಲ್ಲಾ ಪ್ರಾಣಿಗಳಲ್ಲಿಯೂ ಚೈತನ್ಯರೂಪವಾಗಿರುವ ಶಬ್ದಬ್ರಹ್ಮವೇ ಕುಂಡಲಿನೀರೂಪದಲ್ಲಿ ಶರೀರದ ಮಧ್ಯದಲ್ಲಿರುತ್ತದೆ. ಅದೇ ವರ್ಣಾತ್ಮಕವಾದ ಗದ್ಯಪದ್ಯಗಳ ರೂಪದಲ್ಲಿ ತನ್ನನ್ನು ವ್ಯಕ್ತಪಡಿಸಿಕೊಳ್ಳುತ್ತದೆ. ಆ ಶಬ್ದಬ್ರಹ್ಮವೇ ಬೇರೆಬೇರೆ ತತ್ತ್ವಗಳೊಡನೆ

ಸಂಯೋಗ ಪಡೆದಾಗ ಬೇರೆಬೇರೆ ಬಗೆಯಾದ ವರ್ಣಗಳು ಉತ್ಪತ್ತಿಯಾಗು ತ್ತವೆ. ತತ್ತ್ವಗಳಿಗೂ ವರ್ಣಗಳಿಗೂ ಮಧ್ಯ ಇರುವ ಸಂಬಂಧವನ್ನು ಆಳವಾಗಿ ಅನ್ವೇಷಣೆಮಾಡಿ ಮಂತ್ರಗಳ ದ್ವಾರಾ ತತ್ತ್ವ ಜ್ಞಾನಕ್ಕೆ ದಾರಿ ಮಾಡಿಕೊಡುವುದೇ ಮಂತ್ರಶಾಸ್ತ್ರದ ಕೆಲಸ. ಗಾಯತ್ರೀ ಮಹಾಮಂತ್ರವೂ ಸಹ ಕುಂಡಲಿನಿಯೊಡನೆ ಆಳವಾದ ಸಂಬಂಧವನ್ನು ಪಡೆದಿರುತ್ತದೆ. ಕುಂಡ ಲಿನಿಯಿಂದ ಹುಟ್ಟುವ ಗಾಯತ್ರಿಯು ಪ್ರಾಣಧಾರಿಣಿಯೂ, ಪ್ರಾಣ ವಿದ್ಯೆಯೂ ಆಗಿ ಮಹಾವಿದ್ಯೆಯಾಗಿದೆ ಎಂದು ಯೋಗಶಾಸ್ತ್ರಗಳು ತಿಳಿಸು ತ್ತವೆ.

**ಮಂತ್ರಗಳು:** ಯಾವ ವಿಶಿಷ್ಟ ಶಬ್ದ ಸಂಯೋಜನೆಗಳ ಪುನರುಚ್ಚಾರಣೆ ಯಿಂದ ಕೆಲವು ನಿರ್ದಿಷ್ಟ ಪರಿಣಾಮಗಳು ಉಂಟಾಗುತ್ತವೆಯೋ ಆ ಶಬ್ದ ಸಂಯೋಜನೆಗಳನ್ನು 'ಮಂತ್ರ'ವೆಂದು ಕರೆಯುತ್ತಾರೆ. ಯಾವ ಶಬ್ದಗಳ ಸಂಯೋಜನೆಯಿಂದ ಕೂಡಿದ ಋಕ್ಕನ್ನು ಅರ್ಥಪೂರ್ಣವಾಗಿ ಚಿಂತಿಸಿ ಧ್ಯಾನಿಸುವುದರಿಂದ ರಕ್ಷಣೆ-ಪೋಷಣೆಗಳು ದೊರೆಯುವುವೋ ಅದೇ ಮಂತ್ರ. ಆಧ್ಯಾತ್ಮಿಕ ವಿಕಾಸವೇ ಮಂತ್ರ ಪಠಣದ ಮುಖ್ಯ ಗುರಿ. ಆಧ್ಯಾತ್ಮಿಕ ವಿಕಾಸವೇ ಮಂತ್ರಯೋಗದ ಏಕೈಕ ಗುರಿ. ಪ್ರಪಂಚದಲ್ಲಿ ಅರ್ಥವಿಲ್ಲದ ಧ್ವನಿ ಯಾವುದೂ ಇಲ್ಲ. ನಿಸರ್ಗದಲ್ಲಿ ಬೆಂಕಿ, ಗಾಳಿ, ನೀರು, ವಾಹನ ಇತ್ಯಾದಿ ಪದಾರ್ಥಗಳೂ ಸಹ ತಾವು ಮಾಡುವ ಶಬ್ದಗಳಿಂದ ತಮ್ಮತಮ್ಮ ಸ್ಥಿತಿಗತಿ ಗಳನ್ನು ಪ್ರಕಟಿಸಿಕೊಳ್ಳುತ್ತವೆ. ಹಾಗಿರುವಾಗ ಸೃಷ್ಟಿ ರಹಸ್ಯಗಳನ್ನೂ ಮತ್ತು ದೈವೀ ಸತ್ಯಗಳನ್ನೂ ಪ್ರಕಟಗೊಳಿಸುವ ಧ್ಯೇಯವುಳ್ಳ ಮಂತ್ರಗಳು ಅರ್ಥಪೂರ್ಣವಾಗಿರಲೇಬೇಕು. ಮಂತ್ರಗಳಲ್ಲಿ ಕೆಲವು ಭಾಗಗಳು ಧ್ವನ್ಯಾತ್ಮಕ ವಾಗಿಯೂ ಮತ್ತು ಇತರ ಭಾಗಗಳು ಪದ ಮತ್ತು ವಾಕ್ಯಾತ್ಮಕ ವಾಗಿಯೂ ಇರುತ್ತವೆ. ಅರ್ಥವಿಲ್ಲದೆ ಮಾತಿಲ್ಲ. ಮಾತಿಲ್ಲದೆ ಅರ್ಥವು ಹೊರ ಡುವುದಿಲ್ಲ. ಮಂತ್ರಗಳಲ್ಲಿ ಅರ್ಥವು ಆತ್ಮ, ಮಾತು ಒಡಲು. ಮಂತ್ರವು ಅರ್ಥವನ್ನು ತನ್ನಲ್ಲಿ ಮುಚ್ಚಿಟ್ಟುಕೊಂಡಿರುವ ಹೊದಿಕೆ. ತಪಸ್ಸಿನಿಂದಲೂ, ಧ್ಯಾನದಿಂದಲೂ, ಮನಸ್ಸಿನಲ್ಲಿ ಪ್ರತಿಭಾಸಿತವಾಗುವ ಸೃಷ್ಟಿರಹಸ್ಯಗಳನ್ನು ಮುಚ್ಚಿಟ್ಟುಕೊಂಡಿರುವುದರಿಂದ ಅವುಗಳ ಅರ್ಥವನ್ನು ತಿಳಿಯಬೇಕಾದರೆ ಮನಸ್ಸು ಮತ್ತು ಹೃದಯಗಳು ಬೆಳೆಯಬೇಕು. ಅವು ಬೆಳೆಯುವಂತೆ ಮಾಡುವುದೇ ಮಂತ್ರದಉದ್ದೇಶ. ಆ ಅಗಾಧವಾದ ಸತ್ಯಗಳನ್ನು ಮುಟ್ಟಲು ಮಂತ್ರಗಳು ಏಣಿ ಎಂದು ಎಣಿಸಬಹುದು.

ಒಂದೊಂದೇ ಅಕ್ಷರದ ಮಂತ್ರಗಳೂ ಇವೆ, ಅನೇಕ ಅಕ್ಷರಗಳಿಂದ ಕೂಡಿದ ಮಂತ್ರಗಳೂ ಇವೆ. ಗಾಯತ್ರೀ ಮಂತ್ರವು ಇಪ್ಪತ್ತನಾಲ್ಕು ಅಕ್ಷರಗಳಿಂದ ಕೂಡಿದೆ. ಈ ಮಂತ್ರಸಿದ್ಧಿಯನ್ನು ಪಡೆದರೆ ಅದು ಸಮಸ್ತ ದುಷ್ಟಶಕ್ತಿಗಳಿಂದ ರಕ್ಷಣೆ ನೀಡುವ ಒಂದು ಮಹಾ ರಕ್ಷಾಸ್ತ್ರವಾಗಿ ಪ್ರಜ್ವಲಿಸುವುದು.

ಅಕ್ಷರ ಅಥವಾ ವರ್ಣಗಳಿಂದ ಶಬ್ದಗಳಾಗುವುದರಿಂದ ಪ್ರತಿಯೊಂದು ವರ್ಣದಲ್ಲಿಯೂ ಶಕ್ತಿಯು ಅಂತರ್ಗತವಾಗಿದೆ ; ವರ್ಣ ಶಕ್ತಿಯು ಪ್ರತೀಕವಾಗಿದೆ. ಇವುಗಳಿಗೆ 'ಮಾತೃಕೆ'ಗಳೆಂದು ಹೆಸರು. ಇಂತಹ ಮಾತೃಕೆಗಳಿಂದ ಉಪಲಬ್ಧವಾದ ಮಂತ್ರವು ಕೇವಲ ವರ್ಣಸಮೂಹವಲ್ಲ, ದೇವತಾಸ್ವರೂಪವೇ ಆಗಿದೆ. ಹೀಗೆ ಮಂತ್ರವೇ ದೇವತೆಯಾಗಿರುವದು ; ಮಂತ್ರಭಾವನೆಯೇ ದೇವತಾ ಭಾವನೆಯಾಗಿರುವುದು. ಪ್ರತಿಯೊಂದು ಮಂತ್ರದಿಂದಲೂ, ಒಂದು ನಿರ್ದಿಷ್ಟ ದೇವತೆ ಪ್ರತಿಪಾದ್ಯವಾಗುತ್ತದೆ. ಈ ಕಾರಣಗಳಿಂದ ಗಾಯತ್ರೀ ಜಪಕಾಲದಲ್ಲಿ ಅದರ ಅರ್ಥವನ್ನು ಮನಸ್ಸಿನಲ್ಲಿ ಚಿಂತಿಸುತ್ತಾ, ಮನಸ್ಸನ್ನು ಅದರಲ್ಲಿ ಏಕಾಗ್ರತೆ ಮಾಡಿ, ಅದರ ಮೂಲವನ್ನು ಮುಟ್ಟಲು ಯತ್ನಿಸಬೇಕು. ಧ್ಯಾನದಿಂದ ಚಕ್ರಸ್ಥಾನಗಳಲ್ಲಿ ವರ್ಣಗಳು ಹೇಗೆ ಕೇಳುತ್ತವೆಯೋ ಹಾಗೆ ಅವುಗಳನ್ನು ಉಚ್ಚರಿಸಿದಾಗ ವರ್ಣಗಳನ್ನು ಒಳಗೊಂಡ ಮಂತ್ರಗಳು ಅವು ಯಾವ ಮೂಲದಿಂದ ಉಂಟಾಗುತ್ತವೆಯೋ ಆ ಮೂಲದವರೆಗೂ ಹೋಗಲು ಒಳಮಾರ್ಗವನ್ನು ತೆರೆದುಕೊಡುತ್ತವೆ ಎಂಬುದೇ ಮಂತ್ರಶಾಸ್ತ್ರದ ತತ್ತ್ವ.

ವೇದಮಂತ್ರಗಳಲ್ಲಿ ಅದ್ಭುತ ಶಕ್ತಿ ಇದೆ. ಅವುಗಳ ನಿಯಮಬದ್ಧವೂ, ಸುಸ್ವರವೂ, ಆದ ಪಠನದಿಂದ ಹೊರಡುವ ಶಬ್ದ ತರಂಗಗಳು ಮಾನವನ ಮನಸ್ಸನ್ನು ಪ್ರವೇಶಿಸಿ, ಅವನಲ್ಲಿರಬಹುದಾದ ಕಾಮಕ್ರೋಧಾದಿ ಅನೈತಿಕ ಭಾವನೆಗಳನ್ನು ಹೋಗಲಾಡಿಸುತ್ತವೆ. ಸದ್ಭಾವನೆಯನ್ನು ಮೂಡಿಸಲು ಸಮರ್ಥವಾಗುತ್ತವೆ. ಹಾಗಾಗಿ ದೇಹಬಲ, ಮನೋಬಲ, ಬುದ್ಧಿಬಲಗಳುಂಟಾಗಿ ಸಾಧಕನ ಆತ್ಮಸಾಧನೆಗೆ ಸಹಾಯಕವಾಗುತ್ತವೆ. ಪರೋಕ್ಷವಾಗಿ ಇವು ಇಡೀ ಸಮಾಜಕ್ಕೆ ಶ್ರೇಯಸ್ಸನ್ನುಂಟುಮಾಡುತ್ತವೆ.

# ಶ್ರೀ ಗಾಯತ್ರೀ ಜಪ ವಿವರಣೆ

ಗಾಯತ್ರೀ ಮಂತ್ರಕ್ಕೆ ಪೂರ್ವಭಾವಿಯಾಗಿ ಭೂತಶುದ್ಧಿ, ಭೂಶುದ್ಧಿ, ಆಸನ ಕಲ್ಪನೆ, ಗಾಯತ್ರೀ ಹೃದಯ, ಗಾಯತ್ರೀ ಆಹ್ವಾನ, ಗಾಯತ್ರೀ ಪ್ರಾರ್ಥನೆ, ಗಾಯತ್ರೀ ಆವಾಹನೆ, ಪ್ರಾಣಾಯಾಮ ಮತ್ತು ಸಂಕಲ್ಪ, ಕರನ್ಯಾಸ, ಅಂಗನ್ಯಾಸಗಳು, ದಿಗ್ಬಂಧನ ಮತ್ತು ಧ್ಯಾನ ಈ ಕ್ರಮ ಗಳನ್ನು ಅನುಸರಿಸಬೇಕು. ಗಾಯತ್ರೀ ಮಂತ್ರವನ್ನು ಉಪಾಸಕನು ಶಾಂತಚಿತ್ತನಾಗಿ, ಮೌನದಿಂದ, ಮನಸ್ಸಿನಲ್ಲಿಯೇ ಮಂತ್ರಾರ್ಥವನ್ನು ಚಿಂತಿಸುತ್ತ ಜಪಿಸಬೇಕು. ಸಮಾಧಾನ, ಶುಚಿತ್ವ ಅವಶ್ಯ. ಕೋಪ-ದುಃಖ-ದುಮ್ಮಾನಗಳ ಸೋಂಕು ಮನಸ್ಸಿಗಿರಬಾರದು. ಆಲಸಿಕೆ, ಸೀನುವುದು, ನಿದ್ರೆ, ಕೇಕರಿಸುವುದು, ಆಕಳಿಕೆ ಇರಬಾರದು. ಒದ್ದೆಬಟ್ಟೆಯನ್ನುಟ್ಟಿರ ಬಾರದು. ಕುತ್ತಿಗೆಯ ಸುತ್ತ ಬಟ್ಟೆ ಸುತ್ತಿರಬಾರದು. ನಾಭಿಯ ಕೆಳ ಭಾಗವನ್ನು ಸ್ಪರ್ಶಿಸಬಾರದು. ಪವಿತ್ರವನ್ನು ಧರಿಸದೆ, ಜುಟ್ಟು ಗಂಟು ಹಾಕದೆ, ಕಚ್ಚೆ ಧರಿಸದೆ ಜಪಿಸಬಾರದೆಂಬುದು ವ್ಯಾಸರ ವಚನ. ಗಾಯತ್ರಿಯು ಅಗ್ನಿಮುಖಿಯಾದುದರಿಂದ ನೀರಿನಲ್ಲಿ ನಿಂತು ಜಪಿಸ ಬಾರದು. ಕಾರಣ ಅದು ನೀರಿನಲ್ಲಿ ನಂದಿಹೋಗುತ್ತದೆ.

ಗಾಯತ್ರೀ ಜಪವು 'ಸನಾತನ'ವೆಂದು ಹೇಳಲಾಗಿದೆ (ದೈವೀ ಭಾಗ ೧೨-೮-೮೮-೯೭). ಜಪನೆಂದರೆ ಒಂದು ಉಪದಿಷ್ಟ ಮಂತ್ರವನ್ನು ಅರ್ಥಾನುಸಂಧಾನದಿಂದ ಕ್ರಮಬದ್ಧವಾಗಿ, ಅಕ್ಷರ, ಪದ, ವಾಕ್ಯ ಮತ್ತು ಉದಾತ್ತಾದಿ ಸ್ವರಗಳಲ್ಲಿ ಯಾವ ವ್ಯತ್ಯಾಸವೂ ಆಗದಂತೆ ಮಂತ್ರದ ಆವರ್ತನೆ. ಸಾಧಕನು ನಿಶ್ಚಿತ ಗುರಿಯ ಕಡೆಗೆ ತನ್ನ ಎಲ್ಲಾ ಶಕ್ತಿಗಳನ್ನೂ ಏಕಮುಖವಾಗಿ ತಿರುಗಿಸಿ, ಒಂದು ನಿರ್ದಿಷ್ಟ ಉದ್ದೇಶವನ್ನು ಸಾಧಿಸಿ ಕೊಳ್ಳುವುದು ಜಪದ ಲಕ್ಷಣ. ಅರ್ಥವನ್ನು ಅರಿತು ಅದಕ್ಕೆ ಭಂಗಬಾರ ದಂತೆ ಸ್ಪಷ್ಟವಾಗಿ ಉಚ್ಚರಿಸಬೇಕೆಂಬುದು ವಿಧಿ. ಸುಸ್ವರದಿಂದ ಉಚ್ಚರಿಸ ಲ್ಪಟ್ಟ ಮಂತ್ರವು ಅದರಲ್ಲಡಗಿರುವ ಅಮೃತ ಬೀಜಾಕ್ಷರಗಳ ಪ್ರಭಾವ ದಿಂದ ಅನುರೂಪವಾದ ಚಲನೆಯು ಉಚ್ಚರಿಸುವ ಅಧಿಕಾರಿಯ ಶರೀರದಲ್ಲಿ ಪ್ರಥಮದಲ್ಲುಂಟಾಗಿ ಬ್ರಹ್ಮರಂಧ್ರ ನಾಡಿಯಲ್ಲಿರುವ ದೇವತಾಂಶಗಳಾದ

ಶಕ್ತಿಗಳೊಡನೆ ಸಂಬಂಧವನ್ನು ಪಡೆದು, ಅದೃಶ್ಯ ಪ್ರಪಂಚದಲ್ಲಿ ಅಂದರೆ ವಿಶ್ವವ್ಯಾಪಿಯಾದ ಅನಾಹತನಾದದಲ್ಲಿ ಚಲನರೂಪವು ಉತ್ಪತ್ತಿಯಾಗಿ, ಆಕಾಶದಲ್ಲಿ ವ್ಯಾಪಿಸಿರುವ ವಿದ್ಯುಚ್ಛಕ್ತಿಯ ಪ್ರವಾಹದ ಮೂಲಕ ಸೂಕ್ಷ್ಮಲೋಕದಲ್ಲಿರುವ ಶಕ್ತಿಗಳೊಡನೆ ನಿಕಟ ಸಂಬಂಧವನ್ನು ಪಡೆಯುವುದು. ಸಾಧಕನು ತನ್ನ ಭಾವನೆಗಳನ್ನು ಇಷ್ಟದೇವತೆಯ ಕಡೆಗೆ ಹರಿಸಿದರೆ, ಅದಕ್ಕೆ ಪ್ರತಿಕ್ರಿಯೆಯಾಗಿ ಭಕ್ತಿಯುಂಟಾಗಿ ಕಾಲಕ್ರಮದಲ್ಲಿ ಅವನ ಹೃದಯವನ್ನು ತುಂಬುತ್ತದೆ. ಆ ಇಷ್ಟದೇವತೆಯ ಸ್ವರೂಪವನ್ನು ತಿಳಿಯಲು ಅವನು ಪ್ರಯತ್ನಪಟ್ಟರೆ, ಅದಕ್ಕೆ ಪ್ರತಿಯಾಗಿ ಅವನ ಮನಸ್ಸಿನಲ್ಲಿ ವಿವೇಕವು ಮೂಡುತ್ತದೆ. ಆ ದೇವತೆಗಾಗಿ ಅವನು ಅತಿಶಯವಾಗಿ ಹಂಬಲಿಸಿದರೆ, ಅದರ ಸಮೀಪಕ್ಕೆ ಅವನು ಎಳೆಯಲ್ಪಡುತ್ತಾನೆ. ತನ್ನ ಆತ್ಮಾರ್ಪಣೆ(ಶರಣಾಗತಿ) ಭಾವಯನ್ನು ಅವನು ತೀವ್ರಗೊಳಿಸಿದರೆ, ಅವನ ಮೇಲೆ ಕೃಪೆಯು ವರ್ಷಿಸಲ್ಪಡುತ್ತದೆ. ಪ್ರಯತ್ನವಿಲ್ಲದೆ ಪ್ರಕೃತಿಯಲ್ಲಿ ಯಾವುದನ್ನೂ ಪಡೆಯಲು ಸಾಧ್ಯವಿಲ್ಲ. ಇದೇ ವೇದ ಮಂತ್ರಗಳ ಪ್ರಭಾವ. (ಪ್ರಪಂಚದಲ್ಲಿ ನಾವು ಕೇಳುವ ಯಾವ ಶಬ್ದವೇ ಆಗಲೀ ಒಂದು ವಸ್ತುವಿನೊಡನೆ ಇನ್ನೊಂದು ವಸ್ತುವು ಸಂಯೋಗವಾಗುವುದರಿಂದಲೇ ಉಂಟಾಗುವ ಶಬ್ದವಾದುದರಿಂದ ಅದು 'ಆಹತ ಶಬ್ದ' ಎಂದು ಕರೆಯಲ್ಪಡುವುದು. ಆದರೆ ಒಂದಕ್ಕೊಂದು ಸಂಯೋಗವಾಗದೆ ತನ್ನಷ್ಟಕ್ಕೆ ತಾನೇ ಸ್ವಾಭಾವಿಕವಾಗಿ ಇರುವ ದೇವತಾತ್ಮಕವಾದ 'ಓಂ'ಕಾರ ನಾದಕ್ಕೆ 'ಅನಾಹತ ಶಬ್ದ'ವೆಂದು ಹೆಸರು.) ಅಭ್ಯಾಸವು ಮಾನವರಿಗೆ ಅಸಾಧ್ಯವನ್ನೂ ಸಾಧ್ಯವಾಗಿ ಮಾಡುತ್ತದೆ. ಅಲ್ಲದೆ ದೇಶ, ಕಾಲ, ದೇವತೆ, ಈಶ್ವರ, ಇತ್ಯಾದಿ ಎಲ್ಲಕ್ಕಿಂತ ಪುರುಷ ಪ್ರಯತ್ನವೇ ಪ್ರಬಲ ಮಂತ್ರವನ್ನು ಅನೇಕ ಬಾರಿ ಏಕಾಗ್ರವಾದ ಮನಸ್ಸಿನಿಂದ ಹೇಳಿವಾಗ ಮನಸ್ಸು ಹೆಚ್ಚುಹೆಚ್ಚು ಒಳಗೆ ಹೋಗಲು ಸಮರ್ಥವಾಗುತ್ತದೆ. ಪುನಃಪುನಃ ಮಂತ್ರವನ್ನು ಉಚ್ಚರಿಸುವುದರಿಂದ ಶರೀರದಲ್ಲಿ ಧೃತಿಯೂ, ಮಂತ್ರದಲ್ಲಿ ಸ್ಪಷ್ಟತೆಯೂ ಮತ್ತು ಒಳಮಾರ್ಗದಲ್ಲಿ ಹೆಚ್ಚು ಸರಾಗವಾಗಿ ಪ್ರವೇಶವೂ ಉಂಟಾಗುತ್ತದೆ ; ಅದನ್ನು ಪದೇಪದೇ ಸ್ಮರಿಸಿಕೊಳ್ಳಲು ಸುಲಭವಾಗುತ್ತದೆ. ಪುನಃ ಪುನಃ ಸ್ಮರಿಸುವುದರಿಂದ ಅದರ ಅರ್ಥವು ಮನಸ್ಸಿಗೆ ಚೆನ್ನಾಗಿ ಪರಿಚಯವಾಗುತ್ತದೆ. ಅರ್ಥಪರಿಚಯದಿಂದ ಮನನವು ಸುಲಭವಾಗುತ್ತದೆ. ಅರ್ಥ ಮನನದಿಂದ ಅನುಸಂಧಾನವು ಸುಲಭವಾಗುತ್ತದೆ.

ಗಾಯತ್ರಿಯು ಒಳಗೊಂಡಿರುವ ಅಂತಹ ಸತ್ಯವನ್ನು ಸಾಕ್ಷಾತ್ಕಾರ ಮಾಡುವುದೇ ಗಾಯತ್ರಿಯ ಉಪಾಸನೆಯ ಏಕಮಾತ್ರ ಲಕ್ಷ್ಯ. ವಿಶ್ವ ಮೂಲವಾದ ಜ್ಯೋತಿಯನ್ನು ಹೃದಯದಲ್ಲಿ ಪ್ರತ್ಯಕ್ಷ ಮಾಡಿಕೊಳ್ಳಲು ಗಾಯತ್ರೀ ಮಂತ್ರವು ಏಕಮಾತ್ರ ಸಾಧನ. ಗಾಯತ್ರೀ ಮಂತ್ರವನ್ನು ಸ್ವರಸಹಿತವಾಗಿ ಜಪಿಸುವುದೇ ಗಾಯತ್ರೀ ಉಪಾಸನೆಯಾಗಿರುತ್ತದೆ. ಆ ರೀತಿ ಮಾಡಿದಾಗ ಆ ಮಂತ್ರವು ಯಾವ ಅರ್ಥವನ್ನು ತನ್ನಲ್ಲಿ ಮುಚ್ಚಿರಿಸಿ ಕೊಂಡಿರುವುದೋ ಆ ಅರ್ಥವು ಮನಸ್ಸಿನಲ್ಲಿ ಪ್ರಕಾಶಕ್ಕೆ ಬರುತ್ತದೆ. ಆ ಸತ್ಯವು ಹೃದಯದಿಂದ ಉದಿಸಿ ಮೇಲಕ್ಕೆ ಬರುತ್ತದೆ ಎಂಬುದು ಅದರ ಮೂಲದೃಷ್ಟಿ. ಅಂದರೆ ಉಪಾಸನೆ ಮಾಡುವವನು ಸಾಕ್ಷಾತ್ ಪರಮಾತ್ಮ ನನ್ನು ದರ್ಶನ ಮಾಡುತ್ತಾನೆ.

ಮಂತ್ರಜಪ ಬೇರೆ, ಪ್ರಾರ್ಥನೆ ಬೇರೆ. ಪ್ರಾರ್ಥನೆಯು ಬರಿಯ ಮನುಷ್ಯಪ್ರಯತ್ನ. ಇದನ್ನು ಯಾವ ಭಾಷೆ ಮತ್ತು ಯಾವ ರೂಪದಲ್ಲಿ ಯಾದಗೂ ಸಲ್ಲಿಸಬಹುದು. ಆದರೆ ಮಂತ್ರವು ದೈವಶಬ್ದಸ್ವರೂಪವಾದುದ ರಿಂದ ಅದು ಸಂಬಂಧಪಟ್ಟ ಋಷಿಯ ಮನಸ್ಸಿನಲ್ಲಿ ಯಾವ ರೂಪದಲ್ಲಿ ಮೊದಲು ಪ್ರಕಟಗೊಂಡಿತೋ ಅದೇ ರೂಪದಲ್ಲಿಪುನರುಚ್ಚಾರಗೊಳ್ಳಬೇಕು. ವೇದಮಂತ್ರಗಳ ಉಚ್ಚಾರಣೆಯು ಬಹಳ ಗಹನವೂ ಮತ್ತು ಅರ್ಥಗರ್ಭಿತವೂ ಆದ ವಿಷಯ. ಮನಸ್ಸನ್ನು ಸಮಾಧಾನಸ್ಥಿತಿಯಲ್ಲಿಟ್ಟುಕೊಂಡು ಮಧ್ಯಮ ಸ್ವರದಲ್ಲಿ ಉದಾತ್ತ, ಅನುದಾತ್ತ ಮತ್ತು ಸ್ವರಿತಗಳಿಂದ ಕೂಡಿದ ವೇದ ಮಂತ್ರಗಳನ್ನು ಹೇಳುವುದರಿಂದ ಬುದ್ಧಿಯು ಮಾರ್ಗದಲ್ಲಿ ಸ್ವರಸಂಚಾರ ವಾಗಿ ಜ್ಞಾನಸಾಧನೆಗೆ ಹಾಗೂ ದೇವತಾದರ್ಶನಕ್ಕೆ ದಾರಿಮಾಡಿಕೊಡುವ ಸಾಮರ್ಥ್ಯವನ್ನು ಹೊಂದುತ್ತದೆ. ಅವುಗಳ ಹಿಂದೆ ಶಾರೀರಕವಾದ ತತ್ತ್ವ ಗಳಿರುತ್ತವೆ. ಆ ತತ್ತ್ವಗಳು ಗಾಯತ್ರಿಯಲ್ಲಿ ವ್ಯಕ್ತವಾಗುವಷ್ಟು ಮಟ್ಟಿಗೆ ಬೇರಾವ ಮಂತ್ರದಲ್ಲಿಯೂ ಆಗುವುದಿಲ್ಲ. ಗಾಯತ್ರಿಯಲ್ಲಿ ಎಂಟು ಉದಾತ್ತ, ಐದು ಅನುದಾತ್ತ, ಆರು ಸ್ವರಿತ, ಮತ್ತು ಐದು ಪ್ರಚಯಗಳು ಇರುತ್ತವೆ. ಸಾಧಕನ ಮನಸ್ಸನ್ನು ಊರ್ಧ್ವಮುಖವಾಗಿಸುವ ಪ್ರಣವವನ್ನು ಉಚ್ಚರಿಸಿ ಅನಂತರ ಆಯಾ ಸ್ವರಸ್ಥಾಯಿಯಲ್ಲಿ ಮನಸ್ಸಿನಲ್ಲಿ ಗಾಯತ್ರೀ ಮಂತ್ರ ವನ್ನು ಹೇಳಿದಮಾತ್ರದಿಂದ ಮನಸ್ಸು ಒಳಮುಖವಾಗಿಯೂ, ಮೇಲ್ಮುಖವಾಗಿಯೂ ಸಂಚರಿಸುವುದರಲ್ಲಿ ಸಮರ್ಥವಾಗುತ್ತದೆ. ಉಸಿ ರಾಟದಲ್ಲಿ ಹೆಚ್ಚು ಕಡಿಮೆ ಇಲ್ಲದ ಮನಸ್ಸನ್ನು ಅಪೂರ್ವವಾದ ಶಾಂತಿಯು

ತುಂಬಿಕೊಳ್ಳುತ್ತದೆ. (ಈ ರೀತಿ ಇರುವುದರಿಂದಲೇ ಗಾಯತ್ರೀ ಮಂತ್ರವು ಆಧಿವ್ಯಾಧಿ ಮತ್ತು ಪಾಪಗಳನ್ನು ನಾಶಮಾಡುತ್ತದೆಂಬ ಮಾತು ಹುಟ್ಟಿ ಕೊಂಡಿತು.) ಮನಸ್ಸಿನ ವಿಕ್ಷಿಪ್ತತೆಯೂ ನಷ್ಟವಾಗುತ್ತದೆ ಮತ್ತು ದೀರ್ಘ ಕಾಲದ ಸಾಧನೆಯಿಂದ ವರ್ಣ (ಅಕ್ಷರ), ಸ್ವರ, ಮಾತ್ರೆ, ಬಲ (ವರ್ಣ ಗಳನ್ನು ಉಚ್ಚರಿಸುವ ಶಕ್ತಿ)ಗಳೆಲ್ಲವೂ ಒಟ್ಟಿಗೆ ಕೂಡಿಬಂದಾಗ ಗಾಯ ತ್ರಿಯ ಒಳ ಅರ್ಥದವರೆಗೆ ಮನಸ್ಸನ್ನು ಎತ್ತಲು ಮಂತ್ರವು ಸಮರ್ಥ ವಾಗುತ್ತದೆ.

ಪ್ರಣವ, ವ್ಯಾಹೃತಿ ಮತ್ತು ಗಾಯತ್ರೀ ಮಂತ್ರ—ಈ ಮೂರನ್ನು ಮಾತ್ರ ಉಚ್ಚರಿಸಿ ಜಪಿಸುವ ಕ್ರಮಕ್ಕೆ 'ತ್ರಿಕ' ಎಂದು ವ್ಯಾಖ್ಯಾನಕಾರರು ಹೇಳುತ್ತಾರೆ. 'ಓಂ'ಕಾರ ವ್ಯಾಹೃತಿಗಳ ಹಿಂಬದಿಯಲ್ಲಿ ಮೂರು ಓಂಕಾರ ಗಳು ಹಾಗೂ ಗಾಯತ್ರೀ ಮಂತ್ರದ ಆದ್ಯಂತಗಳಲ್ಲಿ ಒಂದೊಂದು ಓಂಕಾರ ಗಳನ್ನು ಅಳವಡಿಸಿ ಮಾಡುವ ಜಪಕ್ಕೆ 'ಷಡೋಂಗಾರ-ಗಾಯತ್ರೀ-ಸಂಪುಟ' ಎಂದು ಹೆಸರು. ಈ ಸಂಪುಟ ಗಾಯತ್ರೀ ಜಪವು ಬ್ರಹ್ಮಚಾರಿಗಳಿಗೂ ಮತ್ತು ಗೃಹಸ್ಥರಿಗೂ ಸಂಬಂಧಿಸಿದುದಲ್ಲ. ಇದು ಜಿತೇಂದ್ರಿಯರಾದ ಸಂನ್ಯಾಸಿಗಳು ಮಾತ್ರಾ ಜಪಿಸತಕ್ಕದ್ದು. ಓಂಕಾರ ವ್ಯಾಹೃತಿಗಳೊಡಗೂಡಿದ ಗಾಯತ್ರೀ ಮಂತ್ರಕ್ಕೆ ಕೊನೆಯಲ್ಲಿ ಮತ್ತೆ 'ಓಂ'ಕಾರವನ್ನು ಉಚ್ಚರಿಸಿ ಜಪ ಮಾಡುವ ವಿಧಿಗೆ 'ಸಂಪುಟ ಗಾಯತ್ರೀ' ಎಂದು ಹೆಸರು. ಇದು ಸಮಸ್ತ ಪಾಪಗಳನ್ನೂ ದೂಡಬಲ್ಲುದೆಂಬುದು ಬಲ್ಲವರ ಅಭಿಪ್ರಾಯ. ಆದರೆ ಇದು ಆಚರಣೆಯಲ್ಲಿ ಬಹಳ ಕಡಮೆ. ಯಾವುದೇ ಜಪವಾಗಲಿ ಮಾನಸಿಕ ಜಪವೇ ಅತ್ಯುತ್ತಮ ವಾದುದು.

ಜಪವು 'ವಾಚಿಕ' ಮತ್ತು 'ಮಾನಸಿಕ' ಎಂದು ಎರಡು ಬಗೆ ಎಂದು ಶಾಸ್ತ್ರ ವಿಂಗಡಿಸಿದೆ. ಅವುಗಳಲ್ಲಿ ವಾಚಿಕವು ಉಚ್ಚ ಮತ್ತು ಉಪಾಂಶು ಎಂದು ಎರಡು ವಿಧ. 'ಉಚ್ಚ' ಎಂದರೆ ಮಂತ್ರವನ್ನು ಎಲ್ಲರಿಗೂ ಕೇಳಿಸುವಂತೆ ಗಟ್ಟಿಯಾಗಿ ಹೇಳುವುದು. 'ಉಪಾಂಶು'—ಎಂದರೆ ತುಟಿಗಳನ್ನು ಅಲ್ಲಾಡಿ ಸಿದರೂ ಶಬ್ದವು ಬೇರೆಯವರಿಗೆ ಕೇಳದಂತೆ ಹೇಳುವುದು. ಅಕ್ಷರೋಚ್ಚಾರಣೆಗೆ ಕಾರಣವಾದ ತುಟಿ, ಹಲ್ಲು, ನಾಲಿಗೆ ಮೊದಲಾದ ಯಾವ ಅವಯವಗಳೂ ಕೆಲಸ ಮಾಡದಂತೆ ಮನಸ್ಸಿನಿಂದ ಮೂರ್ಧಪ್ರದೇಶದಲ್ಲಿ ಮಂತ್ರವನ್ನು ಉಚ್ಚಾರಣೆ ಮಾಡುವುದು 'ಮಾನಸ'ವೆನಿಸಿಕೊಳ್ಳುವುದು. ಉಚ್ಚವಾದ ಜಪಕ್ಕಿಂತ ಉಪಾಂಶು ಜಪವೂ, ಉಪಾಂಶು ಜಪಕ್ಕಿಂತ ಮಾನಸ ಜಪವೂ

ಪ್ರಭಾವಶಾಲಿಯಾದುದೆಂದು ಶಾಸ್ತ್ರಗಳು ಹೇಳುತ್ತವೆ. ಮನಸ್ಸಿನಲ್ಲಿ ಮಂತ್ರಾಕ್ಷರಗಳ ಉಚ್ಚಾರವು ಉಚ್ಚವಾಗಿ ಆಗುವಂತೆ ಜಪವನ್ನು ಅಭ್ಯಾಸ ಮಾಡಬೇಕು. ಹಾಗೆ ಮಾಡುವಾಗಲೂ ಸಹಾ ಮಂತ್ರದ ಅರ್ಥದ ಕಡೆಗೆ ಮನವಿರಬೇಕು ಎಂಬುದು ಶಾಸ್ತ್ರದ ವಿಧಿ. ಮೂರ್ತಿಯ ಸ್ಥಾನವನ್ನು ಮಂತ್ರವು ಆಕ್ರಮಿಸಿಕೊಳ್ಳುತ್ತದೆ. ತಾನೇ ಉಚ್ಚರಿಸುವ ಮಂತ್ರದಲ್ಲಿ ಮನಸ್ಸನ್ನು ಇರಿಸುವುದು ಮೂರ್ತಿಧ್ಯಾನಕ್ಕಿಂತ ಬಹಳ ಪ್ರಭಾವಶಾಲಿಯಾಗ ಬಲ್ಲುದು. ಏಕೆಂದರೆ ಮಂತ್ರದಲ್ಲಿ ಪ್ರಾಣ ಸಂಯಮನ, ಧ್ಯಾನ ಇತ್ಯಾದಿ ಗಳಿಗೆ ಪೋಷಕವಾದ ಅಂಶಗಳಿರುತ್ತವೆ. ತಲೆ, ಕತ್ತು, ತುಟಿ, ನಾಲಿಗೆ ಮುಂತಾದುವುಗಳನ್ನು ಸ್ಥಿರವಾಗಿ ಇರಿಸಿದಾಗ ಮಂತ್ರವನ್ನು ಏಕಾಗ್ರವಾದ ರೀತಿಯಲ್ಲಿ ಹೇಳಲು ಬಹಳ ಪೋಷಕವಾದ ಸ್ಥಿತಿಯು ಶರೀರದಲ್ಲಿ ಉಂಟಾಗು ತ್ತದೆ. ಆದುದರಿಂದ ಈ ಅವಯವಗಳ ಹತೋಟಿ ಅವಶ್ಯಕ. ಹಾಗಿರುವಾಗ ಋಜುಕಾಯನಾಗಿ ನಿಂತು ಅಥವಾ ಪದ್ಮಾಸನದಲ್ಲಿ ಕುಳಿತು ಗಾಯತ್ರೀ ಮಂತ್ರವನ್ನು ಜಪಿಸಬೇಕು. ಗಾಯತ್ರಿಯನ್ನು ಸ್ವರಸಹಿತವಾಗಿ ಶರೀರ ಮಧ್ಯದಲ್ಲಿ ಉಚ್ಚರಿಸುವುದರಿಂದ ಏಕಾಗ್ರತೆಯನ್ನು ಪಡೆಯಲು ಸಹಾಯ ವಾಗುತ್ತದೆ. ಒಂದು ವಿಶಿಷ್ಟವಾದ ರೀತಿಯಲ್ಲಿ ಪರಮಾತ್ಮನನ್ನು ಪ್ರಾರ್ಥಿಸುವ ಮಂತ್ರವು ಜ್ಞಾನವನ್ನು ಪಡೆಯಲು ಮಾಧ್ಯಮವಾಗುತ್ತದೆ. ಮಂತ್ರವು ಮನುಷ್ಯನ ಶರೀರಮಧ್ಯದಲ್ಲಿ ಮೂಲಾಧಾರದಿಂದ ಮಸ್ತಿಷ್ಕದವರೆಗೆ ಇರುವ, ಮಾತಿನ ಉತ್ಪತ್ತಿಗೆ ಕಾರಣವಾದ ಚಕ್ರಗಳನ್ನೂ, ನಾಡಿಗಳನ್ನೂ; ಸಕ್ರಿಯವಾಗಿಸುವ ಶಕ್ತಿ, ಉಸಿರಾಟದೊಡನೆ ಹೆಣೆದುಕೊಂಡಿರುವ ಕ್ರಿಯೆ ಯನ್ನೊಳಗೊಂಡಿದೆ.

ಮಾತಿಗೆ ನಾಲ್ಕು ಸ್ಥಾನ ಅಥವಾ ಅವಸ್ಥೆಗಳುಂಟು. ಅವುಗಳಲ್ಲಿ ಮೂರು ಹೃದಯ ಗುಹೆಯಲ್ಲಿ ಅಡಗಿರುವುದರಿಂದ ಪ್ರಕಾಶಕ್ಕೆ ಬರುವುದಿಲ್ಲ. ನಾಲ್ಕ ನೆಯುದನ್ನು ಮನುಷ್ಯರು ಮಾತನಾಡುತ್ತಾರೆ ಎಂದು ಋಗ್ವೇದ ವಿವರಿಸು ತ್ತದೆ. ಯೋಗಶಾಸ್ತ್ರವೂ ಈ ನಾಲ್ಕು ಅವಸ್ಥೆಗಳನ್ನು ಪರಾ, ಪಶ್ಯಂತೀ, ಮಧ್ಯಮಾ ಮತ್ತು ವೈಖರೀ ಎಂಬುದಾಗಿ ಕರೆಯುತ್ತದೆ. ಮೂಲಾಧಾರ ಚಕ್ರದಲ್ಲಿ ಹುಟ್ಟುವ ನಾದವು 'ಪರಾ' ಎಂದೂ, ಅದೇ ಸ್ವಾಧಿಷ್ಠಾನ ಚಕ್ರಕ್ಕೆ ಬಂದಾಗ'ಪಶ್ಯಂತೀ' ಎಂದೂ, ಅನಂತರ ಅದು ಅನಾಹತ ಚಕ್ರವನ್ನು ಮುಟ್ಟಿ ಬುದ್ಧಿ ತತ್ತ್ವಗಳೊಡನೆ ಕೂಡಿದಾಗ ಆ ನಾದವೇ 'ಮಧ್ಯಮಾ' ಎಂದೂ, ಆ ನಾದವೇ ಇನ್ನೂ ಮೇಲಕ್ಕೆ ಬಂದು ಕಂಠದಲ್ಲಿರುವ ವಿಶುದ್ಧ ಚಕ್ರವನ್ನು

ವ್ಯಾಹೃತಿಗಳು, ಮಾತೃಕೆಯುರು, ನಾಡಿಗಳು,
ಓಂಕಾರ ಮತ್ತು ವರ್ಣಸ್ಥಾನಗಳ ವಿವರಗಳು

ಮುಟ್ಟಿ ಕಂಠ, ತಲೆ, ತುಟಿ, ಹಲ್ಲು, ಜಿಹ್ವಮೂಲ, ಜಿಹ್ವೆ(ನಾಲಿಗೆ)ಯ ಅಗ್ರ, ಮಧ್ಯನಾಸಾಗ್ರ ಮುಂತಾದ ಅಕ್ಷರಗಳ ಉಚ್ಚಾರಣೆಗೆ ಕಾರಣವಾದ ಅವಯವಗಳೊಡನೆ ಸಂಪರ್ಕ ಪಡೆದಾಗ 'ವೈಖರೀ' ಎಂದರೆ ಬೇರೆಯವರು ಕೇಳುವಂತಾಗುವ ಮಾತಾಗಿ ಪರಿಣಮಿಸುತ್ತದೆ ಎಂದು ಹೇಳಲ್ಪಡುತ್ತದೆ.

ಯೋಗಿಗಳು ಈ ನಾಲ್ಕು ಅವಸ್ಥೆಗಳಿಗಿಂತಲೂ ಸೂಕ್ಷ್ಮವಾದ ಕಲಾ, ಈಶ, ಅಗ್ನಿ ದೃಷ್ಟಿ, ಕುಂಡಲೀ (ಶಬ್ದ ಬ್ರಹ್ಮ), ಶಕ್ತಿ, ಧ್ವನಿ, ನಾದ, ನಿರೋಧಿಕಾ, ಅರ್ಧೇಂದು ಎಂಬುದಾಗಿ ಕರೆಯಲ್ಪಡುವ ಸ್ಥಿತಿಗಳನ್ನೂ ಅನ್ವೇಷಣೆಮಾಡಿ ಕಂಡುಕೊಂಡಿದ್ದರೆಂದು ಶಾಸ್ತ್ರಗಳು ತಿಳಿಸುತ್ತವೆ. ಇವುಗಳಲ್ಲಿ ಕುಂಡಲಿನೀ ರೂಪವಾದ 'ಶಬ್ದಬ್ರಹ್ಮ' (ಸಂಗೀತಜ್ಞ ನಾದಬ್ರಹ್ಮ)ವೇ ಮಾತಿನ ಮೂಲ. ಅನಾಹತ ಚಕ್ರದಲ್ಲಿ ಕೇಳುವ ಇತರ ಪದಾರ್ಥಗಳೊಡನೆ ಸಂಘರ್ಷವಿಲ್ಲದೆ ತನ್ನ ಪಾಡಿಗೆ ತಾನೇ ಧ್ವನಿಮಾಡುವ, ಚೈತನ್ಯಾತ್ಮಕವಾದ, ಈ ಅನಾಹತ ನಾದವೇ ಶರೀರದಲ್ಲಿ ರಹಸ್ಯವಾಗಿದ್ದುಕೊಂಡು ಮನುಷ್ಯರ ವ್ಯಾಪಾರಗಳೆಲ್ಲ ವನ್ನೂ ನಡೆಸಲು ಕಾರಣವಾದ ಚಕ್ರಗಳ ಮೂಲಕ ಹೊರಹರಿದು ಬೇರೆಬೇರೆ ಅಕ್ಷರಗಳ ರೂಪವನ್ನು ಧಾರಣೆ ಮಾಡುತ್ತದೆ ಎಂದು ಯೋಗಜ್ಞರ ಅಭಿಪ್ರಾಯ. ಈ ಅಕ್ಷರಗಳು ವೈಖರೀ ರೂಪವನ್ನು ತಾಳುವಾಗ ತುಟಿ, ಹಲ್ಲು, ನಾಲಿಗೆ ಮುಂತಾದ ಅವಯವಗಳ ಪ್ರಯತ್ನವನ್ನು ಕೋರಿದರೂ, ಆ ಅಕ್ಷರಗಳ ಉತ್ಪಾತ್ತಿಸ್ಥಾನಗಳು ವಾಸ್ತವದಲ್ಲಿ ಚಕ್ರಗಳ ದಳಗಳೇ ಆಗಿರು ತ್ತವೆ. ಆಧುನಿಕ ಭಾಷಾಶಾಸ್ತ್ರಜ್ಞರೂ ಸಹ ಮಾತು ಮನಸ್ಸಿನಲ್ಲಿ ಉತ್ಪನ್ನ ವಾಗುತ್ತದೆ, ಅನಂತರ ವಾಗವಯವಗಳ ಮೂಲಕ ವ್ಯಕ್ತವಾಗುತ್ತದೆ ಎಂಬ ತಥ್ಯಾಂಶವನ್ನು ಒಪ್ಪಿಕೊಂಡಿರುತ್ತಾರೆ. ಮನಸ್ಸಿನಲ್ಲಿ ಆಯಾ ಅಕ್ಷರಗಳು ಪ್ರತಿಭಾಸಿತವಾಗಲು ಆ ಚಕ್ರಗಳ ದಳಗಳಲ್ಲಿ ಚೈತನ್ಯಾತ್ಮಕವಾದ ಅನಾಹತ ನಾದದ ಸಂಸ್ಪರ್ಶ(ಪ್ರವೇಶ)ವೇ ಕಾರಣವೆಂದು ಹೇಳಬಹುದು. ಎಂದರೆ ಶುದ್ಧವಾದ ನಾದವೇ ಆ ಚಕ್ರಸ್ಥಾನಗಳನ್ನು ಮುಟ್ಟಿದಾಗ ಆಯಾ ಅಕ್ಷರಗಳ ರೂಪವನ್ನು ಧಾರಣೆ ಮಾಡುತ್ತದೆ ಎಂದು ಇದರ ತಾತ್ಪರ್ಯ. ಮನುಷ್ಯನ ಹೃದಯಾಂತರಾಳದಲ್ಲಿ ಗೂಢವಾಗಿ ಅಡಗಿರುವ ಈ ಅಕ್ಷರಗಳಿಗೆ ಕಾರಣವಾದ ನಾದದ ಸಂಚಾರಮಾರ್ಗವೇ ಮೋಕ್ಷಮಾರ್ಗ ಎಂಬುದು ಶಾಸ್ತ್ರವಚನ. ಬೇರೆಬೇರೆ ಚಕ್ರಸ್ಥಾನಗಳಲ್ಲಿ ಉಂಟಾಗುವ ಅಕ್ಷರಗಳ ಮೂಲವು ಸರ್ವೋಚ್ಚ ವಾದ ಬ್ರಹ್ಮರಂಧ್ರವೇ ಎಂದರೆ ಸಹಸ್ರಾರ ಚಕ್ರ. ಅದೇ ಅಂತಿಮವಾಗಿ ಅಕ್ಷರೋತ್ಪತ್ತಿಗೆ ಮೂಲಕಾರಣವಾದ ಜಾಗ. ಅದೇ ಶಿವಶಕ್ತಿಗಳ ನಿವಾಸ ಸ್ಥಾನ. ಅಲ್ಲಿ ಧ್ಯಾನದಲ್ಲಿ ಕಾಣುವ ತ್ರಿಕೋಣವೇ ಅಕಾರದಿಂದ ಹಿಡಿದು ಕ್ಷಕಾರದವರೆಗೆ ಇರುವ ಅಕ್ಷರಗಳ ಉತ್ಪತ್ತಿಸ್ಥಾನವೆಂದು ತಂತ್ರಗ್ರಂಥಗಳು ಹೇಳುತ್ತವೆ.

ವರ್ಣೋತ್ಪತ್ತಿಗೂ ಮತ್ತು ಪಂಚಭೂತ ಶಕ್ತಿಗಳಿಗೂ ಮೂಲ ಪರ

ಮಾತ್ಮವಸ್ತು. ಆ ಕಾರಣದಿಂದಲೇ ಮಂತ್ರಶಾಸ್ತ್ರವು ತನ್ನ ಮಹತ್ತ್ವವನ್ನು ತೆಗೆದುಕೊಳ್ಳುತ್ತದೆ. ಧ್ಯಾನದಿಂದ ವರ್ಣಗಳನ್ನು ಸಾಕ್ಷಾತ್ಕಾರ ಮಾಡಿಕೊಂಡಾಗ ವರ್ಣಗಳು ನಾದಕ್ಕೂ, ನಾದವು ಜ್ಯೋತಿಗೂ ಮನುಷ್ಯನನ್ನು ಒಯ್ಯುತ್ತದೆ. ಪ್ರಕೃತಿಯ ಅಡ್ಡಿಯೂ ನಿವಾರಣೆಯಾಗುತ್ತದೆ ; ಜಪದಿಂದ ಮನಸ್ಸು ಹೆಚ್ಚುಹೆಚ್ಚು ಆಳವನ್ನು ಮುಟ್ಟಲು ಸಮರ್ಥವಾಗುತ್ತದೆ. ಹಾಗೆ ಮಾಡಿದಾಗ ಜಾಪಕನು ವರ್ಣಗಳಿಂದ ನಾದವನ್ನೂ, ನಾದದಿಂದ ಕುಂಡಲಿನೀ, ಹಂಸ ಮತ್ತು ಪ್ರಣವಗಳ ಅರಿವನ್ನೂ ಕಡೆಗೆ ಪ್ರಣವದಿಂದ ಅಖಂಡವಾದ ಆತ್ಮಜ್ಞಾನವನ್ನೂ ಪಡೆಯುತ್ತಾನೆ. ಅದನ್ನುಂಟುಮಾಡುವುದೇ ಎಲ್ಲಾ ಮಂತ್ರಗಳ ಉದ್ದೇಶವಾಗಿದ್ದರೂ ಗಾಯತ್ರೀ ಮಂತ್ರವು ಆ ವಿಷಯದಲ್ಲಿ ತನ್ನದೇ ಆದ ವಿಶೇಷವನ್ನಿರಿಸಿಕೊಂಡಿರುತ್ತದೆ. ಆದುದರಿಂದಲೇ ಗಾಯತ್ರೀ ಮಂತ್ರಕ್ಕೆ ಅಷ್ಟು ಪ್ರಾಶಸ್ತ್ಯ.

ಗಾಯತ್ರಿಯ ಉಪಾಸನೆಯನ್ನು 'ಸಂಧ್ಯೆ' ಎಂದು ಕರೆಯುತ್ತಾರೆ. ಹಗಲು ರಾತ್ರಿಗಳು ಸೇರುವ ಸಂಧಿಕಾಲದಲ್ಲಿ ಮಾಡುವ ಕರ್ಮವಾದುದರಿಂದ ಗಾಯತ್ರಿಗೆ 'ಸಂಧ್ಯಾಕರ್ಮ' ಎಂದು ಹೆಸರು. ಆದರೆ ಇದು ಒಂದು ಅರ್ಥದಲ್ಲಿ ಮಾತ್ರ. ಭ್ರೂಮಧ್ಯ ಮತ್ತು ನಾಸಾಮೂಲಗಳ ಸಂಧಿಯಾವುದುಂಟೋ ಅದೇ ದ್ಯುಲೋಕ ಮತ್ತು ಪರಲೋಕಗಳ ಸಂಧಿ. ಭ್ರೂಮಧ್ಯವೆಂಬ ಸಂಧಿಸ್ಥಾನದಲ್ಲಿ ಮನಸ್ಸನ್ನು ಏಕಾಗ್ರಮಾಡುವ ಧ್ಯಾನರೂಪವಾದ ಕರ್ಮವಾದುದರಿಂದ ಇದು ಸಂಧ್ಯಾಕರ್ಮ. ಇದೇ ಅದರ ಪ್ರಧಾನವಾದ ಅರ್ಥ. ಸಂಧ್ಯಾಕಾಲವು ಅದಕ್ಕೆ ಪೋಷಕವಾದುದರಿಂದ ಆ ಕಾಲದಲ್ಲಿ ಮಾಡುವ ಕರ್ಮಕ್ಕೂ ಅದೇ ಹೆಸರು ಬಂದಿರುತ್ತದೆ. ಆದರೆ ಒಳ ಸಂಧ್ಯೆ ನಡೆಯದಿದ್ದರೆ ಅದು ಸಂಧ್ಯಾಕರ್ಮವಾಗುವುದಿಲ್ಲ. ಭ್ರೂಮಧ್ಯದಲ್ಲಿರುವ ಆಜ್ಞಾಚಕ್ರವು ಪ್ರಾಣಮಾರ್ಗಗಳಾದ ಇಡಾ ಮತ್ತು ಪಿಂಗಳಾ ನಾಡಿಗಳು ಜ್ಞಾನನಾಡಿಯಾದ ಸುಷುಮ್ನಾನಾಡಿಯೊಡನೆ ಸಂಧಿಸುವ ಜಾಗ. ಅದೇ ಮನಸ್ಸತ್ತ್ವದ ನೆಲೆ. ಮನಸ್ಸು ಕೆಳಮುಖವಾಗಿ ಇಡಾ ಪಿಂಗಳಗಳಲ್ಲಿ ಸಂಚರಿಸಿದಾಗ ಪಂಚೇಂದ್ರಿಯಗಳಿಗೆ ಸಂಬಂಧಿಸಿದ ಅನುಭವಗಳನ್ನು ಗ್ರಹಿಸುತ್ತದೆ. ಅದೇ ಮನಸ್ಸು ಆಜ್ಞಾಚಕ್ರವನ್ನು ಮೀರಿಹೋದಾಗ ಅದು ಸುಷುಮ್ನೆಯನ್ನು ಪ್ರವೇಶಿಸಿ ಅತೀಂದ್ರಿಯವಾದ ಅನುಭವಗಳನ್ನು ಪಡೆಯುತ್ತದೆ. ಈ ಮೂರು ನಾಡಿಗಳು ಸಂಧಿಸುವ ಪರಮ ಗಹನವಾದ ಈ ಭ್ರೂಮಧ್ಯವನ್ನೇ ಯೋಗಶಾಸ್ತ್ರವು 'ತ್ರಿಕೂಟ' ಎಂದು ಕರೆಯುತ್ತದೆ.

ಸುಷುಮ್ನಾನಾಡಿಯನ್ನು ಯೋಗಶಾಸ್ತ್ರವು 'ವೈಷ್ಣವೀ ನಾಡೀ' ಎಂಬು ದಾಗಿಯೂ ಕರೆಯುತ್ತದೆ. ವಿಷ್ಣುಪದ ಪ್ರಾಪಕವಾದುದರಿಂದ ಈ ನಾಡಿಗೆ ಈ ಹೆಸರು. ನಾದ (ಮಂತ್ರ) ಯೋಗದ ಲಕ್ಷ್ಯವೂ ಸಹಾ ವಿಷ್ಣುಪದವೇ. ಜೀವಕೋಟಿಗಳಲ್ಲಿ ತನ್ನ ಪಾಡಿಗೆ ತಾನೇ ಶಬ್ದಮಾಡುವ, ಚೈತನ್ಯರೂಪ ವಾದ ಯಾವ ಶಬ್ದ ಉಂಟೋ ಮತ್ತು ಆ ಶಬ್ದದಲ್ಲಿ ಸೂಕ್ಷ್ಮವಾದ ಯಾವ ಧ್ವನಿಯುಂಟೋ ಆ ಧ್ವನಿಯೊಳಗೆ ಜ್ಯೋತಿಯು ಅಂತರ್ಗತವಾಗಿರುತ್ತದೆ. ಆ ಜ್ಯೋತಿಯಲ್ಲಿ ಮನಸ್ಸು ಅಂತರ್ಗತವಾಗಿರುತ್ತದೆ. ಆ ಮನಸ್ಸು ಲಯ ಹೊಂದಿದಾಗ ತೋರಿಬರುವುದೇ ವಿಷ್ಣುವಿನ ಪರಮಪದ ಎಂದು ಯೋಗ ಶಾಸ್ತ್ರ ವಿವರಿಸುತ್ತದೆ. ಗಾಯತ್ರಿಯ ಲಕ್ಷ್ಯವೂ ಸಹಾ ಆ ವಿಷ್ಣುಪದವೇ ಆಗಿರುತ್ತದೆ. ಆದುದರಿಂದ ವಿಶ್ವದ ಸ್ವಾಮಿಯಾದ ವಿಷ್ಣುವಿನ ಉಪಾಸನೆಯೇ ಗಾಯತ್ರಿಯ ಗುರಿ. ಗಾಯತ್ರಿಯು ಜೀವನವು ಶಾಂತಿ ಮತ್ತು ನೆಮ್ಮದಿ ಗಳನ್ನು ಪಡೆಯಲು ಶಾಶ್ವತವಾದ ಅವಲಂಬನೆಗೆ ದಾರಿಮಾಡಿಕೊಡುವ ಮಂತ್ರ. ಜೊತೆಗೆ ಅಂತಹ ಅವಲಂಬನೆಯನ್ನು ಸಾಧಿಸಿದ ನಂತರ ಅದರ ಬೆಳಕು, ಆನಂದ ಮತ್ತು ಶಾಂತಿಗಳಲ್ಲಿ ಮನುಷ್ಯನು ಲೀನವಾಗಿ ವಿಷ್ಣುಪದ ದಲ್ಲಿ ಸರ್ವಕಾಲಕ್ಕೂ ಸೇರಿಬಿಡುವಂತೆ ಆಗಿಸುವ ಮಂತ್ರ. ನಮ್ಮ ಶ್ರೌತ ಸ್ಮಾರ್ತ ಕರ್ಮಗಳಲ್ಲೆಲ್ಲಾ ಗಾಯತ್ರೀ ಉಪಾಸನೆ ಪ್ರಧಾನ, ತಾಯಿಬೇರು, ಹೃದಯ. ಉಳಿದವುಗಳು ಸಹಾಯಕಗಳು; ರೆಂಬೆಗಳು, ಕೈಕಾಲುಗಳು ಇದ್ದಂತೆ. ಗಾಯತ್ರೀ ಮನುಷ್ಯನ ಕಣ್ಣಿನಲ್ಲಿ ಕಾಂತಿಯಂತೆ, ಬಾಹುವಿನಲ್ಲಿ ಬಲದಂತೆ, ಹೃದಯದಲ್ಲಿ ತೇಜದಂತೆ, ಅಂತರಂಗದಲ್ಲಿ ಅದಮ್ಯ ಉತ್ಸಾಹ ದಂತೆ ವ್ಯಕ್ತವಾಗುವಳು. ಇದು ಪ್ರಾಚೀನವಾದರೂ ನಿತ್ಯನವೀನವಾಗಿದೆ, ಗುಪ್ತಭಾವದಿಂದ ವ್ಯಕ್ತವಾದಾಗ ನವೀನವಾಗಿ ತೋರುವುದು. ಈ ಸನಾತನೀ ಶಕ್ತಿ ತೆರೆಯ ಹಿಂದೆ ಇರುವಳು, ಈ ಶಕ್ತಿಗೆ ವೃದ್ಧಿಕ್ಷಯಗಳಿಲ್ಲ, ಲೋಪದ ಮಾತೇ ಇಲ್ಲ. ಇದು ದಿವ್ಯ, ಭವ್ಯ, ಪ್ರಾಚೀನವಾದಷ್ಟೂ ನವ್ಯ, ಈಶ್ವರೀಯ ಜ್ಞಾನಭಂಡಾರದ ಬೀಗದಕೈ. ಗಾಯತ್ರಿಯು ಸಾರ್ವಕಾಲಿಕ, ಸಾರ್ವ ದೇಶಿಕ, ಸಾರ್ವವರ್ಣಿಕ ಪ್ರಾರ್ಥನಾ ಸಂಪತ್ತು. ಭೂಮಂಡಲದ ಭಿನ್ನಭಿನ್ನ ಮತೀಯರ ಉತ್ತಮೋತ್ತಮ ಪ್ರಾರ್ಥನೆಗಿಂತಲೂ, ಅತ್ಯಂತ ಉತ್ತಮವಾದ ಪ್ರಾರ್ಥನೆಯನ್ನು ಇದು ತನ್ನಲ್ಲಿ ಅಡಗಿಸಿಕೊಂಡಿದೆ.

ಜಪಮಾಡುವಾಗ 'ಭರ್ಗ' ಎಂದು ಹೇಳುವ ಸವಿತೃದೇವನ ಪರಬ್ರಹ್ಮ ಸ್ವರೂಪವಾದ ತೇಜಸ್ಸನ್ನು ಕುರಿತು ಚಿಂತಿಸಬೇಕು. "ನನ್ನ ಹೃದಯ

ಕಮಲದಲ್ಲಿರುವ ಆ 'ಭರ್ಗ' ಅಥವಾ ತೇಜಸ್ಸಿನಿಂದ ನಾನು ಪ್ರೇರಿಸಲ್ಪಡು ತ್ತಿದ್ದೇನೆ. ಆ ತೇಜಸ್ಸೇ ಭೂಲೋಕ, ಅಂತರಿಕ್ಷಲೋಕ, ಸ್ವರ್ಗಲೋಕ, ಮೊದಲಾದ ಬ್ರಹ್ಮಾಂಡದ ಉದರದಲ್ಲಿರುವ ಚರಾಚರಾತ್ಮಕವಾದ ತ್ರೈಲೋಕ್ಯದ ಸ್ವರೂಪವನ್ನು ಧರಿಸುತ್ತದೆ. ಅದೇ ನನ್ನ ಹೃದಯ ಮಧ್ಯ ದಲ್ಲಿ, ಹಾಗೆಯೇ ಹೊರಗೆ ಸೂರ್ಯಮಂಡಲದಲ್ಲಿ ಇರುವ ತೇಜಸ್ಸಿನೊಡನೆ ಏಕೀಭೂತವಾದ, ಎಲ್ಲವನ್ನೂ ಮೀರಿದ, ಬ್ರಹ್ಮಸ್ವರೂಪವಾಗಿರುತ್ತದೆ" ಎಂದು ಚಿಂತಿಸಿ ಜಪಿಸಬೇಕು.

ಧ್ಯಾನದ ಮೂರು ಅವಸ್ಥೆಗಳು ಹೀಗಿವೆ: (೧) ಸಕಲ, (೨) ಸಕಲ– ನಿಷ್ಕಲ ಮತ್ತು (೩) ನಿಷ್ಕಲ. ಮೂಲಾಧಾರದಿಂದ ಆಜ್ಞಾ ಚಕ್ರದವರೆಗೆ ಸಕಲ: ಉನ್ಮನೀವರೆಗೆ ಸಕಲ–ನಿಷ್ಕಲ, ಮತ್ತು ಪರಸ್ಥಾನವು (ಮಹಾ ಬಿಂದು) ನಿಷ್ಕಲ ಎಂದು ಯೋಗಿನೀ ಹೃದಯದಲ್ಲಿ (೧–೨೭) ಹೇಳಿದೆ.

ಗಾಯತ್ರೀ ಮಂತ್ರವನ್ನು ಜಪಿಸುವಾಗ ಮೂರು ಪಾದಗಳನ್ನೂ ಚೆನ್ನಾಗಿ ಹೇಳಬೇಕೆಂದು ನಿಯಮ. ಅರ್ಥದ ದೃಷ್ಟಿಯಿಂದ ಎರಡನೇ ಪಾದದ ಅಂತ್ಯದವರೆಗಿನ ಅರ್ಥ–ಧ್ಯಾನ. ಮೂರನೇ ಪಾದದ್ದು–ಪ್ರಾರ್ಥನೆ. ಆದ್ದರಿಂದ ಎರಡು ಪ್ರತ್ಯೇಕ ವಾಕ್ಯಗಳಂತೆ ಹೇಳಬೇಕಾದುದು ಸ್ಪಷ್ಟ. ಆದರೆ ಪ್ರತಿಪದದ ಅರ್ಥವನ್ನು ಮನಸ್ಸಿನಲ್ಲಿ ಗ್ರಹಿಸುತ್ತಾ, ಐದು ಕಡೆ ಸ್ವಲ್ಪನಿಲ್ಲಿಸಿ ಜಪಿಸಬೇಕೆಂಬುದು ವಿಧಿ. 'ಓಂ'ಕಾರದ ಉಚ್ಚಾರಣೆಯ ನಂತರ ಒಂದು ವಿರಾಮ; ಮೂರು ವ್ಯಾಹೃತಿಗಳ ನಂತರ ಒಂದು ವಿರಾಮ, ಗಾಯತ್ರಿಯ ಒಂದೊಂದು ಪಾದದ ಕೊನೆಯಲ್ಲೂ ಒಂದೊಂದು ವಿರಾಮ. ಹೀಗೆ ಒಟ್ಟು ಐದು ವಿರಾಮಗಳನ್ನು ಮಾಡದೆ ಮಂತ್ರ ಜಪವನ್ನು ಮಾಡ ಬಾರದು. ಐದು ವಿರಾಮಗಳುಳ್ಳ ಗಾಯತ್ರೀ ಜಪ ಐದು ಮಹಾ ಪಾಪ ಗಳನ್ನು ಪರಿಹರಿಸುತ್ತದೆ ಎಂಬುದು ಸ್ಮೃತಿಯ ಹೇಳಿಕೆ. (ವಾಧೂಲ 143.) ಈ ವಿರಾಮವು ವಿವಿಧತೆಗೆ ಸ್ವಲ್ಪ ಸಮಯ ಸಹಾಯವಾಗುವುದು. ಜಪ ವನ್ನು ಮನಸ್ಸಿನಲ್ಲೇ ಸ್ಪಷ್ಟವಾಗಿ ಉಚ್ಚರಿಸುತ್ತಿದ್ದಂತೆ ಭಾವಿಸುತ್ತ ಮಂತ್ರವು ಕಿವಿಗೆ ಸ್ಪಷ್ಟವಾಗಿ ಕೇಳುತ್ತಿದ್ದಂತೆ ತಿಳಿಯುತ್ತಾ ಜಪಿಸಬೇಕು.

ಮಂತ್ರದ ವಿಷಯದಲ್ಲಿ ಅವಶ್ಯವಾಗಿ ತಿಳಿಯಬೇಕಾದ ಮತ್ತೊಂದು ಅಂಶವೆಂದರೆ ಆ ಮಂತ್ರದ ಋಷಿ (Sage), ಛಂದಸ್ಸು, (Metre), ದೇವತೆ (Deity) ಮತ್ತು ಮಂತ್ರದ ಉದ್ದೇಶ, ವಿನಿಯೋಗ (Utility). ಗಾಯತ್ರೀ ಮಂತ್ರವು ವೇದದ ಜೀವಸ್ವರೂಪವಾದ ಋಕ್ಕಾದುದರಿಂದ

ಋಷಿ–ದೇವತಾ–ಛಂದಸ್ಸು–ವಿನಿಯೋಗಗಳನ್ನು ಸ್ಮರಿಸಬೇಕೆಂಬುದು ವಿಧಿ. ಇವುಗಳನ್ನು ತಿಳಿಯದೆ ಮಾಡುವ ಮಂತ್ರಜಪವು ಫಲವನ್ನು ಕೊಡಲಾರ ದೆಂದು ಶ್ರುತಿ(ಆ.ಬ್ರಾ–೧–೧–೬, ಬೃ.ಸೂ.ಕಾ–೩–೩೦ ಶಾಂ.ಭಿ.). ಇವು ಗಳ ಅರಿವಿಲ್ಲದಿದ್ದರೆ ಮಂತ್ರವನ್ನು ಪೂರ್ಣವಾಗಿ ತಿಳಿದಂತಾಗುವುದಿಲ್ಲ. ಮನುಷ್ಯನಿಗೆ ಹೆಸರು, ಕುಲ, ಗೋತ್ರಗಳು ಹೇಗೆ ಮುಖ್ಯವೋ ಹಾಗೆಯೇ ಮಂತ್ರಕ್ಕೆ ಋಷಿ–ದೇವತಾ–ಛಂದಸ್ಸುಗಳು ಮುಖ್ಯ.

ಯಾವನು ಮೊಟ್ಟಮೊದಲು ತನ್ನ ತಪಶ್ಶಕ್ತಿಯಿಂದ, ಜ್ಞಾನದೃಷ್ಟಿ ಯಿಂದ, ಮಂತ್ರದ ಉದ್ಭೂತರೂಪವನ್ನು ನೋಡಿ, ಆ ಮಂತ್ರದ ಘಟಕಾಕ್ಷರ ಗಳಲ್ಲಿ ಅಡಗಿರುವ ಪರಿಪೂರ್ಣ ಅರ್ಥವನ್ನೂ, ಅದರ ಫಲಗಳನ್ನೂ, ಕ್ರಿಯಾ ಶಕ್ತಿಗಳನ್ನೂ ಕಂಡು, ಆ ಶಬ್ದಗಳಿಂದ ಉಪಾಸಕನ ಕೋಶಗಳ ಮೇಲೆ ಆಗುವ ಒಟ್ಟು ಪರಿಣಾಮವನ್ನೂ ತಿಳಿದು, ಸಿದ್ಧಿಯನ್ನು ಪಡೆದು ಲೋಕಕ್ಕೆ ಅದನ್ನು ಉಪದೇಶಿಸಿದನೋ ಆ ದಿವ್ಯಜ್ಞಾನಿಯೇ ಅಥವಾ ಜೀವನ್ಮುಕ್ತನೇ ಆ ಮಂತ್ರಕ್ಕೆ ಋಷಿಯು (Sage), ದ್ರಷ್ಟಾರ. ಅವನ ಋಷಿತ್ವವು ಆ ಮಂತ್ರದಲ್ಲಿ ಇರುತ್ತದೆ. ಅವನನ್ನು ಸ್ಮರಿಸುವುದರಿಂದ ಅವನಿಗೆ ಕೃತಜ್ಞತೆ ಯನ್ನು ಸೂಚಿಸುವುದರ ಜೊತೆಗೆ ಅವನೊಡನೆ ಸಂಪರ್ಕ ಪಡೆದು, ಅವನಿಂದ ಸ್ಫೂರ್ತಿಯನ್ನೂ, ಶಕ್ತಿಯನ್ನೂ ಪಡೆಯುತ್ತಾನೆ. ಋಷಿಯು ಮಂತ್ರಕ್ಕೆ ಗುರುವಾದ್ದರಿಂದ ಗುರುವನ್ನು ಶಿರಸ್ಥಾನದಲ್ಲಿ ನ್ಯಾಸಮಾಡಬೇಕು.

**ಛಂದಸ್ಸು** (Metre) ಎಂದರೆ–ಮಂತ್ರ ಸ್ವರೂಪವನ್ನು ಅಥವಾ ಮಂತ್ರ ಮೂರ್ತಿಯನ್ನು ಬಿಂಬಿಸುವ ಒಂದು ವಿಧವಾದ ನಾದಶಕ್ತಿ ; ವಿಶೇಷ ಪ್ರಕಾರದ ಸ್ವರ. 'ಛಂದಸ್' ಎಂಬ ಶಬ್ದವು ಆಚ್ಛಾದಿಸು ಎಂಬ ಅರ್ಥವುಳ್ಳ 'ಛದ್' ಎಂಬ ಧಾತುವಿನಿಂದ ಉಂಟಾಗಿದೆ. ಇದಕ್ಕೆ ಸಂತೋಷಪಡಿಸು ಎಂಬ ಅರ್ಥವೂ ಇದೆ. ಗಾಯತ್ರೀ ಛಂದಸ್ಸು ಛಂದಸ್ಸುಗಳಲ್ಲಿ ಪ್ರಧಾನ ವಾದುದು. ಈ ಛಂದಸ್ಸನ್ನು ಪ್ರಯೋಗ ಮಾಡುವವನ ಪ್ರಾಣವನ್ನು ರಕ್ಷಿಸುತ್ತದೆ. ಈ ಸಾಮರ್ಥ್ಯ ಇತರ ಛಂದಸ್ಸುಗಳಿಗಿಲ್ಲ. ಈ ಛಂದಸ್ಸು ಪ್ರಾಣಶಕ್ತಿಯನ್ನು ಸುಷುಮ್ನಾನಾಡಿಯಲ್ಲಿ ಹರಿಸಿ ಬ್ರಹ್ಮರಂಧ್ರದವರೆಗೂ ಹರಿದು ಬೆಳಗುವಂತೆ ಮಾಡುತ್ತದೆ. ಮಂತ್ರದೇವತೆಯ ನಾದಾತ್ಮಕ ಆಕೃತಿಯ ಅಥವಾ ಮಂತ್ರಗಳ ಸ್ವರವ್ಯಾಪ್ತಿಯ ಅವಧಿಯನ್ನು ಕಲ್ಪಿಸುವ ನಾದಮಯ ಪಂಜರ. ಅಂದರೆ ಅದೇ ಛಂದಸ್ಸು. ಛಂದಸ್ಸು ಮಂತ್ರದ ವಿಶಿಷ್ಟರಚನೆಯನ್ನು ನಿರೂಪಿಸುತ್ತದೆ. ಛಂದಸ್ಸುಗಳೊಳಗೆ ಮಂತ್ರಗಳು

ಮೂರ್ತಿವೆತ್ತಿವೆ. ಮಂತ್ರಗಳ ಪರಿಚಯ(ವಿಳಾಸ)ಗಳ ಭದ್ರತೆಗಾಗಿ ಛಂದೋ ನಿರ್ದೇಶನವನ್ನು ಮಾಡುವುದಾಗಿದೆ. ಪ್ರಯೋಗಕಾಲದಲ್ಲಿ, ಪ್ರಮಾದ ದಿಂದಲಾದರೂ ಮಂತ್ರಗಳು ತಪ್ಪಿ, ಒಂದು ಮಂತ್ರದ ಸ್ಥಾನದಲ್ಲಿ ಇನ್ನೊಂದು ಮಂತ್ರವಾಗುವ ಸಂಭವವಿಲ್ಲ. ಮಂತ್ರಗಳನ್ನು ಪರಿಣಾಮಕಾರಿ ಯಾಗಿಯೂ ಉಪಯೋಗಿಸಬಹುದು. ಛಂದಸ್ಸಿನ ಸರಿಯಾದ ಜ್ಞಾನ ವಾದರೆ ಸ್ವರನಿರ್ಣಯವೂ ಸರಿಯಾಗಿ ಆಗುವುದು. ಮಂತ್ರದ ಪ್ರತಿಯೊಂದು ಕಂಪನವೂ ಒಂದು ಶಕ್ತಿಸೂತ್ರವಾಗಿದೆ. ದಿವ್ಯಜ್ಞಾನಿಗಳಾದ ಮಹರ್ಷಿಗಳು ಬೀಜಾಕ್ಷರಗಳಿಂದ ಉಂಟಾಗಬಹುದಾದ ಅಪಾರಶಕ್ತಿಯನ್ನು ತಿಳಿದು, ಯಾವ ಅಕ್ಷರದೊಡನೆ ಯಾವ ನಾದಗಳ ಸಮ್ಮೇಳನವಾದರೆ ಯಾವ ರೂಪಗಳು ಉಂಟಾಗುತ್ತವೆ, ಯಾವ ಶಕ್ತಿಗಳು ಸಿದ್ಧವಾಗುತ್ತವೆ ; ಅವು ಯಾವ ಕೆಲಸಕ್ಕೆ ಬರುತ್ತವೆ ? ಹೇಗೆ ಬರುತ್ತವೆ ? ಮನುಷ್ಯನ ಶಕ್ತಿಗೆ ಮೀರಿದ ಕಾರ್ಯಗಳನ್ನು ಅವು ಹೇಗೆ ಸಾಧಿಸುತ್ತವೆ ? ಎಂಬುದನ್ನು ನಿಷ್ಕರ್ಷಿಸಿ ಅಂತಹ ವಿಷಯಗಳನ್ನೊಳಗೊಂಡ 'ಮಂತ್ರ ಶಾಸ್ತ್ರ'ವನ್ನು ರಚಿಸಿದರು. ವೇದಮಂತ್ರಗಳಿಗೆ 'ಸಂಹಿತಾ' ಎಂದು ಹೆಸರು ಬರಲು ಇದೇ ಕಾರಣ. ಎಲ್ಲಾ ಛಂದಸ್ಸೂ ವಾಗೀಂದ್ರಿಯದಲ್ಲಿ ಪ್ರಕಾಶಗೊಳ್ಳುವುದರಿಂದ ಮಂತ್ರದ ಛಂದಸ್ಸನ್ನು ವಾಗೀಂದ್ರಿಯಕ್ಕೆ ಸ್ಥಾನವಾದ ಮುಖದಲ್ಲಿ ನ್ಯಾಸ ಮಾಡಬೇಕು.

ಪ್ರತಿಯೊಂದು ಮಂತ್ರಕ್ಕೂ ಒಂದೊಂದು ದೇವತೆಯ, ದೈವ ಪ್ರಜ್ಞೆಯ, ಒಂದು ವಿಶಿಷ್ಟ ವ್ಯಕ್ತರೂಪವಿದೆ. ಯಾವ ಮಂತ್ರದಿಂದ ಯಾವ ದೇವತೆ ಉಕ್ತವಾಗುತ್ತದೆಯೋ ಅಥವಾ ಸೂಚಿತವಾಗುತ್ತದೆಯೋ ಅದು ಆ ಮಂತ್ರದ 'ದೇವತೆ', ಮಂತ್ರದಿಂದ ಸ್ತುತಿಸಲ್ಪಡುವ ಶಕ್ತ್ಯಾತ್ಮಕ ವಸ್ತು. ಪ್ರತಿ ಮಂತ್ರದ ಮೂಲಕ ಆಯಾ ದೇವತೆಯ ಶಕ್ತಿ ಹೊರಬರುತ್ತದೆ. ಮಂತ್ರದಿಂದ ಯಾವ ದೈವತ ಶಕ್ತಿಯ ಸಾಕ್ಷಾತ್ಕಾರವಾಗತಕ್ಕದ್ದೋ ಆ ದೇವತೆಗೂ, ಆ ಮಂತ್ರಕ್ಕೂ ಸಂಬಂಧದ ದೃಢತೆಯನ್ನು ಹೃದಯದೊಳಗೆ ಕಟ್ಟಿಕೊಳ್ಳುವುದಕ್ಕೋಸ್ಕರ ಸಾಧಕನು ತನ್ನ ಮನಸ್ಸನ್ನು ಆ ದೇವತೆಯ ಕಡೆಗೆ ತಿರುಗಿಸಿದರೆ ಆ ಶಕ್ತಿಯ ಮೂಲದೊಡನೆ ಅವನು ಸಂಪರ್ಕ ಪಡೆಯು ತ್ತಾನೆ. ಆಗ ತನ್ನ ಸಾಮರ್ಥ್ಯ ಮತ್ತು ಮನೋಭಾವಗಳಿಗನುಗುಣವಾಗಿ ಆ ಮೂಲದಿಂದ ಅವನು ಶಕ್ತಿಯನ್ನು ಎಳೆದುಕೊಳ್ಳಬಹುದು. ಉಪಾಸನಾ ರಂಭದಲ್ಲಿ ಆ ದೇವತೆಯ ಸ್ಮರಣೆಯನ್ನು ಮಾಡುವುದು ಸೂಕ್ತವಾಗಿದೆ,

ಔಚಿತ್ಯವಾಗಿದೆ, ಅವಶ್ಯಕವಾಗಿದೆ. ಪರಮಾತ್ಮನು ಜೀವಿಗಳ ಹೃದಯ ಗುಹೆಯಲ್ಲಿ ವಾಸಮಾಡುತ್ತಾನಾಗಿ, ದೇವತೆಯ ನ್ಯಾಸವನ್ನು ಹೃದಯ ಸ್ಥಾನದಲ್ಲಿ ಮಾಡಬೇಕು.

ಸಾಧಕನು ತನ್ನ ಮನಸ್ಸನ್ನು ಇಬ್ಬರು ಬೇರೆಬೇರೆ ವ್ಯಕ್ತಿಗಳ ಕಡೆಗೆ (ಮಂತ್ರದ ಋಷಿ ಮತ್ತು ಮಂತ್ರದ ದೇವತೆ) ತಿರುಗಿಸುತ್ತಾನೆ. ಆ ವ್ಯಕ್ತಿಗಳು ಪ್ರತ್ಯುತ್ತರರೂಪದಲ್ಲಿ ಕಳುಹಿಸುವ ಎರಡು ವಿಧದ ಶಕ್ತಿಗಳು ಅವನ ಕೆಲಸದ ಪರಿಣಾಮವನ್ನು ಹೆಚ್ಚಿಸುತ್ತವೆ.

ಗೃಹಸ್ಥರೂ, ಬ್ರಹ್ಮಚಾರಿಗಳೂ 'ಪ್ರಣವಾದಿಯಾಗಿ' ಗಾಯತ್ರಿಯನ್ನು ಜಪಿಸಬೇಕು. 'ಪ್ರಣವಾಂತವಾಗಿ' ಜಪಿಸಬಾರದು. "ಪ್ರಾತಃ ಕೇವಲ ಗಾಯತ್ರೀ । ಮಧ್ಯಾಹ್ನೇವ್ಯಾಹೃತೀಯುತಾ । ಸಾಯಾಹ್ನೇತುರ್ಯಯಾಯುಕ್ತಾ । ಗಾಯತ್ರೀ ಜಪಲಕ್ಷಣಂ." (ವಿಶ್ವಾಮಿತ್ರಕಲ್ಪ) ಮಂತ್ರವನ್ನು ಜಪಿಸುವಾಗ ಎಣಿಕೆಯನ್ನು ಅವಶ್ಯ ಇಟ್ಟುಕೊಳ್ಳಬೇಕು, (ಬೃ.ಪ.ಸಂ.) ಇದಕ್ಕೆ ತುಳಸಿ ಮಣಿಸರ, ರುದ್ರಾಕ್ಷಿಮಾಲೆ ಅಥವಾ ಹವಳದ ಸರ, ಇಲ್ಲವೆ ಬೆರಳುಗಿಣ್ಣುಗಳು, ಇವುಗಳಲ್ಲೊಂದನ್ನು ಅನುಸರಿಸಿ ಜಪಮಾಡಬೇಕು. ಜಪಮಾಡುವಾಗ ಜಪಮಾಲಿಕೆಯನ್ನು ಉಪಯೋಗಿಸುವುದು ಮಂತ್ರವನ್ನು ಉಚ್ಚರಿಸುವುದಕ್ಕೂ, ನಮ್ಮ ಜ್ಞಾನವು ವಿಷಯಾದಿಗಳಿಗೆ ಹೋಗದಂತೆ ತಡೆಯುವುದಕ್ಕೂ, ಅತ್ಯಂತ ಸಹಕಾರಿಯಾಗುವುದು. ಬೆರಳುಗಳನ್ನು ಮಡಿಸಿ ಜಪದೆಣಿಕೆ ನಿಷಿದ್ಧ. ಬೆರಳುಗಿಣ್ಣೆನಿಂದ ಎಣಿಸುವುದು ಏಕೆಂದರೆ ವೇದವು ಈ ಪರ್ವ(ಗಿಣ್ಣು)ಗಳಲ್ಲಿ (ಹಾಡಲ್ಪಟ್ಟಿದೆ) ನೆಲಸಿದೆ. ಗಾಯತ್ರಿಯು ವೇದಗಳ ಉತ್ಪತ್ತಿಗೆ ಕಾರಣವೆಂದೆನಿಸಿದೆ. ಹಾಗಾಗಿ ಗಿಣ್ಣುಗಳ ಎಣಿಕೆ ಸೂಕ್ತ. ವೇದವು ಪರ್ವಗಳಲ್ಲಿ ಸ್ವರವತ್ತಾಗಿ ಗಾನಮಾಡಲ್ಪಡುತ್ತದೆ.

ಕೈಬೆರಳುಗಳ ಪರ್ವಗಳ ಸ್ಪರ್ಶದಿಂದ ಆಗುವ ಫಲ ಹೀಗಿದೆ—ಹೆಬ್ಬೆರಳು (ಅಂಗುಷ್ಠ) ಮುಕ್ತಿ, ತೋರುಬೆರಳು (ತರ್ಜನಿ)-ಶತ್ರುನಾಶ, ಮಧ್ಯದ ಬೆರಳು (ಮಧ್ಯಮ)-ಐಶ್ವರ್ಯ, ಉಂಗುರದ ಬೆರಳು (ಅನಾಮಿಕ) ದೇಹಕ್ಕೆ ಪುಷ್ಟಿ, ಕಿರುಬೆರಳು (ಕನಿಷ್ಠ)-ರಕ್ಷಣೆ ಒದಗಿಸುತ್ತದೆ ಎಂದು ಗೌತಮರು ಹೇಳುತ್ತಾರೆ. ಬೆರಳುಗಿಣ್ಣೆನಿಂದ ಎಣಿಸುವಾಗ ಅನಾಮಿಕೆಯ ಮಧ್ಯಗಿಣ್ಣೆನಿಂದ ಪ್ರಾರಂಭಿಸಿ ಪ್ರದಕ್ಷಿಣೆಯ ಕ್ರಮದಿಂದ ತರ್ಜನಿ ಮೊದಲು ಗಿಣ್ಣೆನವರೆಗೆ ಹತ್ತು ಆಗುವುದು. ನಡುಬೆರಳಿನ (ಮಧ್ಯ ಬೆರಳಿನ) ಒಂದನೇ ಮತ್ತು ಎರಡನೇ ಗಿಣ್ಣುಗಳು 'ಮೇರು' ಎಂದು ಗಣನೆಗೆ ತರಬಾರದು.

"ಅ" ಕ್ರಮವೇ ಹೆಚ್ಚು ಪ್ರಚಾರದಲ್ಲಿದೆ

ಜಪಮಾಲೆಯಲ್ಲಿಯೂ ಮಧ್ಯದಲ್ಲಿರುವ ದೊಡ್ಡ ಮಣಿಗೆ 'ಮೇರು' ಎಂದು ಹೆಸರು. ಇದರಲ್ಲಿಯೂ ಮೇರುವನ್ನು ಗಣನೆಗೆ ತೆಗೆದುಕೊಳ್ಳಬಾರದು. ತರ್ಜನಿಯ ಒಂದನೆ ಪರ್ವ(ಗಿಣ್ಣು)ಕ್ಕೆ ಎಣಿಕೆ ಮುಟ್ಟಿದ ನಂತರ ಅಲ್ಲಿಂದ ಪುನಃ ಅನಾಮಿಕೆಯ ನಡುಗಿಣ್ಣಿನವರೆಗೆ (ಚಿತ್ರ ನೋಡಿ) ಎಣಿಸಬೇಕು. ಈ ಪ್ರಕಾರ ಬೆರಳುಗಿಣ್ಣಿನಿಂದ ಎಣಿಸುವ ಕ್ರಮಕ್ಕೆ 'ಕರಮಾಲೆ' ಎಂದು ಹೆಸರು. ಇನ್ನೂ ಒಂದು ಕ್ರಮವಿದೆ. ಆದರೆ ಇದು ಅಷ್ಟು ಪ್ರಚಾರದಲ್ಲಿಲ್ಲ. ನಡು ಬೆರಳಿನ ಕೆಳಗೆರೆಯಿಂದಾರಂಭಿಸಿ ಪ್ರದಕ್ಷಿಣಾಕಾರವಾಗಿ ಎಣಿಸಿ ಮತ್ತೆ

ಮಧ್ಯದ ಬೆರಳಿನ ಕೆಳಗಿನ ಗೆರೆವರೆಗೆ ೧೦ ಆಗುವುದು. ಇದರಲ್ಲಿ ಅನಾಮಿಕೆ ಮತ್ತು ಮಧ್ಯಮದ ಮಧ್ಯದ ಪರ್ವವು ಬಿಟ್ಟುಹೋಗುವುದು. ಮೊದಲನೆ ಕ್ರಮವೇ ಉಪಯುಕ್ತವಾದುದು. ವೇದಕ್ಕೆಗಾಯತ್ರಿಯೇ ಮೂಲಮಂತ್ರ. ಆದ್ದರಿಂದ ಗಾಯತ್ರೀ ಮಂತ್ರವನ್ನು ಪರ್ವಗಳಿಂದಲೇ ಎಣಿಸಬೇಕೆಂಬುದು ಶ್ಲಾಘ್ಯ. 'ಬ್ರಾಹ್ಮ'ಗಳಿಂದ ಅಂದರೆ ದರ್ಭೆಯ ಗಂಟುಗಳಿಂದ ಅಥವಾ 'ರೌದ್ರ' ಅಂದರೆ ರುದ್ರಾಕ್ಷಿಗಳಿಂದ ಎಣಿಸಬಹುದೆಂಬ ಅಭಿಪ್ರಾಯವೂ ಇದೆ. ಬೆರಳು ಗಳಲ್ಲಿರುವ ಅಡ್ಡ ಗೆರೆಗಳ ಎಣಿಕೆಯಿಂದ ಗಾಯತ್ರೀ ಜಪವನ್ನು ಮಾತ್ರ ಮಾಡ ಬಹುದು. ಉಳಿದ ಜಪಗಳಲ್ಲಿ ಈ ನಿಯಮವಿಲ್ಲ. ಜಪ ಮುಗಿದ ನಂತರ ಜಪ ಸರವನ್ನು ಹಣೆಗೆ, ಕಣ್ಣಿಗೆ ಒತ್ತಿಕೊಂಡು ಇಡಬೇಕು. ನಿಯಮಿತ ಕಾಲ ಜಪ ಸಂಖ್ಯೆಯು ಮುಟ್ಟುವವರೆಗೆ ಆಸನವನ್ನು ಬಿಟ್ಟು ಏಳಬಾರದು. ಎಂತಹ ಸನ್ನಿವೇಶದಲ್ಲಿಯೂ ಜಪಮಾಡುವುದನ್ನು ಮಧ್ಯದಲ್ಲಿ ನಿಲ್ಲಿಸಬಾರದು. ಪ್ರಾತಃಕಾಲದಲ್ಲಿ ಜಪಮಾಡುವಾಗ ಪೂರ್ವಾಭಿಮುಖವಾಗಿ ನಿಂತು ಅಥವಾ ಕುಳಿತು ಎಡಹಸ್ತದ ಮೇಲೆ ಬಲಗೈಹಸ್ತವನ್ನಿಟ್ಟು ಬಲಗೈಯನ್ನು ಎಡಕ್ಕೂ, ಎಡಗೈಯನ್ನು ಬಲಕ್ಕೂ ತಿರುಗಿಸಿ, ಸ್ವಸ್ತಿಕಾಕಾರವಾಗಿ ಮಾಡಿಕೊಂಡು, ಮೇಲ್ಮುಖವಾದ ಕೈಗಳಿಂದ 'ಉತ್ಥಾನ' ಬೆರಳುಗಳ ಮಧ್ಯೆ ರಂಧ್ರ ಬಿಡ ದಂತೆ ಸೇರಿಸಿ, ಹಾವಿನ ಹೆಡೆಯಂತೆ ಮಾಡಿ (ಚಿತ್ರನೋಡಿ), ತಲೆ ತಗ್ಗಿಸಿ (ಸ್ವಲ್ಪ), ಕೈಗಳನ್ನು ನಾಭಿ(ಹೊಕ್ಕಳು)ಯ ಹತ್ತಿರ ಧಾರಣೆ ಮಾಡಿಕೊಂಡು ಜಪಿಸಬೇಕು. ಮೇಲೆ ತಿಳಿಸಿದಂತಿರುವ ಹಸ್ತಗಳನ್ನು ಮಧ್ಯಾಹ್ನದಲ್ಲಿ 'ತಿರ್ಯಕ್', ಎಂದರೆ ಸಮನಾಗಿರುವಂತೆಯೂ, ಸಾಯಂಕಾಲದಲ್ಲಿ 'ಮುಕುಳಿತ' ಎಂದರೆ ಮುಚ್ಚಿಹಿಡಿದಿರುವಂತೆಯೂ ಕೈಗಳನ್ನು ಮಾಡಿ ಕೊಂಡು ಜಪಮಾಡಬೇಕೆಂಬುದು ಶಾಸ್ತ್ರನಿಯಮ. ಇವುಗಳಲ್ಲಿ ಸೂರ್ಯನು ಸಮುದ್ರಮಧ್ಯದಿಂದ ಮೇಲಕ್ಕೇರುವುದನ್ನೂ, ಎರಡನೆಯದು 'ತಿರ್ಯಕ್' ಮಧ್ಯಾಹ್ನ ನಭೋಮಂಡಲದ ಮಧ್ಯದಲ್ಲಿ ಅವನು ಸಮನಾಗಿರುವುದನ್ನೂ ಮತ್ತು ಮೂರನೆಯದು 'ಮುಕುಳಿತ' ಅಸ್ತಮಾನ ಸಮಯದಲ್ಲಿ ಆತನು ತನ್ನ ಕಿರಣಗಳನ್ನೆಲ್ಲಾ ಉಪಸಂಹರಿಸಿಕೊಂಡು ಮುಳುಗುವುದನ್ನೂ ಸೂಚಿ ಸುತ್ತವೆ.

ಬ್ರಹ್ಮಸೂಚಕ ದಿನಕ್ಕೆ ೨೧,೬೦೦ ಸಲ ಉಸಿರಾಡುತ್ತೇನೆ. ಅಂದರೆ ಹಗಲು ೧೦೮೦೦ ಆಗುವುದು. ಪ್ರತಿಯೊಂದು ಉಸಿರಾಟದೊಂದಿಗೆ ಭಗವನ್ನಾ

ಮವನ್ನು ಜಪಿಸುವುದು ಅತ್ಯಂತ ಶ್ರೇಷ್ಠವಾದುದು. ಆದರೆ ಇದು ಅಸಾಧ್ಯ. ಈ ೧೧೦,೮೦೦ರಲ್ಲಿ ಕೊನೆಯ ಎರಡು ಸೊನ್ನೆಗಳನ್ನು ತೆಗೆದಲ್ಲಿ ೧೧೦೮ ಆಗುವುದು. ಕೊನೆಯ ಪಕ್ಷ ಇಷ್ಟನ್ನಾದರೂ ಜಪಿಸಬೇಕೆಂದು ಈ ಸಂಖ್ಯೆಯನ್ನು ನಿಯಮಿಸಿದ್ದಾರೆ. ೧೧೦೮ ಅಥವಾ ೨೮ ಅಥವಾ ೧೦ ಬಾರಿ ಜಪವನ್ನಾದರೂ ಮಾಡಬೇಕು. ಬಟ್ಟೆಯ ಹೊರಗೆ ಜಪಮಾಲೆಯನ್ನು ಧರಿಸಬಾರದು (ವ್ಯಾಸಭಾರತ). ಜಪಮಾಡುವಾಗ ಕೈಗಳನ್ನು ವಸ್ತ್ರದಿಂದ ಮುಚ್ಚಿಕೊಂಡಿರಬೇಕು. 'ಓಂಕಾರಃ ಪುರುಷಶ್ಚೈವ ಗಾಯತ್ರೀ ಸುಂದರೀ ತಥಾ। ತಯೋಃ ಸಂಯೋಗ ಕಾಲೇಷು ವಸ್ತ್ರಮಾಚ್ಛಾದ್ಯಗಣ್ಯತೇ ॥' (ವಿಶ್ವಾಮಿತ್ರ ಕಲ್ಪ). ಜಪ ಮುಗಿದ ಮೇಲೆ 'ಓಂ' ಎಂದು ಹೇಳಬೇಕು.

ಗಾಯತ್ರೀ ಜಪವನ್ನು ಶ್ರದ್ಧೆಯಿಂದ ಮಾಡುತ್ತಿರುವವರ ಸುತ್ತಲೂ ಒಂದು ವಿಧವಾದ ತೇಜೋಮಂಡಲವು ವಿರಾಜಿಸುತ್ತಿರುವುದನ್ನು ನೋಡಿದವರುಂಟು. ಒಂದೇ ಮಂತ್ರವನ್ನು ಅನೇಕ ಬಾರಿ ಪುನರುಚ್ಚಾರಮಾಡುವುದರಿಂದ ಪ್ರಜ್ಞೆಯು ಪ್ರಕಾಶವಾಗಿ ತನ್ಮಯತೆಯುಂಟಾಗುವುದು.

ನಾವು ನಿತ್ಯವೂ ಮನಸ್ಸಿನಿಂದ, ಬಾಯಿಂದ ಮತ್ತು ಶರೀರದಿಂದ ಒಳ್ಳೆಯ ಮತ್ತು ಕೆಟ್ಟ ಕೆಲಸಗಳನ್ನು ಮಾಡುತ್ತಲೇ ಇರುತ್ತೇವೆ. ಆಯಾ ಕೆಲಸಗಳು ಆಯಾ ಕ್ಷಣದಲ್ಲಿ ನಾಶವಾದರೂ ಅದರ ಪರಿಣಾಮ ಮನಸ್ಸಿನ ಮೇಲೆ ಆಗುತ್ತದೆ. ಈ ಪರಿಣಾಮ ಸೂಕ್ಷ್ಮವಾಗಿ ನಮ್ಮ ಮನಸ್ಸನ್ನು ಆಶ್ರಯಿಸುತ್ತದೆ. ಅದನ್ನು 'ವಾಸನೆ' ಎನ್ನುತ್ತೇವೆ. ಅದು ಕಾಣುವ ಅಥವಾ ಕೇಳುವ ವಸ್ತುವಲ್ಲ. ಆದುದರಿಂದಲೇ 'ಅದೃಷ್ಟ' ಎನ್ನುವುದು. ಒಳ್ಳೆಯ ಫಲವನ್ನು ಅನುಭವಿಸಿದಾಗ ಸುಕೃತ ಫಲ ; ಪುಣ್ಯಫಲ ಎನ್ನುತ್ತೇವೆ. ಕೆಟ್ಟಫಲವನ್ನು ಅನುಭವಿಸಿದಾಗ ದುಷ್ಕೃತ ಫಲ ; ಪಾಪಫಲ ಎನ್ನುತ್ತೇವೆ. ಈ ಸುಕೃತ, ದುಷ್ಕೃತಗಳೇ ವಾಸನೆಗಳು. ಇವು ಮನಸ್ಸಿನಲ್ಲಿ ತುಂಬಿ, ನದಿಯಂತೆ ಪ್ರವಹಿಸುತ್ತಾ ನಮ್ಮನ್ನು ಒಳ್ಳೆಯ ಮತ್ತು ಕೆಟ್ಟ ಕೆಲಸಗಳಿಗೆ ಪ್ರೇರಿಸುತ್ತವೆ. ಕೆಟ್ಟವಾಸನೆಗಳಿಗೆ ಹೊರಗಿನ ಕೆಟ್ಟವಿಷಯಗಳೂ, ಸದ್ವಾಸನೆಗಳಿಗೆ ಒಳ್ಳೆಯ ವಿದ್ಯೆ, ಆಹಾರ, ಸತ್ಸಹವಾಸ, ಒಳ್ಳೆಯ ವ್ಯವಹಾರಗಳೇ ಪ್ರಚೋದಕಗಳು. ಈ ದುರ್ವಾಸನೆಗಳ ಪ್ರಾಬಲ್ಯವನ್ನು ಕುಗ್ಗಿಸಲು 'ಮಂತ್ರರಾಜ' ಎನಿಸಿದ ಗಾಯತ್ರೀ ಜಪವು ಅತ್ಯದ್ಭುತ ಶಕ್ತಿ ಸಂಪತ್ತನ್ನು ಹುದುಗಿಸಿಕೊಂಡಿದೆ. ಈ ಮಂತ್ರವೇ ಬ್ರಾಹ್ಮಣ್ಯಕ್ಕೆ ಮೂಲಭೂತವಾದುದು. ಮನುಷ್ಯ ಜನ್ಮದಲ್ಲಿ ಬ್ರಾಹ್ಮಣನಾದವನ ಗುರಿ ಮೋಕ್ಷಪ್ರಾಪ್ತಿ.

ಇದಕ್ಕೆ ಇರುವ ತೊಡರುಗಳೆಂದರೆ ಅನೇಕ ಜನ್ಮಗಳಿಂದಲೂ ಕೂಡಿಕೊಂಡಿರುವ ಪಾಪರಾಶಿ. ಈ ಪಾಪರಾಶಿಯನ್ನು ನಿರ್ಮೂಲನ ಮಾಡಲು ಶಕ್ತಿಯುತವಾದದ್ದು ಈ ಗಾಯತ್ರೀ ಮಂತ್ರ. ಈ ಪಾಪರಾಶಿ ದುಗ್ಧವಾಯಿತೆಂದರೆ ತತ್ತ್ವಜ್ಞಾನ ಉದಯಿಸುತ್ತದೆ. ಮೋಕ್ಷಕ್ಕೆ ಪರಮ ಸೋಪಾನ ಈ ಮಂತ್ರ.

ಒಂದು ಮಂತ್ರದಿಂದ ಒಂದೇ ದೇವತೆಯನ್ನು ಉಪಾಸಿಸಬೇಕು, ಇನ್ನೊಂದನ್ನು ಉಪಾಸಿಸಬಾರದು ಎಂಬ ನಿಯಮವೇನಿಲ್ಲ. ಏಕೆಂದರೆ ಆ ಉಪಾಸನೆ ಶಾಸ್ತ್ರಮೂಲವಾಗಿದೆ. ಶಾಸ್ತ್ರವಚನವಿದ್ದಲ್ಲಿ ಒಂದೇ ಮಂತ್ರದಿಂದ ಅನೇಕ ದೇವತೆಗಳನ್ನು ಉಪಾಸಿಸಬಹುದು. ಹೇಗೆಂದರೆ ಒಂದೇ ಪುರುಷಸೂಕ್ತವು ಶಿವ, ವಿಷ್ಣು ಮುಂತಾದ ಅನೇಕ ದೇವತೆಗಳ ಆರಾಧನೆಯಲ್ಲಿ ವಿನಿಯುಕ್ತವಾಗಿದೆ. ಗಾಯತ್ರಿಯಲ್ಲಿಯೂ ಸವಿತೃ, ವಿಷ್ಣು, ಶಿವ ಮತ್ತು ಪರಮಾತ್ಮರೆಂಬ ನಾಲ್ಕೂ (ದೇವತೆಗಳು) ಪ್ರತಿಪಾದಿತರಾಗಿದ್ದಾರೆ ಎಂದು ಶಾಸ್ತ್ರ ತಿಳಿಸುತ್ತದೆ.

ಪ್ರತಿ ರೂಪಕ್ಕೂ ಆಳವಾದ ಸಾಂಕೇತಿಕ ಅರ್ಥವಿದೆ. ವಿಶಿಷ್ಟ ದೈವಶಕ್ತಿಯು ಅಥವಾ ದೈವಕಾರ್ಯದ ಸಮಗ್ರ ಭಾವವನ್ನು ಒಂದು ಮೂರ್ತಿಯ ಮೂಲಕ ಸಾಧಕನು ಕಲ್ಪಿಸಿಕೊಳ್ಳಲಿ ಎಂಬುದೇ ಈ ರೂಪಗಳನ್ನು ಕೊಟ್ಟಿರುವುದರ ಉದ್ದೇಶ.

## ಆಸನ, ಪ್ರಾಣಾಯಾಮ ಮತ್ತು ಸಂಕಲ್ಪ

ಮಾರ್ಜನಮಂತ್ರಗಳು ಮತ್ತು ಅಘಮರ್ಷಣ ಮಂತ್ರಗಳು ಜಪದ ಕಾರ್ಯಕ್ಕೆ ಅನುಕೂಲವಾದ ಹೆಚ್ಚಿನ ಪರಿಶುದ್ಧತೆಯನ್ನು ಕೊಡುತ್ತವೆ. ನ್ಯಾಸ ಮತ್ತು ಮುದ್ರೆಗಳಿಂದ ಉಪಾಸಿತ ದೇವತೆಯ ಸಾನ್ನಿಧ್ಯ ಮತ್ತು ಸಾಮೀಪ್ಯ ಹೆಚ್ಚುತ್ತದೆ. ಹಾಗೆಯೇ ಗಾಯತ್ರೀ ಜಪಕ್ಕೆ ಪೋಷಕವಾಗಿ, ಅದಕ್ಕೆ ಪೂರ್ವಭಾವಿಯಾಗಿ, ಮಂತ್ರಪೂರ್ವಕವಾಗಿ ಶಾಸ್ತ್ರೋಕ್ತವಾದ ಆಸನ, ಪ್ರಾಣಾಯಾಮಗಳನ್ನು ಮಾಡಬೇಕೆಂಬುದು ಶಾಸ್ತ್ರ ನಿಯಮ. ಇದನ್ನೇ ಮನುವೂ ಒಪ್ಪುತ್ತಾನೆ.

ಆಸನ

ಪ್ರಾಣಾಯಾಮಕ್ಕೆ ಪೂರಕವಾಗಿ ಶಾಸ್ತ್ರೋಕ್ತವಾದ ಆಸನದಲ್ಲಿ ಕುಳಿತು ಕೊಳ್ಳುವುದು ಅವಶ್ಯ. ಈ ಆಸನದಲ್ಲಿ ಎರಡು ವಿಧ ! ೧. ಪೀಠ. (ಮಣೆ-ಚಾಪೆ) ೨. ಶರೀರಭಂಗಿ. (Posture)

೧. ಪೀಠ : ನಾವು ಜಪಕ್ಕೆ ಕೂರಲು ಒಂದು ಪೀಠವಿರಬೇಕು. ಅದರ ಮೇಲೆ ವಸ್ತ್ರ, ದರ್ಭೆ ಅಥವಾ ನಿಷಿದ್ಧವಲ್ಲದ ಚರ್ಮವನ್ನು ಹಾಕಿಕೊಂಡು ಕುಳಿತುಕೊಳ್ಳಬೇಕು. ಈ ಆಸನವು ಈ ಕೆಳಗೆ ಕಂಡ ಯಾವುದಾದರೂ ಪದಾರ್ಥದಿಂದ ಮಾಡಿದ್ದಾಗಿರಬೇಕು. ೧. ದರ್ಭೆ ೨. ಮುಂಜ ಅಥವಾ ನೊದೆಹುಲ್ಲು ಅಥವಾ ಜೊಂಡುಹುಲ್ಲು—ಇದರಿಂದ ತಯಾರಿಸಿದ ಸಣ್ಣ ಚಾಪೆ, ೩. ಉಣ್ಣೆಯ ಕಂಬಲ ಅಥವಾ ೪. ಮರದ ಮಣೆ. ಇವು ಶರೀರ ಮತ್ತು ಮನಸ್ಸುಗಳೆರಡರ ಸ್ಥಿರತೆಗೂ ಪೋಷಕವಾಗಿರಬೇಕು. ದರ್ಶನ, ಸ್ಪರ್ಶ ಮತ್ತು ಪರಿಣಾಮ, ಎಲ್ಲರಿಂದಲೂ ಮನಸ್ಸಿನ ಪ್ರಸನ್ನತೆ ಮತ್ತು ನೆಮ್ಮದಿಗೆ ಪೋಷಕವಾಗಿರಬೇಕು. ಭೌತಿಕ, ದೈವಿಕ, ಆಧ್ಯಾತ್ಮಿಕವಾದ ಯಾವ ಕ್ಷೇತ್ರದಲ್ಲಿಯೂ ನೆಮ್ಮದಿಯನ್ನು ಕೆಡಿಸುವಂತಿರಬಾರದು. ಆಕೃತಿಯಲ್ಲಿ ದೀರ್ಘ ಚತುರಶ್ರವಾಗಿಯೂ, ಮಣೆಯು ಒಂದೂವರೆ ಅಂಗುಲ ಎತ್ತರವಾಗಿಯೂ ಇರಬೇಕು.

೨. ಶರೀರ ಭಂಗಿ (Posture) : ಮನಸ್ಸು ದೇವತಾಭಾವದಲ್ಲಿ ಸಂಯೋಗವಾಗುವ ಧ್ಯಾನಕಾರ್ಯವೇ 'ಯೋಗ'ವನ್ನೆಲ್ಪಡುವುದು. ಈ ಧ್ಯಾನಕ್ಕೆ ಆಸನ ಅಗತ್ಯ. ಇದು ಅಷ್ಟಾಂಗಯೋಗಗಳಲ್ಲಿ ಮೂರನೆಯದು. ಧ್ಯಾನಕ್ಕೆ ನಾವು ಮನಸ್ಸು ಬಂದಂತೆ ಕುಳಿತುಕೊಳ್ಳಬಾರದು. ಪ್ರತಿಯೊಂದು ಆಸನವೂ ಒಂದೊಂದು ಮಹತ್ತ್ವ ಗುಣ ಉಳ್ಳದ್ದು. ಶಾಸ್ತ್ರೋಕ್ತವಾದ ಆಸನಾಭ್ಯಾಸದಿಂದ ಮನಸ್ಸಿನ ಚಾಂಚಲ್ಯ ತಗ್ಗಿ, ಶಾಂತ ಸ್ವಭಾವ ಉಂಟಾಗಿ ಅನುಕೂಲವಾಗುವುದು.

ಆಸನಗಳು ಒಂದು ವಿಧವಾದ ವ್ಯಾಯಾಮವೆಂಬುದು ಕೆಲವರ ಅನಿಸಿಕೆ. ಆದರೆ ದೈಹಿಕ ವ್ಯಾಯಾಮಕ್ಕೂ, ಯೋಗ ಪದ್ಧತಿಯ ಆಸನಗಳಿಗೂ ಕೆಲವು ಮುಖ್ಯ ವ್ಯತ್ಯಾಸಗಳಿವೆ. ಯೋಗ ಪದ್ಧತಿಯ ಆಸನಗಳು—೧. ಶರೀರದ ಮಾಂಸಖಂಡಗಳಿಗಿಂತ ನರಗಳಿಗೆ ಹೆಚ್ಚು ಗಮನ ನೀಡುತ್ತವೆ. ೨. ಶರೀರದ ಹೊರ ಅಂಗಗಳಿಗಿಂತ ಒಳ ಅಂಗಗಳಿಗೆ ಮತ್ತು ಗ್ರಂಥಿಗಳಿಗೆ ಹೆಚ್ಚು ಲಕ್ಷ್ಯಕೊಡುತ್ತವೆ. ಮತ್ತು ೩. ಬೆನ್ನು ಮೂಳೆಯು

ಸುಲಭವಾಗಿ ಬಾಗುವುದನ್ನು ಆರೋಗ್ಯ ಮತ್ತು ಚೈತನ್ಯದ ಆಧಾರವಾಗಿ ಪರಿಗಣಿಸುತ್ತವೆ.

## ಪ್ರಾಣಾಯಾಮ

'ಪ್ರಾಣ' (ಪ್ರಾಣವಾಯು), ಇಂದ್ರಿಯ ಮತ್ತು ಮನಸ್ಸುಗಳ ಏಕಾಗ್ರತೆ ಉಂಟಾಗುವಂತೆ ನಿರೋಧ ಮಾಡುವುದಕ್ಕೆ 'ಪ್ರಾಣಾಯಾಮ' ಎಂದು ಹೆಸರು. 'ಪ್ರಾಣ' ಎಂದರೆ 'ಶ್ವಸನವಾಯು', 'ಆಯಾಮ' ಎಂದರೆ 'ತಡೆಯುವುದು' ಅಥವಾ ನಿರೋಧಿಸುವುದು. ಹೀಗೆ ಶ್ವಾಸ ವಾಯುವಿನ ನಿರೋಧವೇ 'ಪ್ರಾಣಾಯಾಮ'. 'ವಿನಿಯೋಗ'ವೆಂದರೆ ಆ ಮಂತ್ರವನ್ನು ಉಪಯೋಗ ಮಾಡಬೇಕಾದ ಸಂದರ್ಭ. ಪ್ರಣವ, ವ್ಯಾಹೃತಿಗಳು, ಗಾಯತ್ರೀ ಮತ್ತು ಗಾಯತ್ರೀ ಶಿರಸ್ಸುಗಳನ್ನು ಮೂರು ಬಾರಿ ಹೇಳಿದರೆ ಅದು ಒಂದು ಪ್ರಾಣಾಯಾಮವಾಗುವುದು. ಒಂಬತ್ತು ಅಥವಾ ಹತ್ತು ಬಾರಿ ಪ್ರಾಣಾಯಾಮವನ್ನು ಮಾಡಿದ ನಂತರ ಗಾಯತ್ರೀ ಜಪವನ್ನು ಮಾಡುವುದು ರೂಢಿಯಾಗಿರುತ್ತದೆ. ಪ್ರಾಣಾಯಾಮದ ಸಹಾಯವಿಲ್ಲದೆ ಉಪಾಸನೆಯು ಸಿದ್ಧಿಸಲಾರದು. ಗಾಯತ್ರೀ ದೇವಿಯನ್ನು ಉಪಾಸಿಸಲು ಮನಸ್ಸಿಗೆ ಅರ್ಹತೆಯನ್ನು ಪಡೆಯುವುದಕೋಸ್ಕರ ಪ್ರಾಣಾಯಾಮವನ್ನು ಅನುಷ್ಠಿಸುವುದು ಪ್ರಧಾನ ಉದ್ದೇಶ. ಇದನ್ನು ಮಾಡುವುದರಿಂದ ಆರೋಗ್ಯಭಾಗ್ಯವೂ ಹಿಂಬಾಲಿಸಿಯೇ ಬರುವುದು. ಆರೋಗ್ಯ ಭಾಗ್ಯಕ್ಕೆ ಅನುಕೂಲವಲ್ಲದ ಕರ್ಮಮಾರ್ಗ ಯಾವುದೂ ಇಲ್ಲ.

ದೇಹವು ಯಾವ ಗುಣವನ್ನು ಅವಲಂಬಿಸುವುದೋ ಮನಸ್ಸೂ ಅದನ್ನೇ ಅವಲಂಬಿಸುವುದು. ದೇಹವನ್ನು ಸ್ನಾನ–ಪಾನಾದಿಗಳಿಂದ ಎಷ್ಟೇ ಶುಚಿಯಾಗಿಟ್ಟುಕೊಂಡಿದ್ದರೂ, ದೇಹದಲ್ಲಿ ಒಂದು ವಿಧವಾದ ಒರಟುತನ ಇದ್ದೇ ಇರುವುದು. ಚರ್ಮವನ್ನು ಹದಮಾಡುವಂತೆ ದೇಹವನ್ನು ಪ್ರಾಣಾಯಾಮದಿಂದ ಹದ ಮಾಡಬೇಕು. ಇದರಿಂದ ದೇಹ ಮತ್ತು ಮನಸ್ಸುಗಳೆರಡಕ್ಕೂ ಕಾಂತಿ ಮತ್ತು ಸೂಕ್ಷ್ಮ ಗ್ರಹಣಶಕ್ತಿಯುಂಟಾಗಿ ಮನಶ್ಶಕ್ತಿಯು ಹೆಚ್ಚಾಗುವುದು. ಕ್ರಮವರಿತು ಸಾಧನೆ ಮಾಡಿದಾಗ ಈ ಪ್ರಾಣಾಯಾಮವು ಗಾಯತ್ರೀ ಜಪವನ್ನು ಮಾಡಲು ಬೇಕಾದ ಏಕಾಗ್ರವಾದ ಮನಃಸ್ಥಿತಿಯನ್ನು ಉಂಟುಮಾಡುತ್ತದೆ. ಈ ಕ್ರಿಯೆಯು ಶರೀರದ ಗೂಢವಾದ ನಾಡಿ ಮತ್ತು ಚಕ್ರಗಳನ್ನು ಉದ್ಬೋಧನಗೊಳಿಸಿ ಮನಸ್ಸು

ಮತ್ತು ಪ್ರಾಣಗಳು ಸರಾಗವಾಗಿ ಒಳಮಾರ್ಗದಲ್ಲಿ ಸಂಚರಿಸುವಂತೆ ದಾರಿಮಾಡಿಕೊಡುತ್ತದೆ. ಗಾಯತ್ರೀ ಶಿರಸ್ಸಿನಿಂದ ಕೂಡಿ ಮಾಡುವ ಪ್ರಾಣಾಯಾಮವು ಗಾಯತ್ರೀ ಒಳತತ್ತ್ವವನ್ನು ತಿಳಿದುಕೊಳ್ಳುವ ಅತ್ಯಂತ ಸಮರ್ಥವಾದ ಕ್ರಿಯೆಯಾಗಿದೆ. ಕುಂಭಕದಲ್ಲಿದ್ದುಕೊಂಡು ಮಾನಸಿಕವಾಗಿ ವ್ಯಾಹೃತಿಗಳನ್ನು ಉಚ್ಚರಿಸಿದಾಗ ಆ ಶಬ್ದಗಳೇ ಉಸಿರು ಮತ್ತು ಮನಸ್ಸುಗಳನ್ನು ಒಳಮುಖವಾಗಿ ಸಂಚರಿಸುವಂತೆ ಮಾಡುತ್ತವೆ. ಇವುಗಳನ್ನು ಕ್ರಮವಾಗಿ ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ, ಆಜ್ಞಾ ಮತ್ತು ಸಹಸ್ರಾರಗಳಲ್ಲಿ ಮನಸ್ಸನ್ನು ಏಕಾಗ್ರಮಾಡಿ ಜಪಿಸುವುದರಿಂದ ಆ ವ್ಯಾಹೃತಿಗಳು ಲೋಕಗಳನ್ನು ಹೇಳುವುದು ಮಾತ್ರವಲ್ಲದೆ ಆಯಾಲೋಕಗಳನ್ನು ತಿಳಿಸಿಕೊಡುವ ಚಕ್ರಸ್ಥಾನಗಳಿಗೆ ಮನಸ್ಸನ್ನು ಕೊಂಡೊಯ್ಯುವ ಶಬ್ದ ಬ್ರಹ್ಮಾತ್ಮಕವಾದ ಶಕ್ತಿಗಳೂ ಆಗುತ್ತವೆ.

ಯೋಗಾಚಾರ್ಯರ ಪ್ರಕಾರ ಶರೀರದಲ್ಲಿ ಪ್ರಧಾನವಾದ ಐದು ವಿಧವಾದ ವಾಯು(ಪ್ರಾಣ)ಗಳೂ ಮತ್ತು ಐದು ವಿಧವಾದ ಉಪವಾಯು (ಉಪ ಪ್ರಾಣ)ಗಳೂ ಇರುತ್ತವೆ. ಅವುಗಳ ಸ್ಥಾನ, ವ್ಯಾಪಾರ, ಮುಂತಾದವುಗಳೆಲ್ಲವೂ ಬೇರೆಬೇರೆಯಾಗಿರುತ್ತವೆ. ವಾಸ್ತವದಲ್ಲಿ ಅವೆಲ್ಲವೂ ಒಂದೇ ಪ್ರಾಣಶಕ್ತಿಯ ರೂಪಾಂತರಗಳು. ಈ ದಶವಾಯುಗಳಲ್ಲಿ ಯೋಗವು 'ಪ್ರಾಣ' ಮತ್ತು 'ಅಪಾನ' ವಾಯುಗಳಿಗೆ ವಿಶೇಷ ಮಹತ್ತ್ವವನ್ನು ಹೇಳುತ್ತದೆ. ಆ ಪ್ರಾಣವು 'ಪಿಂಗಳಾ' (ಚಂದ್ರ, ಪುರುಷ, ಶಕ್ತಿ) ನಾಡಿಯಲ್ಲಿಯೂ, ಅಪಾನವು "ಇಡಾ" (ಸೂರ್ಯ, ಪ್ರಕೃತಿ, ಶಕ್ತಿ)ನಾಡಿಯಲ್ಲಿಯೂ ಪರ್ಯಾಯವಾಗಿ ಸಂಚರಿಸುತ್ತವೆ. 'ಪಿಂಗಳಾ' ನಾಡಿಯು ಶರೀರದ ಬಲಭಾಗದಲ್ಲಿ ವ್ಯಾಪಿಸಿರುವ ನರಸಮೂಹಗಳೆಲ್ಲಕ್ಕೂ ಮೂಲ. ಇದರಲ್ಲಿ ಪ್ರಾಣಶಕ್ತಿಯು ಸಂಚರಿಸುತ್ತದೆ. ಅದರಿಂದ ಶಾಖೋಪಶಾಖೆಗಳಾಗಿ ಉಂಟಾಗುವ ನಾಡಿ ಸಮೂಹಗಳೆಲ್ಲಕ್ಕೂ ಮೂಲಶಕ್ತಿ 'ಪ್ರಾಣ'. 'ಇಡಾ' ನಾಡಿಯು ಶರೀರದ ಎಡಭಾಗದಲ್ಲಿ ವ್ಯಾಪಿಸಿರುವ ನಾಡೀ ಸಮೂಹಗಳೆಲ್ಲಕ್ಕೂ ಮೂಲ. ಅದರಲ್ಲಿ ಅಪಾನ ಶಕ್ತಿಯು ಸಂಚರಿಸುತ್ತದೆ. ಪಿಂಗಳೆಯಲ್ಲಿ ಪ್ರಾಣಗತಿಯು ಊರ್ಧ್ವಮುಖವಾಗಿರುತ್ತದೆ. ಇಡೆಯಲ್ಲಿ ಅಪಾನದ ಗತಿಯು ಅಧೋಮುಖವಾಗಿರುತ್ತದೆ. ಈ ಎರಡು ಶಕ್ತಿಗಳ ಮೂಲದಲ್ಲಿಯೂ ಜೀವನಿರುತ್ತಾನೆ. ಮನುಷ್ಯನಲ್ಲಿ ಉಂಟಾಗುವ

ಅನಂತವಾದ ಸ್ಥಿತಿಗತಿಗಳೆಲ್ಲಕ್ಕೂ ಪ್ರಾಣವೇ ಕಾರಣ. ಈ ಪ್ರಾಣವನ್ನು ವಶಕ್ಕೆ ತಂದುಕೊಳ್ಳುವ ಕ್ರಿಯೆಯೆ ಪ್ರಾಣಾಯಾಮವೆನಿಸಿಕೊಳ್ಳುವುದು.

ಪ್ರಾಣವೆಂದರೆ ದೇಹದಲ್ಲಿರುವ ಸ್ಪಂದನಶಕ್ತಿ. ದೇಹದಲ್ಲಿರುವ ಸೂರ್ಯಶಕ್ತಿಯು ಸೂರ್ಯನಾಡಿಯಲ್ಲಿ ಮೇಲಕ್ಕೆ ಎಳೆಯುವುದು. ಚಂದ್ರಶಕ್ತಿಯು ಚಂದ್ರನಾಡಿಯಲ್ಲಿ ಕೆಳಕ್ಕೆ ಎಳೆಯುವುದು. ಹೀಗೆ ಸೂರ್ಯಚಂದ್ರರು ತಮ್ಮ ತಮ್ಮ ನಾಡಿಗಳಲ್ಲಿ ಯಾತಾಯಾತವಾಗಿ, ಮೇಲಕ್ಕೂ ಕೆಳಕ್ಕೂ ಎಳೆಯುವುದರಿಂದ ಸ್ಪಂದನವುಂಟಾಗಿ ಶ್ವಾಸೋಚ್ಛ್ವಾಸದ ಕೆಲಸವೂ, ಪಂಚಪ್ರಾಣಗಳ ಕಾರ್ಯಗಳೂ, ಬುದ್ಧಿ ಮನಸ್ಸಿನ ಕಾರ್ಯಗಳೂ ನಡೆಯುವುವು. ಅಂದರೆ ದೇಹ ವ್ಯಾಪಾರವು ಕಾರ್ಯೋನ್ಮುಖವಾಗುವುದು. ಮೂಲಾಧಾರ ಚಕ್ರದಲ್ಲಿ ಗಾರ್ಹಪತ್ಯಾಗ್ನಿಯೂ, ಅನಾಹತಚಕ್ರದಲ್ಲಿ ದಕ್ಷಿಣಾಗ್ನಿಯೂ, ಆಜ್ಞಾ ಚಕ್ರದಲ್ಲಿ ಆಹವನೀಯಾಗ್ನಿಯೂ ಇರುವುವು. ಮೂಲಾಧಾರದಲ್ಲಿರುವ ಅಗ್ನಿಗೆ ವೈಶ್ವಾನರಾಗ್ನಿ ಎಂಬ ಹೆಸರೂ ಇದೆ. ಧ್ಯಾನಯೋಗ ಕಾಲದಲ್ಲಿ ಮೂಲಾಧಾರದಲ್ಲಿರುವ ಅಪಾನವಾಯುವು ಮೇಲಕ್ಕೆ ಬೀಸುವುದರಿಂದ ಮೂಲಾಧಾರದಲ್ಲಿರುವ ಗಾರ್ಹಪತ್ಯಾಗ್ನಿಯು ಮೇಲಕ್ಕೆ ಪ್ರಸರಿಸಿಕೊಂಡು ಅನಾಹತ ಚಕ್ರವನ್ನು ಸೇರಿ ಅಲ್ಲಿರುವ ದಕ್ಷಿಣಾಗ್ನಿಯು ಪ್ರಜ್ವಲನೆಯಾಗುವಂತೆ ಮಾಡುವುದು. ಈ ಚಕ್ರದಲ್ಲಿಯೇ ನಮ್ಮಲ್ಲಿರುವ ಆದಿತ್ಯನಿರುತ್ತಾನೆ. ಅನಾಹತ ಚಕ್ರದಲ್ಲಿರುವ ದಕ್ಷಿಣಾಗ್ನಿಯೂ ಆಗ ಪ್ರಜ್ವಲಿತವಾಗುವುದರಿಂದ ಗಾರ್ಹಪತ್ಯ, ದಕ್ಷಿಣಾಗ್ನಿಗಳೆರಡೂ ಒಂದಾಗಿ ಭ್ರೂಮಧ್ಯದಲ್ಲಿರುವ ಆಹವನೀಯಾಗ್ನಿ ಪ್ರಜ್ವಲಿತವಾಗುವಂತೆ ಮಾಡುವುವು. ಓಂಕಾರೋಪಾಸನೆಯ ಧ್ಯಾನಯೋಗದಲ್ಲಿ ಅಪಾನವಾಯುವು ಭ್ರೂಮಧ್ಯದವರೆಗೂ ಅಗ್ನಿ ಪ್ರಜ್ವಲನೆಯಾಗುವಂತೆ ಮಾಡುವ ಶಕ್ತಿಯುಳ್ಳದ್ದಾಗಿದೆ. ಆಗ ಚಂದ್ರನು ಸೂರ್ಯಾಗ್ನಿಗಳನ್ನು ನುಂಗುವನು. ಅಂದರೆ ಸೂರ್ಯಾಗ್ನಿಗಳು ಆನಂದವಿಲ್ಲದ ಶಾಖದಾಯಕವಾಗಿರುವುದರಿಂದ ಅವನ್ನು ಚಂದ್ರನು ನುಂಗುವನು ಎಂದು ಭಾವ. ಇದೇ ಕಳಾಸ್ಥಿತಿ.

ಪ್ರಾಣಸ್ಪಂದನವನ್ನು ನಿರೋಧ ಮಾಡುವವರೆಗೂ ಮನಸ್ಸಿನ ಚಂಚಲತ್ವವು ಹೋಗಲಾರದು. ಬುದ್ಧಿಯ ಜ್ಞಾನವೂ ಏಕಾಗ್ರವಾಗಿ ನಿಲ್ಲಲಾರದು. ಪ್ರಾಣಾಯಾಮದ ಅನುಷ್ಠಾನ ಮಾಡಿ ಶ್ವಾಸೋಚ್ಛ್ವಾಸ ಯಾವಾಗ ನಿಲುಗಡೆಗೆ ಬರುತ್ತದೋ ಆಗ ಬುದ್ಧಿ ಮನಸ್ಸುಗಳ ಚಂಚಲತ್ವವು ತಗ್ಗುವುದು

ಆಗ ಪ್ರಾಣಶಕ್ತಿ(ಸ್ಪಂದನಶಕ್ತಿ)ಯು ಧ್ಯಾನಾಭ್ಯಾಸದಿಂದ ಪರಬ್ರಹ್ಮನಲ್ಲಿ ಲೀನವಾಗುವುದು.

ಸುಷುಮ್ನಾನಾಡಿಯಲ್ಲಿರುವ ಮೂಲಾಧಾರ ಚಕ್ರವು ಭೂತತ್ತ್ವ, ಸ್ವಾಧಿಷ್ಠಾನವು ಜಲತತ್ತ್ವ. ಈ ಭೂಜಲತತ್ತ್ವಗಳೆರಡೂ ಸೇರಿ 'ಅನ್ನಮಯಕೋಶ' ತತ್ತ್ವವಾಗಿದೆ. ಧ್ಯಾನಾಭಿವೃದ್ಧಿಯಿಂದ ಮಣಿಪೂರಕ ಚಕ್ರವನ್ನು ಸೇರಿದರೆ ಜೀವಾತ್ಮನಿಗಿದ್ದ ಈ ಕೋಶದ ಉಪಾದಿಯು ನಿವೃತ್ತಿಯಾಗುವುದು. ಸುಷುಮ್ನಾನಾಡಿನಲ್ಲಿ ಮಣಿಪೂರಕ ಚಕ್ರವು ಅಗ್ನಿತತ್ತ್ವ, ಅನಾಹತ ಚಕ್ರವು ವಾಯುತತ್ತ್ವ. ಅಗ್ನಿ ಮತ್ತು ವಾಯು ತತ್ತ್ವಗಳೆರಡೂ ಸೇರಿ 'ಪ್ರಾಣಮಯಕೋಶ'ವಾಗಿದೆ. ಈ ಎರಡು ಚಕ್ರಗಳನ್ನೂ ದಾಟಿದರೆ ಜೀವಾತ್ಮನಿಗಿದ್ದ ಪ್ರಾಣಮಯ ಕೋಶದ ಉಪಾದಿಯು ನಿವೃತ್ತಿಯಾಗುವುದು. ವಿಶುದ್ಧ ಚಕ್ರವು ಆಕಾಶತತ್ತ್ವದ 'ಮನೋಮಯ ಕೋಶ'ಕ್ಕೆ ಪ್ರಧಾನ ಸ್ಥಳವಾಗಿದೆ. ಧ್ಯಾನದಲ್ಲಿ ಅಭಿವೃದ್ಧಿಯಾಗಿ ವಿಶುದ್ಧ ಚಕ್ರವನ್ನು ದಾಟಿದರೆ ಜೀವಾತ್ಮನಿಗಿದ್ದ ಈಕೋಶದ ಉಪಾದಿಯು ನಿವೃತ್ತಿಯಾಗುವುದು. ಧ್ಯಾನಾಭಿವೃದ್ಧಿಯಿಂದ'ವಿಜ್ಞಾನಮಯ ಕೋಶ'ಕ್ಕೆ ಪ್ರಧಾನವಾದ ಆಜ್ಞಾ ಚಕ್ರವನ್ನು ದಾಟಿದರೆ ಜೀವಾತ್ಮನಿಗಿದ್ದ ಈ ಕೋಶದ ಉಪಾದಿಯೂ ನಿವೃತ್ತಿಯಾಗುವುದು. ಧ್ಯಾನಾಭಿವೃದ್ಧಿಯಿಂದ ಆಜ್ಞಾ ಚಕ್ರವನ್ನು ದಾಟಿದ ಮೇಲೆ ಜೀವಾತ್ಮನು ಕಳಾಸೋಪಾನದಲ್ಲಿ ನಿಲ್ಲುವನು. ಈ ಕಳಾಸೋಪಾನವೇ ಜೀವಾತ್ಮನಿಗೆ 'ಆನಂದಮಯಕೋಶ'ದ ಉಪಾದಿಯಾಗಿದೆ. ಕಳಾಸೋಪಾನವನ್ನು ಧ್ಯಾನದಲ್ಲಿ ದಾಟಿ ಶಿರಸ್ಸಿನಲ್ಲಿರುವ ಹೃದಯಾಕಾಶ ಗುಹೆಯನ್ನು ಜೀವಾತ್ಮನು ಪ್ರವೇಶಿಸಿದರೆ ಆನಂದಮಯಕೋಶದ ಉಪಾದಿಯಿಂದಲೂ ನಿವೃತ್ತನಾಗಿ ಅಂದರೆ ಆನಂದಮಯತ್ವವು ಹೋಗಿ, ಆನಂದಸ್ವರೂಪನಾದ ಪರಬ್ರಹ್ಮನಾಗುತ್ತಾನೆ. ಅಂದರೆ ಆನಂದಮಯ ಕೋಶದಲ್ಲಿ 'ನಾನೇ ಬ್ರಹ್ಮ ನೆಂಬ ಜ್ಞಾನ'ದಿಂದ ಧ್ಯಾನದಲ್ಲಿ ಮುಳುಗುವುದರಿಂದ ಆನಂದರೂಪವಾದ ಪರಬ್ರಹ್ಮನೆ ಆ ಕೋಶದ ಹೆಸರಿನಿಂದ ಅಂದರೆ 'ಅನ್ನಮಯಾತ್ಮಾ', 'ಪ್ರಾಣಮಯಾತ್ಮಾ', 'ಮನೋಮಯಾತ್ಮಾ', 'ವಿಜ್ಞಾನಮಯಾತ್ಮಾ' ಎಂದು ಕರೆಯಲ್ಪಡುವನು.

ಧ್ಯಾನಯೋಗದಲ್ಲಿ ಬುದ್ಧಿವೃತ್ತಿಗ ಜ್ಞೇಯವಾಗಿ ಗೋಚರಿಸುವ ತೇಜೋಬಿಂದು ನಾದವನ್ನು ಧರಿಸಿಕೊಂಡು, ಮುಂದುಮುಂದಕ್ಕೆ ಅಭಿವೃದ್ಧಿಯಾಗಿ

ಚಕ್ರಗಳು, ರತ್ನಗಳು, ಬೀಜಗಳು, ಗ್ರಂಥಿಗಳು, ಸ್ವರಸ್ಥಾನಗಳು ಮತ್ತು ವೇದಗಳ ವಿವರಗಳು.

ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯುವಿಕೆಯು ವ್ಯಾಹೃತಿಗಳ ಉಪಾಸನೆ ಎನಿಸುವುದು.

ಯೋಗಶಾಸ್ತ್ರದ ಪ್ರಕಾರ ಪ್ರಾಣಾಯಾಮವು 'ಪೂರಕ', 'ಕುಂಭಕ' ಮತ್ತು 'ರೇಚಕ'ಗಳೆಂಬ ಮೂರು ಕ್ರಿಯೆಗಳಿಂದ ಕೂಡಿರುತ್ತದೆ. ಇವುಗಳ ಪೈಕಿ ಕುಂಭಕಕ್ಕೆ ಸರ್ವಪ್ರಾಧಾನ್ಯ. ಈ ಮೂರು ಕ್ರಿಯೆಗಳಲ್ಲಿ ಪೂರಕವು

ಉಚ್ಛ್ವಾಸರೂಪವಾದುದು. ಹೊರಗಿನ ಗಾಳಿಯನ್ನು ಎಳೆದುಕೊಂಡು ಶ್ವಾಸಕೋಶಗಳಲ್ಲಿ ತುಂಬುವುದು 'ಪೂರಕ.' ಪೂರಕವನ್ನು ಮಾಡಿದನಂತರ ಪ್ರಾಣವನ್ನು ತಡೆದು ನಿಲ್ಲಿಸುವುದೇ 'ಕುಂಭಕ.' ಕುಂಭ(ಕೊಡ)ದಲ್ಲಿಟ್ಟ ನೀರು ತನ್ನ ಚಲನಶಕ್ತಿಯನ್ನು ಕಳೆದುಕೊಳ್ಳುವಂತೆ, ಚಲಿಸುವ ಸ್ವಭಾವ ವುಳ್ಳ ವಾಯುವನ್ನು ಚಲಿಸದಿರುವಂತೆ ಮಾಡುವುದರಿಂದ ಕುಂಭಕಕ್ಕೆ ಈ ಹೆಸರುಬಂದಿದೆ. ಕುಂಭಕದಲ್ಲಿ ಉಚ್ಛ್ವಾಸ, ನಿಃಶ್ವಾಸಗಳಿರಬಾರದು;ಶರೀರದ ಅವಯವಗಳು ಚಲಿಸಬಾರದು ; ಯಾವ ರೂಪವನ್ನೂ ಕುರಿತು ಚಿಂತಿಸ ಬಾರದು, ಶಬ್ದಸಂಚಾರಗಳಿರಬಾರದು. ಕುಂಭಕವನ್ನು ಮಾಡಿದ ನಂತರ ವಾಯುವನ್ನುಹೊರಕ್ಕೆಬಿಡುವುದು 'ರೇಚಕ'ವೆನಿಸಿಕೊಳ್ಳುವುದು. ಪ್ರಾಣಾ ಯಾಮದ ಈ ಮೂರು ಕ್ರಿಯೆಗಳು ಕ್ರಮವಾಗಿ ಒಂದು, ನಾಲ್ಕು ಮತ್ತು ಎರಡು ಪ್ರಮಾಣದಲ್ಲಿರಬೇಕೆಂದು ಯೋಗಶಾಸ್ತ್ರವು ಬೋಧಿಸುತ್ತದೆ. 16 : 64 : 32 ಮಾತ್ರೆ(ಮೂರರಿಂದ ನಾಲ್ಕು ಸೆಕೆಂಡುಗಳ ಕಾಲಕ್ಕೆ ಒಂದು ಮಾತ್ರೆ ಎಂದು ಹೆಸರು)ಗಳ ಕಾಲದ ಪ್ರಾಣಾಯಾಮವನ್ನು ಮಾಡುವುದು ಪ್ರಮಾಣಬದ್ಧವಾಗಿದೆ. ಸಂಧ್ಯಾಕಾಲಗಳಲ್ಲಿ ಉಸಿರು ಸಹಜವಾಗಿ 'ಸುಷುಮ್ನಾ' ನಾಡಿಯ ಕಡೆಗೆ ಹರಿಯುತ್ತದೆ. ಆದುದರಿಂದ ಸೂರ್ಯೋ ದಯ ಕಾಲ, ಮಧ್ಯಾಹ್ನ ಕಾಲ, ಮತ್ತು ಸಾಯಂಕಾಲ ಹಾಗೂ ಮಧ್ಯ ರಾತ್ರಿಗಳು ಅಭ್ಯಾಸಕ್ಕೆ ಪ್ರಶಸ್ತವಾದ ಕಾಲಗಳೆಂದು ಹೇಳಿರುವುದು ಶಾಸ್ತ್ರ ಸಮ್ಮತವಾಗಿದೆ. ಪ್ರಾಣಾಯಾಮದ ಉದ್ದೇಶವು ಒಂದು ಕಡೆ ನಾಡಿಗಳನ್ನು ಶುದ್ಧಮಾಡಿ ಉಸಿರು ಜ್ಞಾನಮಾರ್ಗಕ್ಕೆ ಪ್ರವೇಶಿಸಲು ದಾರಿಮಾಡಿಕೊಡು ವುದೇ ಆಗಿದೆ. ಶರೀರದ ಮರ್ಮವನ್ನರಿತು ಎಲ್ಲೆಲ್ಲಿ (ಮೂಲಾಧಾರ, ಮಣಿ ಪೂರಕ, ಹೃದಯ, ಕಂಠಮೂಲ, ತಾಲು, ಭ್ರೂಮಧ್ಯ, ಲಲಾಟ ಮತ್ತು ಮೂರ್ಧ) ವಾಯುವನ್ನು ಧರಿಸುತ್ತಾಹೋದರೆ ಅಲ್ಲಲ್ಲಿ ಮನಸ್ಸು ವಾಯು ವನ್ನು ಹಿಂಬಾಲಿಸುತ್ತದೆ. ವಾಯುವು ಸಂಚರಿಸದೆ ನಿಶ್ಚಲವಾಗಿದ್ದಾಗ ಮನಸ್ಸು ಸಹಾ ನಿಶ್ಚಲವಾಗಿ ಏಕಾಗ್ರತೆಯನ್ನು ಪಡೆಯುತ್ತದೆ. ಉಸಿರು ನಿಲುಗಡೆಯ ಸ್ವಭಾವಕ್ಕೆ ಬಂದಾಗ ಮನಸ್ಸಿಗೆ ಧ್ಯಾನಮಾಡುವ ಮತ್ತು ದೇವತಾಭಾವವನ್ನುಧರಿಸುವ ಅರ್ಹತೆಯುಂಟಾಗುವುದು. ಪ್ರಾಣೇಂದ್ರಿಯ ಗಳಿಗೆ ಮನಸ್ಸು ಯಜಮಾನನಾದುದರಿಂದ ಮನಸ್ಸು ನಿಂತ ಸ್ಥಳದಲ್ಲಿ ಪ್ರಾಣೇಂದ್ರಿಯಗಳ ಶಕ್ತಿಯೂ ಮನಸ್ಸಿನೊಡನೆ ನಿಲ್ಲುವುದು. ಪ್ರಾಣವು ಪರಮಾತ್ಮನಲ್ಲಿ ಲೀನವಾಗುವವರೆಗೂ ಪ್ರಾಣ ನಿರೋಧಿಸಿ ಪ್ರಾಣಾಯಾಮ

ಮಾಡಬೇಕು. ವಾಯುವು ಸಂಚರಿಸುತ್ತಿರುವಾಗ ಮನಸ್ಸೂ ಸಹ ಚಂಚಲ ವಾಗಿಯೂ, ಅಸ್ಥಿರವಾಗಿಯೂ ಇರುತ್ತದೆ. ವಾಯುವು ಮಧ್ಯನಾಡಿ 'ಸುಷುಮ್ನಾ'ದಲ್ಲಿ ಸಂಚರಿಸಲು ಆರಂಭವಾದಾಗ ಮನಸ್ಸಿನಲ್ಲಿ ಸ್ಥೈರ್ಯ ಉಂಟಾಗುತ್ತದೆ. ಮನಸ್ಸಿನಲ್ಲಿ ಯಾವುದು ಸುಸ್ಥಿರೀಭಾವವೋ ಅದೇ 'ಮನೋನ್ಮನೀ' ಎಂದರೆ ಜ್ಞಾನದ ಅವಸ್ಥೆ. ಆದುದರಿಂದ ವಾಯುವನ್ನು ಹತೋಟಿಗೆ ತೆಗೆದುಕೊಂಡು ಮನುಷ್ಯನು ತನ್ನ ಹೃದಯದಲ್ಲಿರುವ ಸ್ವಾಮಿ ಯನ್ನು ಪ್ರತ್ಯಕ್ಷಮಾಡಿಕೊಳ್ಳಬಹುದು ಎಂಬುದೇ ಪ್ರಾಣಾಯಾಮದ ಮೂಲದಲ್ಲಿರುವ ಗುರಿ. ಮನಸ್ಸಿನ ಏಕಾಗ್ರತೆಯು ಹೆಚ್ಚಿದಷ್ಟೂ ಜ್ಞಾನವೂ ಹೆಚ್ಚುವುದು. ಜ್ಞಾನಸಂಗ್ರಹಕ್ಕೆ ಇದೊಂದು ಮಾರ್ಗ. ಏಕಾಗ್ರತೆ ಎಂಬ ಶಕ್ತಿಯೊಂದೇ ಜ್ಞಾನದ ಭಂಡಾರವನ್ನು ತೆಗೆಯುವ ಬೀಗದಕೈ. ಕಾರಣ ಈ ಮನಸ್ಸು ದೇವಾಸುರರ ನಿತ್ಯ ಸಂಗ್ರಾಮ ಸ್ಥಳ.

## ಸಂಕಲ್ಪ

ಇದೊಂದು ಮಾನಸಿಕ ಕ್ರಿಯೆ. ಯಾವ ಕಾರ್ಯವನ್ನೂ ಪ್ರಾರಂಭಿಸು ವುದಕ್ಕೆ ಮೊದಲು ನಾವು ಮಾಡಬೇಕೆಂದಿರುವ ಕಾರ್ಯವನ್ನು ಚೆನ್ನಾಗಿ ಅರಿತುಕೊಂಡು, ಅದರ ಪೂರ್ವಾಪರಗಳನ್ನು ವಿವೇಚನೆಯಿಂದ ಚೆನ್ನಾಗಿ ವಿಮರ್ಶಿಸಿ, ಅದರ ಫಲಾಫಲಗಳನ್ನು ನಮ್ಮಲ್ಲಿ ಅಂತರ್ಯಾಮಿಯಾಗಿರುವ ಯಾವ ದೇವನ ಪ್ರೇರಣೆಯಿಂದ ಉಂಟಾಯಿತೋ ಆ ಶಕ್ತಿಯ ಪ್ರೀತಿಗಾಗಿ ಸದುದ್ದೇಶ, ಸದಿಚ್ಛೆ, ಸದಭಿಪ್ರಾಯಗಳನ್ನು ಹೊಂದಿ, ಪವಿತ್ರ ಇಚ್ಛೆಯಿಂದ, ಮನಃಪೂರ್ವಕವಾದ ಬಯಕೆಯಿಂಡ, ಮಾಡುವ ವಿವೇಕಪೂರ್ಣ, ಶುದ್ಧ ನಿರ್ಧಾರವೇ 'ಸಂಕಲ್ಪ'ವೆನಿಸಿಕೊಳ್ಳುವುದು. ತಾನು ಮಾಡಬೇಕೆಂದಿರುವ ಕಾರ್ಯಕ್ಕೆ ದೃಢಆದರೂ ಸಮ್ಮತಿಯ ಪ್ರತಿಜ್ಞೆ ಮಾಡುವುದಕ್ಕೆ 'ಸಂಕಲ್ಪ' ಎನ್ನುವರು. ಕರ್ಮವನ್ನು ನಾವು ಯಾವ ಉದ್ದೇಶದಿಂದ ಮಾಡುತ್ತೇವೆಯೋ ಆ ಉದ್ದೇಶವೂ ಕೂಡ ಸಂಕಲ್ಪದಲ್ಲಿ ಬರುವುದು. 'ಉಪಾಸಿಷ್ಯೇ' ಎಂದರೆ ಉಪಾಸನೆ ಮಾಡಲು ಸಿದ್ಧರಿಸಿದ್ದೇನೆ ಎಂದು. ನಮಗೆ ಪ್ರಾಪ್ತವಾಗುವ ದುರಿತ(ಕಷ್ಟ-ಪಾಪ)ಗಳನ್ನು ಹೋಗಲಾಡಿಸಿಕೊಳ್ಳುವುದಕ್ಕೋಸ್ಕರವಾ ಗಿಯೂ, ಪರಮೇಶ್ವರನ ಪ್ರೀತ್ಯರ್ಥವಾಗಿಯೂ, ಆತನ ಅಪ್ಪಣೆಯಿಂದಲೇ ಈ ಕರ್ಮವನ್ನು ಮಾಡುತ್ತಿದ್ದೇನೆಂಬ ಸದ್ಭಾವನೆಯಿಂದ ಮಾಡಿಕೊಳ್ಳುವ ಮನೋನಿಶ್ಚಯವೇ ನಾವು ಇಲ್ಲಿ ಮಾಡಬೇಕಾದ ಸಂಕಲ್ಪ. ಕಾಮ್ಯಕರ್ಮ

ಗಳಿಗೆ ಇದು ಅಗತ್ಯ. ಸಂಕಲ್ಪವಿಲ್ಲದಿದ್ದರೆ ಎಲ್ಲವೂ ನಿಷ್ಫಲ. ಆತ್ಮಶ್ರೇಯಸ್ಸಿಗೆ ವಿಘ್ನಕಾರಿಗಳಾದ ಪಾಪಗಳನ್ನು ಕರ್ಮದಿಂದ ಪರಿಹರಿಸಿಕೊಳ್ಳಬೇಕು. ಆದುದರಿಂದ ಆತ್ಮಶ್ರೇಯಸ್ಸಿನ ಉದ್ದೇಶದಿಂದ ಕರ್ಮಮಾಡಬೇಕೆಂಬುದೇ ಸಂಕಲ್ಪದ ತತ್ತ್ವವಾಗಿರುವುದು. ನಮ್ಮ ಪಾಪಗಳು ನಾಶವಾಗಿ, ಪರಮಾತ್ಮ ಪ್ರೀತಿಯಾಗುವುದೆಂದರೆ ಅಜ್ಞಾನಗಳು ನಶಿಸಿ ಆತ್ಮಲಾಭ ಉಂಟಾಗಲೆಂಬ ತತ್ತ್ವವಾಗಿರುವುದು. 'ಧರ್ಮಾರ್ಥಕಾಮಮೋಕ್ಷ ಚತುರ್ವಿಧಫಲ ಪುರುಷಾರ್ಥ ಸಿದ್ಧ್ಯರ್ಥಂ' ಎಂಬುದಾಗಿ ಇತರ ಕರ್ಮಗಳಲ್ಲಿ ಹೇಳುವುದ ರಲ್ಲಿಯೂ ಮೋಕ್ಷದ ಗುರಿಯೇ ಪ್ರಧಾನವಾಗಿರುವುದು. ಸಂಕಲ್ಪ ಒಂದು ನಿಷ್ಕಾಮ ಪ್ರಾರ್ಥನೆ (ಮನುಧರ್ಮಶಾಸ್ತ್ರ-ಅಥರ್ವ). ಸಂಕಲ್ಪ ಮಾತ್ರ ದಿಂದಲೇ ಜಗತ್ತು ಹುಟ್ಟಿತು; ಸಂಕಲ್ಪಮಾತ್ರದಿಂದಲೇ ಜಗತ್ತಿನ ವಿಲಾಸವು ನಡೆಯುತ್ತಿರುವುದು ಎಂದು ವರಾಹೋಪನಿಷತ್ತು ವಿವರಿಸು ತ್ತದೆ. ಸಂಕಲ್ಪವೇ ಪ್ರವೃತ್ತಿ ಮತ್ತು ನಿವೃತ್ತಿ ಮಾರ್ಗಗಳೆರಡಕ್ಕೂ ಮೂಲ ಕಾರಣವಾಗಿರುವುದು. ಅಲ್ಲದೆ ಸೃಷ್ಟಿ-ಸ್ಥಿತಿ-ಲಯಗಳಿಗೆ ಇದೇ ಕಾರಣವಾ ಗಿರುವುದು. ಸಂಕಲ್ಪವು ಮನೋಮಯಕೋಶದಲ್ಲಿ ಉದಯವಾಗುವುದು ಮತ್ತು ಹತ್ತು ಇಂದ್ರಿಯಗಳಿಗೂ ಅಧ್ಯಕ್ಷತೆಯನ್ನು ವಹಿಸುವುದು ಎಂದು ವಿದ್ಯಾರಣ್ಯರು ಹೇಳಿರುವರು.

## ನ್ಯಾಸ

ನ್ಯಾಸವೆಂದರೆ 'ಬಚ್ಚಿಡುವುದು', 'ಸ್ಥಾಪಿಸುವುದು', 'ತ್ಯಾಗ' ಎಂದರ್ಥ. ನಾವು ಮಾಡುವ ಧ್ಯಾನವು ಪೂರ್ಣವಾಗುವವರೆಗೆ 'ನಾನು'ಎಂಬುದಕ್ಕಿಂತ ಬೇರೆಯಾದ ಈ ದೇಹವನ್ನು ಎಲ್ಲಿಯೋ ಬಚ್ಚಿಡುವಂತೆ ಭಾವಿಸಿ 'ನಾನು' ಎಂಬುದು ಮಂತ್ರಮೂರ್ತಿವತ್ತಾಗಿ ಪ್ರಕಾಶಿಸುತ್ತಿರಬೇಕೆಂಬುದೇ ನ್ಯಾಸದ ತತ್ತ್ವ. ಆಯಾ ದೇವತೆಗಳನ್ನು ಆಯಾ ಅವಯವಗಳಲ್ಲಿ ಸ್ಥಾಪಿಸಿ ಧ್ಯಾನ ಮಾಡುವುದು ಅಂದರೆ ಪರಮಾತ್ಮನಲ್ಲಿ ವಿಶ್ವಾಸವನ್ನಿಡುವುದು ಎಂದರ್ಥ. ಜಪಿಸುವವನು ತನ್ನ ದೇಹದ ವಿವಿಧ ಭಾಗಗಳ ಮೇಲೆ ಕೈಯಿರಿಸಿ (ಹಸ್ತದಲ್ಲಿ ಸಕಲ ದೇವತಾ ಶಕ್ತಿಗಳೂ ಅಡಗಿರುವುದರಿಂದ) ಆ ಭಾಗಗಳ ಮೇಲೆ ದೇವತೆಯು ಆ ಭಾಗಗಳನ್ನು ಇರಿಸುತ್ತಿದ್ದೇನೆ ಎಂದು ಕಲ್ಪಿಸಿಕೊಂಡು, ದೇವತೆಯನ್ನು ಆಯಾ ಭಾಗದಲ್ಲಿರಲು ಪ್ರಾರ್ಥಿಸುವುದೇ ಈ ನ್ಯಾಸ. (ಶಾಸ್ತ್ರದಲ್ಲಿ ನಿರ್ದಿಷ್ಟವಾದ ಅಂಗಗಳೇ ವಿನಾ ಸ್ವೇಚ್ಛೆಯಿಂದ ಕಲ್ಪಿಸುವ ಅಂಗ

ಗಳಲ್ಲ). ಮಂತ್ರ ಖಂಡಗಳನ್ನು ಶರೀರದ ಬೇರೆಬೇರೆ ಆರು ಅಂಗಸ್ಥಾನಗಳಲ್ಲಿ ಆವಾಹಿಸುವುದರಿಂದ ಇದಕ್ಕೆ 'ಅಂಗನ್ಯಾಸ'ವೆಂದೂ, ಇದೇ ಮಂತ್ರಖಂಡ ಗಳನ್ನು ಕೈಗಳಲ್ಲಿರುವ ಐದು ಬೆರಳುಗಳು ಮತ್ತು ಆರನೆಯದಾದ ಅಂಗೈ–ಮುಂಗೈಗಳು ಇವುಗಳಲ್ಲಿ ಆವಾಹಿಸುವುದಕ್ಕೆ 'ಕರನ್ಯಾಸ'ವೆಂದೂ ಹೆಸರು. ಈ ಎರಡು ನ್ಯಾಸ ವಿಧಿಗಳಲ್ಲಿಯೂ ಮಂತ್ರಖಂಡಗಳನ್ನು ಆರು ಆರು ಬೇರೆ ಬೇರೆ ಭಾಗಗಳಲ್ಲಿ ನ್ಯಾಸ ಮಾಡುವುದರಿಂದ ಇದಕ್ಕೆ 'ಷಡಂಗನ್ಯಾಸ' ವಿಧಿ ಎಂದು ಹೆಸರು. ಜಪಕ್ಕೆ ಯೋಗ್ಯವಾದ ಪ್ರತಿಮಂತ್ರ ಒಂದೊಂದು ದೇಹವನ್ನು ಕಲ್ಪಿಸುವುದರಿಂದ ಆ ಮಂತ್ರದ ನಿರ್ದಿಷ್ಟವಾದ ಖಂಡಗಳನ್ನು ಆಯಾ ದೇಹ ಭಾಗಗಳಲ್ಲಿ ನ್ಯಾಸ ಮಾಡುತ್ತಾ ಆ ಮಂತ್ರವನ್ನು ತನ್ನಲ್ಲಿಯೇ ಅಳವಡಿಸಿಕೊಳ್ಳುವುದರ ಮೂಲಕ ಮಂತ್ರಶರೀರಕ್ಕೂ ತನ್ನ ಶರೀರಕ್ಕೂ ಭೇದವಿಲ್ಲವೆಂದು ಕಲ್ಪಿಸಿಕೊಳ್ಳುವುದೇ, ಅಂದರೆ ಈ ಎರಡೂ ಶರೀರಗಳೂ ಒಂದೇ ಎಂದು ಭಾವಿಸುವುದೇ ಮಂತ್ರ ಖಂಡಗಳನ್ನು ಹೇಳುತ್ತಾ ಆಯಾ ಅಂಗಗಳನ್ನು ಸ್ಪರ್ಶಿಸುವುದರ ಉದ್ದೇಶ. ಎಲ್ಲಾ ಮಂತ್ರಗಳ ಜಪದ ಪ್ರಾರಂಭದಲ್ಲಿ ನ್ಯಾಸ ಮಾಡಬೇಕೆಂಬುದು ವಿಧಿ. ಆದರೆ ಆ ಮಂತ್ರಗಳನ್ನು ತುಂಡು ಮಾಡುವಾಗ ಆಯಾ ಕಲ್ಪಗಳಿಂದ ತಿಳಿದು ಮಾಡಬೇಕು ಅಥವಾ ಗುರುಮುಖೇನ ತಿಳಿಯಬೇಕು. ಗಾಯತ್ರೀ ಮಂತ್ರದ ಆರು ಖಂಡಗಳ ಆಯಾಯಾ ಅಂಗಗಳನ್ನು ತನ್ನಲ್ಲಿಯೇ ಆವಾಹಿಸಿ (ನ್ಯಾಸಮಾಡಿ) ಮೊದಲೇ ತನ್ನಲ್ಲಿ ಆ ದೇವಿಯನ್ನು ಆವಾಹಿಸಿಕೊಂಡಿರುವು ದರಿಂದ ಆ ಮಂತ್ರದ ರೂಪವನ್ನೇ ತಾನೆಂದು ಭಾವಿಸಬೇಕು. ಮಂತ್ರ ಶರೀರಕ್ಕೂ, ತನ್ನ ಶರೀರಕ್ಕೂ ಅಭೇದಭಾವವನ್ನು ಬೆಳೆಸಿಕೊಳ್ಳುವುದೇ ನ್ಯಾಸದ ರಹಸ್ಯ. ದೇಹದ ಜಡತ್ವವನ್ನು ನೀಗಿಸಿ ದಿವ್ಯತತ್ತ್ವದ ದೇವತಾ ಸ್ವರೂಪವನ್ನು ಶರೀರಕ್ಕೆ ತುಂಬುವುದೇ ನ್ಯಾಸದ ಮುಖ್ಯ ಗುರಿ. ಪ್ರತಿ ಯೊಂದು ವಸ್ತುವನ್ನೂ ಪರಮಾತ್ಮನ ಅಧೀನವೆಂದು ಚಿಂತಿಸಬೇಕೆಂಬುದು ನ್ಯಾಸ ಶಬ್ದದ ಮುಖ್ಯ ಅರ್ಥ. ತತ್ತ್ವಾಭಿಮಾನಿ ದೇವತೆಗಳು ತನ್ನ ದೇಹದ ವಿವಿಧ ಭಾಗಗಳ ಅಧಿಪತಿಗಳಾಗಿರುವುದನ್ನು ಚಿಂತಿಸಿ, ತನ್ನನ್ನು ಅವರ ಅಧೀನನೆಂದೂ, ಅವರೆಲ್ಲರೂ ಭಗವಂತನ ಅಧೀನರೆಂದೂ ಚಿಂತಿಸಬೇಕು. ಇದು ದೇವತೆಗಳು ತನ್ನ ವಿಷಯದಲ್ಲಿ ಅನುಗ್ರಹೋನ್ಮುಖವಾಗುವುದಕ್ಕೂ, ಪ್ರತಿಮಾಗತ ಭಗವಂತನು ತನ್ನತ್ತ ಅನುಗ್ರಹೋನ್ಮುಖವಾಗುವುದಕ್ಕೂ ಕಾರಣವಾಗುತ್ತದೆ. ಈ ದೇಹವು ನಾನಲ್ಲವೆಂಬ ಭಾವನೆಯನ್ನು ತಂದು

ಕೊಂಡು ಉಪಾಸನೆ ಮಾಡತಕ್ಕ ದೇವತಾ ಸ್ವರೂಪದ ಪಾದಾರವಿಂದ ಗಳಲ್ಲಿಯೇ ಸೇರಿಹೋಗುವೆನೆಂಬ ಭಾವನೆಯಿಂದ ಉಪಾಸನೆ ಮಾಡುವ ವರೆಗೂ ಎಡಬಿಡದೆ ದೇವತಾಸ್ವರೂಪದ ಭಾವವನ್ನು ಇಟ್ಟುಕೊಂಡಿರ ಬೇಕಾಗುವುದು. ಅಂಗನ್ಯಾಸ ಮತ್ತು ಕರನ್ಯಾಸಗಳೆಂದರೆ ದೇಹ ಮತ್ತು ದೇಹದ ವ್ಯಾಪಾರ ಭಾವನೆಯ ತ್ಯಾಗವೆಂದು ಅರ್ಥ. ದೇಹದ ಅಂಗಾಂಗ ಗಳು ನಿಶ್ಚಲವಾಗಿರುವುದಕ್ಕೂ, ರಕ್ತ, ಮಾಂಸ ಮತ್ತು ಮೇದೋಮಯ ವಾದ ಈ ದೇಹಭಾವವನ್ನು ತ್ಯಜಿಸಿ ನಾವು ಮಾಡುವ ಧ್ಯಾನವು ಪೂರ್ಣ ವಾಗುವವರೆಗೆ ಮಂತ್ರಮಯವಾದ ದೇಹವಿರುತ್ತೆಂದು ಭಾವಿಸಿಕೊಳ್ಳು ವುದೇ ನ್ಯಾಸದಲ್ಲಿರುವ ತತ್ತ್ವವಾಗಿರುವುದು.

### ದಿಗ್ಬಂಧನ

ದಿಗ್ಬಂಧನವೆಂದರೆ ದಿಕ್ಕುಗಳ ಬಂಧನವೆಂದರ್ಥ. ಹತ್ತು ಇಂದ್ರಿಯಗಳೇ ಹತ್ತು ದಿಕ್ಕುಗಳು. ಈ ಇಂದ್ರಿಯಗಳ ಮೂಲಕ ನಮ್ಮ ಬುದ್ಧಿಯು ವಿಷಯಾದಿಗಳಲ್ಲಿ ಪ್ರವೇಶಿಸದಂತೆ ತಡೆಯುವುದೇ ದಿಗ್ಬಂಧನವೆನ್ನುವುದರ ಮುಖ್ಯಾರ್ಥ. ಧ್ಯಾನ ಮಾಡುವಾಗ ನಿಶ್ಚಲತೆ ಇರಬೇಕು. ಭಕ್ತಿಯ ಸ್ವರೂಪ ವಾದ ಹಗ್ಗದಿಂದ ಇಂದ್ರಿಯಾಕರ್ಷಕಗಳಾದ ಹೊರಗಿನ ವಿಷಯಗಳಿಗೆ ಗಮನ ಕೊಡದೆ ಜಪ ಮಾಡುವ ದೇವತಾಭಾವನೆಯಲ್ಲಿರುವಂತೆ ಬಂಧಿಸುವ ತತ್ತ್ವವೇ 'ದಿಗ್ಬಂಧನ'ವೆನ್ನುವುದರ ಮತ್ತು 'ಧ್ಯಾನ'ದ ತತ್ತ್ವವಾಗಿರು ವುದು.

## ಶ್ರೀ ತುರೀಯ ಗಾಯತ್ರೀ ಜಪಕ್ರಮ

'ಪರೋರಜಸಿ ಸಾವದೋಮ್' ಎಂಬುದು ಗಾಯತ್ರಿಯ ನಾಲ್ಕನೇ ಪಾದ. ಸೂರ್ಯ ಮಂಡಲದೊಳಗೆ ಯಾವನು ಬೆಳಗುತ್ತಿದ್ದಾನೆಯೋ ಅವನೇ ನಾಲ್ಕನೆಯ ಪಾದದ ದರ್ಶ, ಪರೋರಜಾ ಎಂಬ ಪಾದವು. ಈ ಪಾದ ವನ್ನು 'ತುರೀಯ' ಎಂದು ಕರೆಯುವರು. ಆದಿತ್ಯ ಮಂಡಲಸ್ಥ ಪುರುಷನು ದೃಶ್ಯಮಾನನಾದುದರಿಂದ ಅವನು 'ದರ್ಶಕ' ಆಗಿದ್ದಾನೆ. 'ಪರೋರಜಾಃ' ಎಂದರೆ ಎಲ್ಲಾ ಲೋಕಗಳಿಗಿಂತಲೂ ಅತ್ಯಂತ ಮೇಲೆ ಇದ್ದು ಪ್ರಕಾಶಿಸು ವವನು. ಇಂತಹ ಆದಿತ್ಯ ಮಂಡಲಸ್ಥ ಪುರುಷನೇ ಗಾಯತ್ರಿಯ ನಾಲ್ಕನೆಯ

ವಾದವಾಗಿದ್ದಾನೆ ; ಸರ್ವಮೂಲಕಾರಣವಾದ ಪರಬ್ರಹ್ಮವನ್ನು ಪ್ರತಿಬಿಂಬಿಸುತ್ತಾನೆ.

ಗಾಯತ್ರಿಯ ಮೊದಲ ಮೂರು ಪಾದಗಳು ಶಬ್ದಾತ್ಮಕವಾಗಿವೆ. ನಾಲ್ಕನೇ ಪಾದವು ಶಬ್ದಾತ್ಮಕವಾದುದಲ್ಲ. ಇದು ದರ್ಶನಕ್ಕೆ ಗೋಚರವಾಗುವಂತಹುದು. ಇದು ಎಲ್ಲಾ ಲೋಕಗಳ ಆಧಿಪತ್ಯವನ್ನು ಹೊಂದಿ ಅತ್ಯಂತ ಮೇಲೆ ಪ್ರಕಾಶಿಸುತ್ತದೆ. ಆ ಪುರುಷನೇ ಜ್ಯೋತಿರ್ಮಯನು ; ಒಳಗೂ, ಹೊರಗೂ ಬೆಳಕಿನ ರೂಪದಿಂದ ಕಾಣುವವನು. ಗಾಯತ್ರೀ ಮಂತ್ರದಿಂದ ಉಪಾಸ್ಯವಾದ 'ಭರ್ಗ' ಅಂದರೆ ತೇಜಸ್ಸು ಇದೆ. ಶಬ್ದಮಯವಾದ ಮಂತ್ರಭೂಮಿಯನ್ನು ದಾಟಿ ಈ ಜ್ಯೋತಿರ್ಮಯ ತತ್ತ್ವವನ್ನು ಕಾಣಬೇಕು. ಇದನ್ನು ಕಾಣುವುದೇ ಗಾಯತ್ರಿಯ ಉಪಾಸನೆಯ ಸಿದ್ಧಿ. ಉಪಾಸಕರ ಶುದ್ಧ ಬುದ್ಧಿಯನ್ನು ಪ್ರಚೋದಿಸುವುದು ತುರೀಯ ಪದದ ಈ ತೇಜಸ್ಸೇ. ಅಸಾವಾದಿತ್ಯೋ ಬ್ರಹ್ಮ' ಎಂದು ಭಾವಿಸುವುದು ಈ ಪರಂಜ್ಯೋತಿಯನ್ನೇ. ಗಾಯತ್ರಿಯ 'ದರ್ಶ, ಪರೋರಜಾಃ' ಎಂಬ ನಾಲ್ಕನೆಯ ಪಾದದ ಉಪಾಸನೆಯಿಂದ ಈ ಸಿದ್ಧಿಯನ್ನು ಸಾಧಿಸಿದವನು ಆದಿತ್ಯನು ಕಾಂತಿಯಿಂದ ಮತ್ತು ಖ್ಯಾತಿಯಿಂದ ಬೆಳಗುವಂತೆ ಬೆಳಗುತ್ತಾನೆ. ಇದೇ ದಿವ್ಯವಾದ ಬ್ರಹ್ಮತೇಜಸ್ಸು ಜೀವನವನ್ನೇ ಪರಿಶುದ್ಧಗೊಳಿಸುವ ಗಾಯತ್ರೀ ಬ್ರಹ್ಮತೇಜಸ್ಸು. ಗಾಯತ್ರಿಯ ಮೊದಲ ಮೂರು ಪಾದಗಳ ತತ್ತ್ವವನ್ನೂ ಆದಿತ್ಯನು ಈ ನಾಲ್ಕನೆಯ ಪಾದದಲ್ಲಿ ಬೆಳಗಿಸುತ್ತಾನೆ. ಇದೇ ಸತ್ಯಲೋಕ.

ಈ ನಾಲ್ಕನೆಯ ಪಾದವನ್ನೂ ಸೇರಿಸಿ ಗಾಯತ್ರಿಯನ್ನು ಸರಿಯಾಗಿ ಉಚ್ಚರಿಸಿದರೆ ಅದು ಸರ್ವ ಶಸ್ತ್ರಾಸ್ತ್ರಗಳನ್ನೂ ಭಕ್ಷಿಸುವಂತಹ ಬ್ರಹ್ಮದಂಡವಾಗುವುದು. ವಸಿಷ್ಠರ ಬ್ರಹ್ಮದಂಡದ ಶಕ್ತಿಯ ಪ್ರಭಾವದಿಂದ ಶೋಕವೆಲ್ಲಾ ತತ್ತರಿಸಿ ಹೋಯಿತು. ವಿಶ್ವಾಮಿತ್ರರು ಗಾಯತ್ರೀ ಬ್ರಹ್ಮವಿದ್ಯೆಯ ಮಹತ್ತ್ವವನ್ನು ಅರಿತು, ಅನುಭವಿಸಿ, ಅದರ ವಿಶೇಷ ಪ್ರಕಾಶಕ್ಕೆ ದ್ವಾರಭೂತರಾದ ಬ್ರಹ್ಮರ್ಷಿಯಾದರು.

ಈ ತುರೀಯ ಪದವು ಸತ್ಯದಲ್ಲಿ ಪ್ರತಿಷ್ಠಿತವಾಗಿದೆ. ಚಕ್ಷುಸ್ಸೆ (ಕಣ್ಣೇ) ಸತ್ಯ; ಏಕೆಂದರೆ ಚಕ್ಷುಸ್ಸು ಸತ್ಯವೆಂದು ಪ್ರಸಿದ್ಧವಾಗಿದೆ. ಈ ಸತ್ಯವು ಬಲದಲ್ಲಿ ಪ್ರತಿಷ್ಠಿತವಾಗಿದೆ. ಪ್ರಾಣವೇ ಬಲ. ಹಾಗಾಗಿ ಸತ್ಯವು ಪ್ರಾಣದಲ್ಲಿ ಪ್ರತಿಷ್ಠಿತವಾಗಿದೆ. ಆದುದರಿಂದಲೇ ಸತ್ಯಕ್ಕಿಂತಲೂ ಬಲವು ಹೆಚ್ಚು ಓಜಸ್ವಿಯಾದುದು ಎಂದು ಹೇಳುತ್ತಾರೆ.

ಈ ಬ್ರಹ್ಮಜ್ಯೋತಿಯ ಅನುಗ್ರಹದಿಂದಲೇ ಸಂಪೂರ್ಣ ಜಗದ್ವ್ಯಾಪಾರವು ನಡೆಯುತ್ತಿರುವುದು. ಮೂರ್ತಾಮೂರ್ತಾತ್ಮಕವಾದ ಜಗತ್ತೆಲ್ಲವನ್ನೂ ವ್ಯಾಪಿಸಿ ತ್ರಿಪಾದಾತ್ಮಕವಾಗಿರುವ ಗಾಯತ್ರಿಯು ತನ್ನ ಸಾರವೂ, ತುರೀಯ ಪದವೂ ಆದ ಆದಿತ್ಯಾಂತರ್ಗತ ಪರಂಜ್ಯೋತಿಯಲ್ಲಿ ನೆಲೆಸಿದೆ. ಈ ತುರೀಯ ಪದವು ಸತ್ಯದಲ್ಲಿ ನೆಲಸಿದೆ. ಈ ತತ್ತ್ವವನ್ನು ಉಪಾಸಕನು ಅಧ್ಯಾತ್ಮ ಭೂಮಿಯಲ್ಲಿ ಮನಗಾಣಬೇಕಾಗಿದೆ.

'ಸ ಆದಿತ್ಯಃ ಕಸ್ಮಿನ್ ಪ್ರತಿಷ್ಠಿತ ಇತಿ ಚಕ್ಷುಷೀತಿ' ಅಂದರೆ ಆ ಆದಿತ್ಯನು ಕಣ್ಣಿನಲ್ಲಿ ನೆಲಸಿದ್ದಾನೆ. ಕಣ್ಣಿನಲ್ಲಿರುವ ಪುರುಷನು ಆದಿತ್ಯ ಜ್ಯೋತಿಯೇ ಆಗಿದ್ದಾನೆ. ಇದನ್ನು ಒಳಗಣ್ಣಿನಿಂದ ದರ್ಶನ ಮಾಡಬೇಕು.

ಜ್ಞಾನವೆಂಬ ಸೂರ್ಯನು ನಮ್ಮ ಹೃದಯದಲ್ಲಿ ಮೂಡಿ, ಅಲ್ಲಿರುವ ಪಾಪಗಳನ್ನು ದಹಿಸಿ, ಅಜ್ಞಾನವೆಂಬ ಅಂಧಕಾರವನ್ನು ತೊಲಗಿಸುತ್ತಾನೆ. ಮೊದಲ ಮೂರು ಪಾದಗಳಿಗೆ ಸೇರಿದ ಕಾರ್ಯರೂಪವಾದ ಪ್ರಪಂಚವು ಲೌಕಿಕವಾದ ಬುದ್ಧಿಗೆ ಗ್ರಾಹ್ಯವಾಗುತ್ತದೆ. ತುರೀಯ ಪಾದದಿಂದ ಪ್ರತಿಪಾದ್ಯವಾದ ಪಂತತ್ತ್ವವು ಧ್ಯಾನ-ಸಮಾಧಿಗಳಿಂದ ಸಾಕ್ಷಾತ್ಕಾರವಾಗುತ್ತದೆ.

ಗಾಯತ್ರಿಯು ಮೂರು ಲೋಕಗಳನ್ನೂ ವ್ಯಾಪಿಸಿರುವ ಪ್ರಥಮ ಪಾದದಿಂದ 'ಏಕಪದೀ'; ತ್ರಯೀವಿದ್ಯಾರೂಪವಾದ ಎರಡನೆಯ ಪಾದದಿಂದ 'ದ್ವಿಪದೀ'; ಪ್ರಾಣಾಪಾನ ವ್ಯಾನರೂಪವಾದ ತೃತೀಯ ಪಾದದಿಂದ 'ತ್ರಿಪದೀ'; ಪರೋರಜವಾದ 'ದರ್ಶಕ' ಎಂಬ ಚತುರ್ಥಪಾದದಿಂದ 'ಚತುಷ್ಪದೀ' ಆಗಿರುತ್ತಾಳೆ. ಇದಕ್ಕಿಂತಲೂ ಮೀರಿದ ಸ್ವರೂಪದಿಂದ 'ಅಪದೀ' ಆಗಿರುತ್ತಾಳೆ. ಈಕೆಯ ಸ್ವರೂಪವನ್ನು ಅರಿಯಲು ಸಾಧ್ಯವಿಲ್ಲ.

ಅಸ್ಯಶ್ರೀ ತುರ್ಶತಸ್ಯ ಗಾಯತ್ರೀ ತುರೀಯಪಾದ ಮಹಾಮಂತ್ರಸ್ಯ। ಅಥರ್ವಣ ಪುತ್ರೋ ವಿಮಲ ಋಷಿಃ । ತುರೀಯ ಛಂದಃ । ಪರಮಾತ್ಮಾ ದೇವತಾ । ಮೋಕ್ಷೇ ವಿನಿಯೋಗಃ । 'ಪರೋ ರಜಸ' ಇತಿ ಬೀಜಂ । 'ಆಸಾವದ' ಇತಿಶಕ್ತಿಃ । 'ಓಂ' ಇತಿ ಕೀಲಕಂ । ಮಮ ತುರೀಯ ಗಾಯತ್ರೀ ಪ್ರಸಾದ ಸಿದ್ಧ್ಯರ್ಥೇ ಜಪೇ ವಿನಿಯೋಗಃ ।

## ನ್ಯಾಸ

| ಮಂತ್ರ | ಕರನ್ಯಾಸ | ಅಂಗನ್ಯಾಸ |
|---|---|---|
| ಪರಃ | ಅಂಗುಷ್ಠಾಭ್ಯಾಂ ನಮಃ | ಹೃದಯಾಯ ನಮಃ |
| ರಜಸೇ | ತರ್ಜನೀಭ್ಯಾಂ ನಮಃ | ಶಿರಸೇ 'ಸ್ವಾಹಾ' |
| ಅಸೌ | ಮಧ್ಯಮಾಭ್ಯಾಂ ನಮಃ | ಶಿಖಾಯೈ 'ವೌಷಟ್' |
| ಅದಃ | ಅನಾಮಿಕಾಭ್ಯಾಂ ನಮಃ | ಕವಚಾಯಹುಂ |
| ಪರೋಽರಜಸೆ | ಕನಿಷ್ಠಿಕಾಭ್ಯಾಂ ನಮಃ | ನೇತ್ರತ್ರಯಾಯ 'ವೌಷಟ್' |
| ಸಾವದೋಂ | ಕರತಲಕರಪೃಷ್ಠಾಭ್ಯಾಂ ನಮಃ | ಅಸ್ತ್ರಾಯ 'ಫಟ್' |

"ಭೂರ್ಭುವಸ್ಸ್ವರೋಮಿತಿ ದಿಗ್ಬಂಧಃ"

**ನ್ಯಾಸ**

ಯದ್ದೇವಾಸುರ ಪೂಜಿತಾರುಣ ನಿಭಂ ಸೋಮಾರ್ಕ ಮಾರಾನ್ವಿತಂ ।
ಪುನ್ನಾಗಾಂಬುಜ ನಾಗಪುಷ್ಪ ವಕುಳೈ ವ್ಯಾಸಾಧಿಭಿ ಶ್ಚಾರ್ಚಿತಂ ।
ನಿತ್ಯಂ ಧ್ಯಾನ ಸಮಾಧಿಯೋಗ ಕರಣಂ ಕಾಲಾಗ್ನಿ ರುದ್ರೋಪಮಂ ।
ತತ್ಸಂಹಾರಕರಂ ನಮಾಮಿ ಸತತಂ ಪಾತಾಳ ಪುಷ್ಪಂ ಮುಖಂ ॥

ಕೆಲವರು ಇದಕ್ಕೆ ಬದಲಾಗಿ ಈ ಕೆಳಗಿನ ಶ್ಲೋಕವನ್ನು ಹೇಳುತ್ತಾರೆ :

ಹೃದಿ ವಿಕಸಿತ ಪದ್ಮಂ ಸಾರ್ಕ ಸೋಮಾಗ್ನಿ ಬಿಂಬಂ ।
ಪ್ರಣವಮಯ ಮಚಿಂತ್ಯಂ ಯಸ್ಯ ಪೀಠಂ ಪ್ರಕಲ್ಪ್ಯಂ ।
ಅಚಲ ಪರಮ ಸೂಕ್ಷ್ಮಂ ಜ್ಯೋತಿರಾಕಾಶ ಸಾರಂ
ಭವತು ಮಾಮ ಮುಮೇಽಸೌ ಸಚ್ಚಿದಾನಂದ ರೂಪಃ ॥

ಈ ರೀತಿ ಧ್ಯಾನೋಪಚಾರವನ್ನು ಅರ್ಪಿಸಿ, ಪಂಚ ಪೂಜೋಪಚಾರ ವನ್ನು ನಿವೇದಿಸಿ, 'ಪರೋ ರಜಸಿ ಸಾವದೋಂ' ಎಂಬ ಮೂಲಮಂತ್ರ ದಿಂದ ಕೂಡಿದ ಗಾಯತ್ರೀಮಂತ್ರದ ನಾಲ್ಕನೇ ಪಾದವನ್ನು ಜಪಿಸಿ ಕಡೆ ಯಲ್ಲಿ ಹಿಂದಿನಂತೆ ಕರನ್ಯಾಸ-ಅಂಗನ್ಯಾಸ, ದಿಗ್ವಿಮೋಚನೆ, ಧ್ಯಾನ, ಪಂಚಪೂಜೆ ಇವುಗಳನ್ನು ಮಾಡಬೇಕು.

ಶ್ರೀಗಾಯತ್ರಿಯ ಈ ನಾಲ್ಕನೇ ಪಾದವು ಪರಮಾತ್ಮನಲ್ಲಿದೆ. 'ತುರೀಯಂ

ತುಪದಂ ತಸ್ಯಾಃ ಪರೀ ಬ್ರಹ್ಮಣಿ ಸಂಸ್ಥಿತಂ' ಎಂಬುದು ವ್ಯಾಸವಚನ. ಇದರ ಪ್ರಕಾರ ನಾಲ್ಕನೇ ಪಾದವು ಸೂರ್ಯಮಂಡಲದಲ್ಲಿ ಹಿರಣ್ಮಯ ನಾಗಿರುವ ಪರಮಪುರುಷನನ್ನು ನಿರ್ದೇಶಿಸುತ್ತದೆ. ಆದ್ದರಿಂದಲೇ ಉಪಾಸಕ ಸೂರ್ಯಮಂಡಲಕ್ಕೆ ಎದುರಾಗಿ ನಿಂತು ಅರ್ಘ್ಯ, ಉಪಸ್ಥಾನ ಇತ್ಯಾದಿ ಗಳನ್ನು ಸಂಧ್ಯಾಚರಣೆಯ ಮೂಲಕ ಉಪಾಸಿಸಬೇಕಾಗಿರುವುದು.

ಇದನ್ನು ಅನುಷ್ಠಿಸುವವರು ಕೇವಲ ತುರೀಯಾಶ್ರಮವನ್ನು ಕೈಗೊಂಡ ಸಂನ್ಯಾಸಿಗಳು. ಉಳಿದ ಆಶ್ರಮಗಳಿಗೆ ಇದು ಅನ್ವಯಿಸುವುದಿಲ್ಲ.

## ಶ್ರೀ ಗಾಯತ್ರೀ ಪಾದ ವಿವರಣೆ

ಶ್ರೀಗಾಯತ್ರೀ ಮಂತ್ರವು ಮೂರು ಪಾದವುಳ್ಳದ್ದಾಗಿದೆ ಎಂದು ಹಿಂದೆಯೇ ಹೇಳಿದೆ. ಈ ಮೂರು ಪಾದಗಳೂ ಕಾರ್ಯರೂಪವಾದ ಪ್ರಪಂಚವನ್ನು ಪ್ರತಿಬಿಂಬಿಸುತ್ತವೆ.

1) **ಪ್ರಥಮ ಪಾದ :** ಗಾಯತ್ರಿಯ ಪ್ರಥಮ ಪಾದ–'ತತ್ಸವಿತುರ್ವ ರೇಣೀಯಂ' ಎಂಬುದು. ಭೂಮಿ, ಅಂತರಿಕ್ಷ ಮತ್ತು ದ್ಯೌಃ ಈ ಮೂರು ಲೋಕಗಳೂ ಸೇರಿ ಈ ಪಾದವಾಗಿದೆ. ಈ ಪಾದವು ಮೂರು ಲೋಕಗಳ ರೂಪವಾಗಿದೆ. (ಉಪನಿಷತ್ತು).

ಈ ಪಾದಕ್ಕೆ ಋಗ್ವೇದ ಋಷಿ, ಭೂಮಿ ತತ್ತ್ವಕ್ಕೆ ಸೇರಿದುದು. ತ್ರಿಷ್ಟುಪ್ ಛಂದಸ್ಸು, ಬ್ರಹ್ಮ ಮುಖ್ಯದೇವತೆ, ಪ್ರತಿಪಾದ್ಯದೇವತೆ ಅನಿರುದ್ಧ, ಅಭಿಮಾನ ದೇವತೆ ರಮಾ.

(ವಿಶ್ವಾಮಿತ್ರ ಋಷೀ ದೈವೀ ಗಾಯತ್ರೀಚ್ಛಂದಃ । ಪರಮಾತ್ಮಾ ಬ್ರಹ್ಮ ದೇವತಾ । ಎಂಬ ಅಭಿಮತವೂ ಇದೆ.)

2) **ದ್ವಿತೀಯ ಪಾದ :** ಗಾಯತ್ರಿಯ ಎರಡನೇ ಪಾದ–'ಭರ್ಗೋ ದೇವಸ್ಯ ಧೀಮಹಿ' ಎಂಬುದು. ಋಗ್ವೇದ-ಯಜುರ್ವೇದ ಮತ್ತು ಸಾಮ ವೇದ—ಈ ಮೂರು ವೇದಗಳೂ ಸೇರಿ ಗಾಯತ್ರಿಯ ಎರಡಯ ಪಾದ ವಾಗಿದೆ (ಉಪನಿಷತ್ತು).

ಈ ಪಾದಕ್ಕೆ ಯಜುರ್ವೇದ ಋಷಿ, ಪ್ರಾಣಾಪಾನ ವ್ಯಾಸ ತತ್ತ್ವಗಳು.

ಜಗತೀ ಛಂದಸ್ಸು, ಪ್ರಧಾನ ದೇವತೆ ಮಹೇಶ್ವರ. ಪ್ರತಿಪಾದ್ಯ ದೇವತೆ ಪ್ರದ್ಯುಮ್ನ, ಅಭಿಮಾನ ದೇವತೆ ಬ್ರಹ್ಮ.

(ವಿಶ್ವಾಮಿತ್ರ ಋಷಿಃ। ದೈವೀಗಾಯತ್ರೀಚ್ಛಂದಃ। ಪರಮಾತ್ಮಾ ವಿಷ್ಣುಃ ದೇವತಾ। ಎಂಬ ಅಭಿಮತವೂ ಇದೆ.)

**ತೃತೀಯ ಪಾದ :** ಗಾಯತ್ರಿಯ ಮೂರನೇ ಪಾದ–ಧಿಯೋ ಯೋ ನಃ ಪ್ರಚೋದ ಯಾತ್'' ಎಂಬುದು. ಪ್ರಾಣಃ-ಅಪಾನಃ-ವ್ಯಾನಃ–ಇವು ಮೂರೂ ಈ ಗಾಯತ್ರಿಯ ಮೂರನೇ ಪಾದವಾಗಿದೆ.

ಈ ಪಾದಕ್ಕೆಸಾಮವೇದ ಋಷಿ। ಋಗ್ಯಜಸ್ಸಾಮ ತತ್ತ್ವಗಳು। ತ್ರಿಷ್ಟುಪ್ ಛಂದಸ್ಸು (ವಿಷ್ಣು ದೇವತೆ) ಪ್ರತಿಪಾದ್ಯ ದೇವತೆ ಸಂಕರ್ಷಣ, ಅಭಿಮಾನ ದೇವತೆ ಬ್ರಹ್ಮಾಣಿ। ಪಾಪಕ್ಷಯಾರ್ಥೇ ಜಪೇ ವಿನಿಯೋಗಃ ॥

(ವಿಶ್ವಾಮಿತ್ರ ಋಷಿಃ। ದೈವೀ ಗಾಯತ್ರೀಚ್ಛಂದಃ। ಪರಮಾತ್ಮಾ ವಿಷ್ಣುಃ ದೇವತಾ। ಎಂಬ ಅಭಿಮತವೂ ಇದೆ.)

ಈ ಗಾಯತ್ರೀ ಮಂತ್ರವನ್ನು ಕುರಿತು ವಿಚಾರ ಮಾಡಿದಾಗ ಇದರಲ್ಲಿ ಅಂತರ್ಗತವಾಗಿರತಕ್ಕ ಈ ಮೂರು ತಥ್ಯಗಳು ಪ್ರಕಟವಾಗುವುವು :

೧) ಈ ಮಂತ್ರದ ಪ್ರಥಮ ಭಾಗದಲ್ಲಿ ಮಾನವ ಜೀವನಕ್ಕೆ ಅತ್ಯಂತ ಮಹತ್ತ್ವಪೂರ್ಣವಾಗಿರತಕ್ಕ ಈಶ್ವರನ ಕೆಲವು ಗುಣಗಳನ್ನು ಕುರಿತು ಚಿಂತನವಿದೆ.

೨) ದ್ವಿತೀಯ ಭಾಗದಲ್ಲಿ ಸಗುಣಾತೀತನಾದ ಪರಮಾತ್ಮನ ತೇಜಃಪುಂಜ ವನ್ನು ಅಂದರೆ ಈ ಪರಮಾತ್ಮನನ್ನೇ ತನ್ನಲ್ಲಿ ಧಾರಣೆ ಮಾಡುವ ಪ್ರತಿಜ್ಞೆ ಇದೆ.

೩) ತೃತೀಯ ಭಾಗದಲ್ಲಿ ನಮಗೆ ಸದ್ಬುದ್ಧಿಯನ್ನು ಪ್ರೇರಣೆ ಮಾಡು, ಸಾತ್ತ್ವಿಕ ಬುದ್ಧಿಯನ್ನು ಪ್ರದಾನ ಮಾಡು, ಸತ್‌ಜ್ಞಾನದಿಂದ ನಮ್ಮನ್ನು ಪರಿಪೂರ್ಣರನ್ನಾಗಿ ಮಾಡು ಎಂಬುದಾಗಿ ಪ್ರಾರ್ಥನೆ ಮಾಡಲಾಗಿದೆ.

ಈ ಮೂರು ತಥ್ಯಗಳೂ ಅಸಾಧಾರಣ ಮಹತ್ತ್ವವುಳ್ಳವುಗಳಾಗಿವೆ. ಇವು ಗಳಲ್ಲಿ ಜ್ಞಾನ, ಕರ್ಮ ಮತ್ತು ಉಪಾಸನೆ ಎಂಬ ಮೂರೂ ಇವೆ. ಸದ್ಗುಣ ಗಳ ಚಿಂತನೆ ಜ್ಞಾನವಾಗಿದೆ, ಬ್ರಹ್ಮಧಾರಣೆ ಕರ್ಮವಾಗಿದೆ ಮತ್ತು ಬುದ್ಧಿಯ ಸಾತ್ತ್ವಿಕತೆಗಾಗಿ ಹಾಗೂ ಅಭೀಷ್ಟ ಪ್ರಾಪ್ತಿಗಾಗಿ ಮಾಡಲಾಗುವ ಪ್ರಾರ್ಥನೆಯು, ಪ್ರಣಾಲಿಯ ಉಪಾಸನೆಯಾಗಿದೆ.

ಪ್ರಥಮ ಪಾದದಲ್ಲಿನ ಆನಂದ, ದುಃಖನಾಶ, ಶ್ರೇಷ್ಠತೆ, ತೇಜಸ್ಸು,

ನಿರ್ಭಯತೆ ಹಾಗೂ ಆತ್ಮನ ಸರ್ವವ್ಯಾಪಕತೆ, 'ಆತ್ಮವತ್ ಸರ್ವ ಭೂತೇಷು' ಎಂಬ ಮಹಾತತ್ತ್ವದ ಮಾನ್ಯತೆ ಎಂಬುವುಗಳ ಮೇಲೆ ಧ್ಯಾನವನ್ನು ಎಷ್ಟು ಏಕಾಗ್ರತೆಯಿಂದ ಮಾಡಲಾಗುವುದೋ, ಅಷ್ಟುಮಟ್ಟಿಗೆ ಮಸ್ತಿಷ್ಕವು ಆ ತತ್ತ್ವಗಳನ್ನು ತನ್ನಲ್ಲಿ ವೃದ್ಧಿಪಡಿಸಿಕೊಳ್ಳುವುದು ಮತ್ತು ಮನಸ್ಸು ಆ ಕಡೆಗೆ ಆಕರ್ಷಿತವಾಗಿ, ಅಭ್ಯಾಸ ವೃತ್ತಿಯನ್ನು ಬೆಳೆಸಿಕೊಂಡು ಅದರ ಆಧಾರದ ಮೇಲೆ ಕೆಲಸ ಮಾಡತೊಡಗುವುದು. ಆತ್ಮನ ಸಚ್ಚಿದಾನಂದ ಸ್ಥಿತಿಯ ಚಿಂತನ, ದುಃಖಶೋಕರಹಿತ ಬ್ರಾಹ್ಮೀ ಸ್ಥಿತಿಯ ಚಿಂತನ, ಶ್ರೇಷ್ಠತೆ–ತೇಜಸ್ವಿತೆ–ನಿರ್ಮಲತೆಗಳ ಚಿಂತನ, ಆತ್ಮನ ಸರ್ವವ್ಯಾಪಕತೆಯ ಚಿಂತನ—ಇದನ್ನು ಗಾಢ ಅನುಭೂತಿ ಮತ್ತು ಶ್ರದ್ಧೆಗಳಿಂದ ಮಾಡಿದುದಾದರೆ, ಅಂತರಾತ್ಮನು ಅದೊಂದು ಸ್ವರ್ಗೀಯ ದಿವ್ಯಭಾವದಿಂದ ಓತಪ್ರೋತನಾಗುವನು. ಆತ್ಮನು (ಅಂತರಾತ್ಮನು) ಈ ದಿವ್ಯ ಆನಂದವನ್ನು ವಿಚಾರ ಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿಡದೆ, ಅದನ್ನು ಕ್ರಿಯೆಯಲ್ಲಿ ತೊಡಗಿಸಿ, ಅಸದೃಢ ಆನಂದವನ್ನು ಅನುಭವಿಸುವ ದಿಕ್ಕಿನಲ್ಲಿ ಹೆಜ್ಜೆಯಿಡುತ್ತಾನೆ. ಪ್ರಸಿದ್ಧವಾದ ಲೋಕಗಳನ್ನು ವಿಷ್ಣುವಿನಿಂದ ಹೊಂದುವುದು ಪ್ರಥಮ ಪಾದದ ಫಲವಾಗಿದೆ. ಈ ಮೊದಲನೇ ಪಾದವನ್ನು ತಿಳಿಯುವುದರಿಂದ ಸಾಧಕನು ಮೂರು ಲೋಕದ ಎಲ್ಲಾ ಪದಾರ್ಥಗಳನ್ನೂ ಹಾಗೂ ತ್ರಯೀ ವಿದ್ಯೆಗಳೆಲ್ಲವನ್ನೂ ಗೆಲ್ಲುತ್ತಾನೆ.

ಈ ರೀತಿಯಾಗಿ ಮೊದಲನೆಯ ಪಾದದ ತತ್ತ್ವವನ್ನು ಯಾವನು ತಿಳಿಯುತ್ತಾನೋ ಅವನು ಈ ಮೂರು ಲೋಕಗಳ ಸಂಪೂರ್ಣ ವಿಷಯಗಳನ್ನು ಬಲ್ಲವನಾಗುತ್ತಾನೆ. ಈ ಲೋಕಗಳಲ್ಲಿ ಏನೇನು ಸಂಪತ್ತು ಉಂಟೋ ಅದೆಲ್ಲವನ್ನೂ ಜಯಿಸುತ್ತಾನೆ.

ಗಾಯತ್ರೀ ಮಂತ್ರದ ದ್ವಿತೀಯ ಪಾದದಲ್ಲಿ ಮೇಲೆ ಹೇಳಿದ ಗುಣಗಳನ್ನುಳ್ಳ ತೇಜಃಪುಂಜವನ್ನು ಎಂದರೆ ಪರಮಾತ್ಮನನ್ನು ತನ್ನಲ್ಲಿ ಧಾರಣೆ ಮಾಡುವ ಪ್ರತಿಜ್ಞೆಯಿದೆ. ಆ ಗುಣಗಳುಳ್ಳ ಪರಮಾತ್ಮನನ್ನು ಕೇವಲ ಚಿಂತನ ಮಾಡುವ ಮಾತು ಇಲ್ಲಿಲ್ಲ. ಗಾಯತ್ರಿಯು ಅಂತರಾತ್ಮನಿಗೆ ಅತಿ ದೃಢವಾಗಿ ಆದೇಶಮಾಡುವುದೇನೆಂದರೆ, ಆ ಬ್ರಹ್ಮನನ್ನು-ಆ ದಿವ್ಯ ಸಂಪನ್ನ ಪರಮಾತ್ಮನನ್ನು ನಿನ್ನ ಅಂತರ್ಯದಲ್ಲಿ ಧಾರಣ ಮಾಡು ; ನಿನ್ನ ಪ್ರತಿಯೊಂದು ರೋಮದಲ್ಲಿಯೂ ಅವನು ತುಂಬಿತುಳುಕುವಂತೆ ಮಾಡು ; ಹಾಗೂ ಆ ದಿವ್ಯ ಸಂಪನ್ನ ಪರಮಾತ್ಮನು ನಿನ್ನ ಒಳಗೂ ಆವರಿಸಿಕೊಂಡಿ

ರುವನೆಂಬುದು, ಅಲ್ಲದೆ ಆ ದಿವ್ಯ ಗುಣಗಳಲ್ಲಿ–ಆ ಈಶ್ವರೀಯ ಸತ್ತೆಯಲ್ಲಿ ನಿನ್ನ "ಅಹಂ" ಪೂರ್ಣವಾಗಿ ಮುಳುಗಿಹೋಗಿದೆ ಎಂಬುದು ನಿನ್ನ ಅನುಭವವಾಗುವಂತೆ ಮಾಡಿಕೊ. ಈ ಪ್ರಕಾರ ಧಾರಣೆಯಿಂದ ಮನುಷ್ಯನು ಎಷ್ಟೋ ಹೊತ್ತು ಭೂಲೋಕದಲ್ಲಿದ್ದೂ, ಬ್ರಹ್ಮಲೋಕದ ಆನಂದವನ್ನು ಪಡೆಯುವನು. ಈ ಅನುಭವವು ಎಷ್ಟು ಗಂಭೀರವಾಗಿದೆ ಎಂದರೆ, ಭವಿಷ್ಯತ್—ಜೀವನದಲ್ಲಿ ಮತ್ತು ಬಾಹ್ಯ ಆಚರಣೆಯಲ್ಲಿ ಅದರ ಪ್ರಭಾವ ಬೀಳದೆ ಇರುವುದಿಲ್ಲ. ಇದರಿಂದ ಸಾತ್ತ್ವಿಕ ತತ್ತ್ವಗಳ ಮಂಗಳಕಾರಕ ಅಭಿವೃದ್ಧಿಯಾಗಲೇಬೇಕೆಂಬುದು ದೃಢಪಡುವುದು. ಈ ಎರಡನೇ ಪಾದವನ್ನು ಉಪಾಸನೆ ಮಾಡಿ ತಿಳಿಯುವುದರಿಂದ ತ್ರಯೀವಿದ್ಯೆಯನ್ನೂ ಅದರ ಫಲವನ್ನೂ ಸಾಧಕನು ಜಯಿಸುವನು. ತ್ರಯೀವಿದ್ಯೆಯನ್ನು ಪಡೆಯುವುದು ಈ ಎರಡನೇ ಪಾದದ ಫಲವಾಗಿರುವುದು.

ಶ್ರೀಗಾಯತ್ರೀ ಮಂತ್ರದ ತೃತೀಯ ಪಾದದಲ್ಲಿ ನಮಗೆ ಸದ್ಬುದ್ಧಿಯ ಪ್ರೇರಣೆಯ ಜೊತೆಗೆ ನಮ್ಮ ಮಸ್ತಿಷ್ಕದೊಳಗೆ ಕುವಿಚಾರ–ಕುಸಂಸ್ಕಾರ–ನೀಚವಾಸನೆ–ದುರ್ಭಾವನೆಗಳನ್ನು ತಳ್ಳಿಹಾಕಿ, ಸತ್ತ್ವಗುಣಯುತವಾದ ಋತಂಭರಾಬುದ್ಧಿಯಿಂದ–ವಿವೇಕದಿಂದ, ಸತ್–ಜ್ಞಾನದಿಂದ ನಮ್ಮನ್ನು ಪರಿಪೂರ್ಣರನ್ನಾಗಿ ಮಾಡು ಎಂಬುದಾಗಿ ಪ್ರಾರ್ಥನೆ ಮಾಡಲಾಗಿದೆ. ಈ ಮೂರನೇ ಪಾದವನ್ನು ತಿಳಿಯುವುದರಿಂದ ಇಡೀ ಪ್ರಾಣಿ ಸಮುದಾಯವನ್ನು ಸಾಧಕನು ವಶಪಡಿಸಿಕೊಳ್ಳಬಲ್ಲನು. ಸಕಲ ಸ್ವಾಮಿತ್ತ್ವವು ಮೂರನೇ ಪಾದದ ಫಲವಾಗಿರುವುದು.

ಗಾಯತ್ರಿಯ ಮೂಲಕವಾಗಿ ಉಪಪನ್ನೀಯವಾದ ಸವಿತೃದೇವನ ಭರ್ಗವನ್ನು ಅರಿಯಲು, ಆ ಮಹಾಜ್ಯೋತಿಯ ಸ್ವರೂಪವನ್ನು ಸಾಕ್ಷಾತ್ಕರಿಸಲು ಧ್ಯಾನಾತ್ಮಕವಾದ ಬುದ್ಧಿ ಬೇಕು. ಅದಕ್ಕಾಗಿಯೇ 'ಧಿಯೋ ಯೋ ನಃ ಪ್ರಚೋದಯಾತ್' ಎಂದು ಪ್ರಾರ್ಥಿಸುವುದು.

ಈ ಪ್ರಾರ್ಥನೆಯ ಪ್ರಥಮ ಭಾಗದಲ್ಲಿ ಕಾಣಿಸಲಾದ ದಿವ್ಯ ಗುಣಗಳನ್ನು ಪ್ರಾಪ್ತ ಮಾಡಿಕೊಳ್ಳುವ ಸಲುವಾಗಿ ಮತ್ತು ದ್ವಿತೀಯ ಭಾಗದಲ್ಲಿ ಹೇಳಲಾದ ಬ್ರಹ್ಮಧಾರಣೆಯ ಸಲುವಾಗಿ ಕೈಕೊಳ್ಳಬೇಕಾದ ಉಪಾಯವನ್ನು ತೃತೀಯ ಭಾಗದಲ್ಲಿ ತೋರಿಸಿಕೊಡಲಾಗಿದೆ. "ನಿಮ್ಮ ಬುದ್ಧಿಗಳನ್ನು ಸಾತ್ತ್ವಿಕಗೊಳಿಸಿಕೊಳ್ಳಿರಿ, ಉನ್ನತ ದಾರ್ಶನಿಕ ವಿಚಾರಧಾರೆಗಳಲ್ಲಿ ರಮಣರಾಗಿರಿ. ಮತ್ತು ನಿಮ್ಮ ತುಚ್ಛ–ತೃಷ್ಣೆ–ವಾಸನೆಗಳ

ಸನ್ನೆಯು ಮೇರಿಗೆ ಕುಣಿಯುವ ಬುದ್ಧಿಯನ್ನು ಮಾನಸಲೋಕದಿಂದ ಹೊರತಳ್ಳಿರಿ ಎಂಬ ಆದೇಶನೇ ಈ ಉಪಾಯವಾಗಿದೆ. ಬುದ್ಧಿಯಲ್ಲಿ ಕಲ್ಮಷವು ದೂರವಾಗುತ್ತಾ ಹೋದಂತೆ ನಮ್ಮಲ್ಲಿ ದಿವ್ಯ ಗುಣಸಂಪನ್ನ ಪರಮಾತ್ಮನ ಅಂಶಗಳು ವೃದ್ಧಿಗೊಳ್ಳುತ್ತಾ ಹೋಗುವುವು ಮತ್ತು ತತ್ಪರಿಣಾಮವಾಗಿ ಲೌಕಿಕ ಹಾಗೂ ಪಾರಲೌಕಿಕ ಆನಂದವು ಹೆಚ್ಚುತ್ತಾ ಹೋಗುವುದು.

ಈ ಮಂತ್ರವನ್ನು ಇನ್ನೊಂದು ರೀತಿಯಲ್ಲಿ ಸ್ಪಷ್ಟವಾಗಿ ಮೂರು ಭಾಗ ಗಳಾಗಿ ವಿಂಗಡಿಸಬಹುದು. ಈ ಒಂದೊಂದು ಭಾಗಕ್ಕೂ ಅದರದೇ ಆದ ಉದ್ದೇಶ ಮತ್ತು ಮಹತ್ವಗಳಿವೆ—

**(೧) ಓಂ, ಭೂಃ ಭುವಃ, ಸುವಃ** (ಪ್ರಣವ ಮತ್ತು ವ್ಯಾಹೃತಿಗಳು)
**(೨) ತತ್ ಸವಿತುರ್ ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ**
**(೩) ಧಿಯೋ ಯೋ ನಃ ಪ್ರಚೋದಯಾತ್**

೧) ಮೊದಲನೇ ಭಾಗದ ಉದ್ದೇಶ—ಸಾಧಕನ ಕೋಶಗಳಲ್ಲಿ ಕೆಲವು ಶಕ್ತಿಗಳನ್ನು ಹೃದಯದಲ್ಲಿ ಸುಪ್ತಾವಸ್ಥೆಯಲ್ಲಿ ಆಧ್ಯಾತ್ಮಿಕ ಶಕ್ತಿಗಳನ್ನು, ಎಬ್ಬಿಸಿ ಅವುಗಳ ಮೂಲಕ ಆ ಮಂತ್ರದ ಉಳಿದ ಭಾಗಗಳ ಸಫಲಕ್ರಿಯೆಗೆ ಅಗತ್ಯವಾದ ಭೂಮಿಕೆಯನ್ನು ಸಿದ್ಧಮಾಡುವುದು. ಈ ಶಕ್ತಿಗಳನ್ನು ಶಬ್ದ ಅಥವಾ ವಾಕ್ ಎಬ್ಬಿಸುತ್ತದೆ. ಇದು ಕೋಶಗಳಲ್ಲಿ ಸಾಮರಸ್ಯ ವನ್ನೇರ್ಪಡಿಸಿ, ಊರ್ಧ್ವಲೋಕಗಳಿಂದ ಬರುವ ಶಕ್ತಿಗಳೊಡನೆ ಅವನ್ನು ಶ್ರುತಿಮಾಡಿ ಪ್ರಜ್ಞೆಯ ಊರ್ಧ್ವಸ್ಥಿತಿಗಳು ಈ ಕೋಶಗಳ ಮೂಲಕ ವ್ಯಕ್ತವಾಗಲು ಸಾಧ್ಯವಾಗುವಂತೆ ಮಾಡುತ್ತದೆ.

೨) ಎರಡನೇ ಭಾಗದ ಕೆಲಸವೇನೆಂದರೆ—ನಮ್ಮ ಸೌರ ಬ್ರಹ್ಮಾಂಡದ ನಾಯಕನಾದ 'ಸವಿತಾ' (ಸೂರ್ಯನಾರಾಯಣ)ನ ಪ್ರಜ್ಞೆಯೊಡನೆ ಸಂಪರ್ಕ ಪಡೆಯಬೇಕೆಂಬ ಉತ್ಕಟವಾದ ಆಕಾಂಕ್ಷೆ ಅಥವಾ ತೀವ್ರವಾದ ಇಚ್ಛೆಯನ್ನು ಸಾಧಕನ ಮನಸ್ಸಿನಲ್ಲಿ ಉತ್ತೇಜಿಸುವುದು. ಅಂದರೆ ಸಾಧ ಕನು ತಾನು ಭಗವಂತನೊಡನೆ ತನ್ನ ಏಕತ್ವವನ್ನು ತಿಳಿಯುವಂತೆ ಮಾಡುವ ಜ್ಞಾನವನ್ನು, ಆಧ್ಯಾತ್ಮಿಕ ಆಕಾಂಕ್ಷೆಯ ಕಿಡಿಯನ್ನು ಬೀಸಿ ಪ್ರಜ್ವಲವಾಗಿ ಉರಿಯುವಂತೆ ಮಾಡುತ್ತಾನೆ. ಅವನ ಪ್ರಜ್ಞೆಯು ಈಗಲೂ ವಿಶ್ವಪ್ರಜ್ಞೆಯ ಒಂದು ಅಂಶವಾಗಿರುತ್ತದೆ. ಸಾಧಕನು ತಾನು ಕಳೆದು

ಕೊಂಡಿರುವ ಏಕತ್ವದ ಅರಿವನ್ನು ಪಡೆಯಲು ಪ್ರಾರಂಭಿಸುತ್ತಾನೆ.

೩) ಮೂರನೇ ಭಾಗದ ಗುರಿ ಎಂದರೆ-ದೈವಕೃಪೆ ದೊರಕಲು ಅತ್ಯವಶ್ಯಕವಾದ ಆತ್ಮಸಮರ್ಪಣಾಭಾವವನ್ನು ಪ್ರಚೋದಿಸುವುದು. ಪ್ರಜ್ಞೆಯು ಸಕ್ರಿಯ ಪಾತ್ರವನ್ನು ವಹಿಸಿ ಉತ್ಕಟ ಆಕಾಂಕ್ಷೆಯುಂಟಾದಾಗ ಮಾತ್ರ ಎಬ್ಬಿಸಲ್ಪಟ್ಟ ಆ ಶಕ್ತಿಗಳು ಅವನ ಕೋಶದೊಳಗೆ ಸರಾಗವಾಗಿ ಹರಿದು ಅವನ ಮನಸ್ಸನ್ನು ಆಧ್ಯಾತ್ಮಿಕ ಪ್ರಕಾಶಕ್ಕೆ ಸಿದ್ಧಮಾಡುತ್ತವೆ. ಅಂದರೆ ಸಾಧಕನು ಘಟ್ಟಘಟ್ಟವಾಗಿ ಸವಿತೃವಿನ ಹಿಂಬದಿಯಲ್ಲಿ ಗೂಢವಾಗಿರುವ ಈಶ್ವರನನ್ನು (ಸತ್ಯವನ್ನು) ಸಾಕ್ಷಾತ್ಕಾರಮಾಡಿಕೊಳ್ಳುವ ಸ್ಥಿತಿಗೆ ತಲುಪುತ್ತಾನೆ.

ಈ ಕ್ರಿಯೆ ಬಿಲ್ಲುಗಾರನು ಬಾಣಬಿಡುವ ಕ್ರಿಯೆಯಂತೆ—ಮೊದಲು ಬಿಲ್ಲನ್ನು ಬಗ್ಗಿಸಿ ಹೆದೆ ಏರಿಸುವುದು. ನಂತರ ಬಿಲ್ಲಿನ ಹೆದೆಗೆ ಬಾಣವನ್ನು ಹೂಡಿ ಅದನ್ನು ಹಿಂದಕ್ಕೆ ಎಳೆಯುವುದು. ಈ ಮೂರನೇ ಘಟ್ಟದಲ್ಲಿ ಯಾವ ಪ್ರಯತ್ನವೂ ಬೇಕಾಗಿಲ್ಲ. ಇದು ಪ್ರಯತ್ನರಹಿತ ಸ್ಥಿತಿ. ಅಂದರೆ ತನ್ನನ್ನು ತಾನು ಬಿಟ್ಟುಕೊಡುವ ಸ್ಥಿತಿ.

ಶ್ರೀ ಗಾಯತ್ರಿಯ ಒಂದೊಂದು ಪಾದದ, ಪಾದದ ಒಂದೊಂದು ಶಬ್ದದ ಹಾಗೂ ಒಂದೊಂದು ಶಬ್ದದಲ್ಲಿ ಅಡಗಿರುವ ಜ್ಯೋತಿಸ್ವರೂಪವನ್ನು ತಿಳಿಯುವುದರಿಂದ ಆತ್ಮಸಾಕ್ಷಾತ್ಕಾರಕ್ಕೆ ಸೋಪಾನವಾಗುವುದು.

ಶ್ರೀ ಗಾಯತ್ರೀ ಮಂತ್ರದಲ್ಲಿನ ಮೇಲಿನ ತಥ್ಯಗಳು ವೇದಗಳ ಸಮಸ್ತ ಋಷಿಗಳು ಸವಿಸ್ತಾರವಾಗಿ ಪ್ರಕಟಗೊಳಿಸಿರುವ ತತ್ತ್ವಗಳನ್ನು ಒಳಗೊಂಡಿರುತ್ತವೆ. ವೇದಗಳಲ್ಲಿ ಜ್ಞಾನ-ಕರ್ಮ-ಉಪಾಸನೆಗಳೆಂಬ ಮೂರು ವಿಷಯಗಳಿವೆ. ಗಾಯತ್ರೀ ಬೀಜದಲ್ಲಿಯೂ ಈ ಮೂರರ ವರ್ಣನೆಯು ವ್ಯಾವಹಾರಿಕವೂ, ಸಂಕ್ಷಿಪ್ತವೂ, ಸರ್ವಾಂಗಪೂರ್ಣವೂ ಆಗಿದೆ. ಈ ತಥ್ಯವು, ಈ ಬೀಜವು, ಅಂತಃಕರಣದಲ್ಲಿ ಆಳವಾಗಿ ಇಳಿಯುವಂತೆ ಹೃತ್ಪೂರ್ವಕವಾಗಿ, ನಿಷ್ಠೆ-ಶ್ರದ್ಧೆಗಳಿಂದೊಡಗೂಡಿ ಪ್ರಯುತ್ನಿಸುವುದೇ ಗಾಯತ್ರಿಯ ಉಪಾಸನೆಯಾಗುವುದು. ಈ ಉಪಾಸನೆಯಿಂದ ಸಾಧಕನಿಗೆ ಸರ್ವ ಪ್ರಕಾರದ ಸಕಲ ಕಲ್ಯಾಣವೂ ಲಭಿಸುವುದು. ಗಾಯತ್ರೀ ಉಪಾಸಕನು ಯಾರಿಗಾದರೂ ಒಳ್ಳೆಯದಾಗಲೀ ಎಂದರೆ ಅದು ಪೂರ್ಣವಾಗುತ್ತದೆ. ಹಾಗೆಯೇ ಅವನು ದ್ವೇಷಿಯನ್ನು ಕುರಿತು ಅವನಿಗೆ ಇಷ್ಟವಾದುದು ಹೋಗಲಿ ಎಂದರೆ ಹಾಗೆಯೇ ಆಗುತ್ತದೆ. ಶ್ರೀಗಾಯತ್ರೀ ಉಪಾಸಕನಿಗೆ ಪ್ರತಿಗ್ರಹ(ದಾನ ತೆಗೆದುಕೊಳ್ಳುವುದು)ದಿಂದ

ಬರತಕ್ಕ ದೋಷವನ್ನು ಪರಿಹರಿಸಿಕೊಳ್ಳುವ ಶಕ್ತಿ ಬರುತ್ತದೆ. ಗಾಯತ್ರಿಯನ್ನು ತಿಳಿದವನ ಸರ್ವಪಾಪಗಳೂ ಬೆಂಕಿಯಲ್ಲಿ ಹಾಕಿದ ಒಣ ಹುಲ್ಲಿನಂತೆ ಭಸ್ಮವಾಗುತ್ತವೆ. ಆದ್ದರಿಂದಲೇ ವೈದಿಕ ಮತಾವಲಂಬಿಗಳಿಗೆಲ್ಲಾ ಪರಮ ಆರಾಧ್ಯ ದೇವತೆ ಗಾಯತ್ರೀ. ಆಕೆಯೊಂದು ಕಲ್ಪತರು, ಎಲ್ಲಾ ತತ್ತ್ವಗಳ ಸಂಗಮ.

ಭಾರತೀಯ ಸಂಸ್ಕೃತಿಯು ಕರ್ಮವಾದದ ಸಂಸ್ಕೃತಿಯಾಗಿದೆ. ಅದರಲ್ಲಿ ಪುರುಷಾರ್ಥ, ಪ್ರಯತ್ನ, ಸಂಘರ್ಷ ಮತ್ತು ಶ್ರಮ ಮಾಡಿ ಅಭೀಪ್ಸವನ್ನು ಪಡೆಯುವ ಆದೇಶವಿದೆ. ಈಶ್ವರನಲ್ಲಿ ಮಾಡುವ ಪ್ರಾರ್ಥನೆಯಲ್ಲಿ ಆತನ ಆಶೀರ್ವಾದ, ಮಾರ್ಗದರ್ಶನ, ಹಾಗೂ ನೇತೃತ್ವವನ್ನು ಬೇಡಲಾಗುತ್ತದೆ. ಗಾಯತ್ರಿಯಲ್ಲಿ ಈಶ್ವರನಲ್ಲಿ ಮಾಡುವ ಪ್ರಾರ್ಥನೆಯು ಸದ್ಬುದ್ಧಿಗಾಗಿ ಅಲ್ಲ, ಸದ್ಬುದ್ಧಿಗೆ ಪ್ರೇರಣೆ, ಪ್ರೋತ್ಸಾಹ, ಆಶೀರ್ವಾದ ಕೊಡುವ ಸಲುವಾಗಿ. ಏಕೆಂದರೆ ಸದ್ಬುದ್ಧಿಯು ಸತ್ಕರ್ಮಗಳ ಆಚರಣೆಯ ಪ್ರಯತ್ನದಿಂದಲೇ ಬರಬೇಕು. ಒಂದೇ ಜಾತಿಯ ಅನೇಕ ಅರ್ಥಗಳನ್ನು ಸೂಚಿಸಲು ಒಂದೇ ಪದವನ್ನು ಉಪಯೋಗಿಸಬಹುದೆಂಬ ಅಂಶವು ಸಂಸ್ಕೃತ ಭಾಷೆಯ ಶ್ರೀಮಂತಿಕೆ ಮತ್ತು ಭಾವಪ್ರದರ್ಶನ ಸಾಮರ್ಥ್ಯಕ್ಕೆ ಕಾರಣವಾಗಿದೆ.

## ಶ್ರೀ ಗಾಯತ್ರೀ ಪದ ವಿವರಣೆ

**'ಓಂ'ಕಾರ :** ಗಾಯತ್ರೀ ಮಂತ್ರಕ್ಕೆ ಪ್ರಣವವೇ ಮೂಲ ಎಂಬುದಾಗಿ ತಂತ್ರಸಾರದಲ್ಲಿ ಉಕ್ತವಾಗಿದೆ. 'ಓಂ'ಕಾರವು ಸಂಸ್ಕೃತ ಭಾಷೆ ಹಾಗೂ ಭಾರತದ ಇತರ ಭಾಷೆಗಳಲ್ಲಿ ವಿನಃ ಪ್ರಪಂಚದ ಬೇರೆ ಯಾವ ಭಾಷೆಯಲ್ಲಿಯೂ ಇಲ್ಲ. ಗಾಯತ್ರೀ ಮಂತ್ರದಲ್ಲಿ ಪ್ರಪ್ರಥಮವಾಗಿ 'ಓಂ'ಕಾರವು ನಿಯೋಜಿತವಾಗಿದೆ. ಇದು ಭಗವಂತನ ಹೆಸರು. 'ಓಂ'ಕಾರದಲ್ಲಿ ಮೂರು ವೇದಗಳೂ ಅಡಗಿವೆ. (ಮನುಧರ್ಮ). ಈ ಓಂಕಾರವು ಬ್ರಹ್ಮವಾಚಕ, ಸಮಸ್ತ ಮಂತ್ರಗಳ ಸೇತುವೆ. ಇದನ್ನೇ 'ಪ್ರಣವ'ನೆಂದೂ ಕರೆಯುತ್ತಾರೆ. ಪ್ರಣವನೆಂದರೆ ಪರಬ್ರಹ್ಮ, ಸಕಲ ಪ್ರಾಣಗಳನ್ನೂ ಪರಮಾತ್ಮನಲ್ಲಿ ಅರ್ಪಿಸುವುದರಿಂದ ಇದು ಪ್ರಣವ (ಸ.ತಾ.) 'ಓಂ' ಎಂದರೆ ಇದೆಲ್ಲವೂ, ಈ ಸರ್ವ ಪ್ರಪಂಚವೂ, ಎಂದು.

'ಓಂ'ಪದವು ಆಪ್ಲೃವ್ಯಾಪ್ತೌ ಮತ್ತು ಅಬರಕ್ಷಣೇ ಧಾತುಗಳಿಂದ ಸಿದ್ಧ

ವಾಗುತ್ತದೆ. ಆಪ್ಲ್ಯಧಾತುವಿನಿಂದ ಸಿದ್ಧವಾದ ಓಂಕಾರದ ಅರ್ಥ 'ಸರ್ವ ವ್ಯಾಪಿ' ಎಂದಾಗುತ್ತದೆ. ಮತ್ತು ಅಬಧಾತುವಿನಿಂದ ನಿರ್ಮಿತವಾದ ಓಂನ ಅರ್ಥ 'ಸಂಸಾರ ಸಾಗರದಿಂದ ರಕ್ಷಣೆ' ಎಂದಾಗುತ್ತದೆ. ಅಬಧಾತುವಿನಿಂದ ಮನ್ ಪ್ರತ್ಯಯ ಆಗುತ್ತದೆ (ಅವತೇಷ್ಟಿ ಲೋಪಃ). ಈ ಉಣಾದಿಯ ಸೂತ್ರದಿಂದ 'ಟಿ'ಯ ಲೋಪವಾಗುತ್ತದೆ. ಅಬ+ವ್ ಈ ಅವಸ್ಥೆಯಲ್ಲಿ (ಜ್ವರತ್ವರ) ಇತ್ಯಾದಿ ಕೃದಂತದ ಸೂತ್ರದಿಂದ, ವನಉಢವಾಗುತ್ತದೆ. ಆಗ ಅ+ಉ+ವ್ ಈ ಅವಸ್ಥೆಗೆ ಬರುತ್ತದೆ. ತದನಂತರ (ಅದಗಣಃ) ಸೂತ್ರ ದಿಂದ ಗುಣವಾಗಿ 'ಓಂ' ಸಿದ್ಧವಾಗುತ್ತದೆ. 'ಪ್ರಣವ'ವು ಪ್ರಣವಪೂರ್ವಕ 'ಣು' ಧಾತುವಿನಿಂದ ಸ್ತುತಿಯ ಅರ್ಥದಲ್ಲಿ ಸಿದ್ಧವಾಗುತ್ತದೆ ಮತ್ತು ಯಾವುದರ ಮುಖಾಂತರ ಅಭೀಷ್ಟ ದೇವತೆಯು ಸ್ತುತಿ ಮಾಡಲ್ಪಡುತ್ತ ದೆಯೋ ಅದು 'ಪ್ರಣವ' ಎಂದಾಗುತ್ತದೆ. ಪ್ರಣವ ಮತ್ತು ತಾರ ಎಂಬುವು ಓಂಕಾರಕ್ಕೆ ಪರ್ಯಾಯ ಶಬ್ದಗಳು. ಈ ಶಬ್ದವು ಪ್ರಿಯವೂ, ಮಧುರವೂ, ಸರಳವೂ, ಗಂಭೀರವೂ ಆಗಿದೆ. ಋಕ್ ಸಂಹಿತೆ (ಅಗ್ನಿಮಾಳೇ ಪುರೋಹಿತಂ) ಮಂತ್ರದಿಂದ ಆದ್ಯಕ್ಷರ 'ಅ'ಕಾರವನ್ನೂ, (ಗಾವಃ ಸಮುದ್ರೋ ಬಂಡುಃ) ಎಂಬ ಯಜುರ್ವೇದ ಮಂತ್ರದಿಂದ 'ದ'ಕಾರದ ಮೇಲಿನ 'ಉ'ಕಾರವನ್ನೂ, ಸಾಮವೇದದಲ್ಲಿನ (ಅಗನ್ಮ ಜ್ಯೋತಿರುತ್ತಮಂ) ಎಂಬ ಮಂತ್ರದ ಕೊನೆಯ ಅಕ್ಷರ 'ಮ'ಕಾರವನ್ನೂ ಸೇರಿಸಿ 'ಓಂ'ಕಾರ ಸಿದ್ಧವಾಗಿದೆ.

'ಓಂ'—ಇದು ಅವ್ಯಯವಾಚಕ ಶಬ್ದ. ಇದರ ಎದುರಿಗೆ ಯಾವ ವಿಭಕ್ತಿಯೂ, ಪ್ರತ್ಯಯವೂ ಬರುವಂತಿಲ್ಲ. ಬಂದರೆ ಅವು ತಮ್ಮಷ್ಟಕ್ಕೆ ತಾವೇ ನಾಶಹೊಂದುತ್ತವೆ. ಆದುದರಿಂದ 'ಓಂ' ಅವಿನಾಶಿ. 'ಓಂ'ವಾಚಕ ಶಬ್ದವು ಅವ್ಯಯವಾದ್ದರಿಂದ ಪರಮಾತ್ಮನಲ್ಲದೆ ಇನ್ನಾವ ಪ್ರಾಣಿಗೂ ಪ್ರಯೋಗವಾಗುವುದಿಲ್ಲ. ಇತರ ಪ್ರಾಣಿಯು ಅಲ್ಪಜ್ಞನೂ, ಒಂದು ಸ್ಥಾನ ದಲ್ಲಿರುವವನೂ, ಪೂರ್ಣತಾರಹಿತನೂ, ನ್ಯೂನತಾಸಹಿತನೂ ಆಗಿದ್ದಾನೆ. 'ಓಂ' ಎಂಬುದರ ಅರ್ಥವು ಸೂಕ್ತಕ್ಕೆ 'ರಕ್ಷಾ ಕವಚ' ಎಂಬುದು ವೇದ ವೇತ್ತರ ಅಭಿಪ್ರಾಯ.

'ಓಂ'ಕಾರವೇ ಅಕ್ಷಯವಾದ ಬ್ರಹ್ಮ, ಅಗ್ನಿಯೇ ದೇವತೆ, ಪರಬ್ರಹ್ಮನೇ ಋಷಿ, (ಪರಮಾತ್ಮನೇ ದೇವತೆಯೆಂದು ಹೇಳುವುದೂ ಉಂಟು.) ಗಾಯತ್ರೀ ಛಂದಸ್ಸು, ಮೋಕ್ಷವೇ ವಿನಿಯೋಗ. 'ಓಂ'ಕಾರವು ಸಗುಣ ಮತ್ತು ನಿರ್ಗುಣ ಬ್ರಹ್ಮವಾಗಿರುವುದು. ಇದು ಸರ್ವಶಬ್ದರೂಪವಾಗಿಯೂ, ಸಕಲ ವಾಙ್ಮಯ

ಸ್ವರೂಪವಾಗಿಯೂ ಇದೆ. ಪ್ರತಿಯೊಂದು ದೇವತೋಪಾಸನೆಯ ಮೂಲ ಮಂತ್ರದ ಪ್ರಥಮದಲ್ಲಿಯೂ 'ಓಂ'ಕಾರವನ್ನು ಸೇರಿಸುತ್ತಾರೆ. ಇದರ ತತ್ತ್ವಾರ್ಥ ಹೀಗಿದೆ: 'ಓಂ'ಕಾರೋಚ್ಚಾರಣೆಯ ಅನುಸಂಧಾನ ಮಾಡಿ ಕೊಂಡು, ಭ್ರೂಮಧ್ಯದಲ್ಲಿ ಗೋಚರವಾಗುವ ತೇಜೋಬಿಂದುವಿಗೆ ಬದಲಾಗಿ, ತೇಜಸ್ಸಿನಲ್ಲಿಯೇ ತೇಜೋ ಆಕಾರದಲ್ಲಿ ಉಪಾಸನಾದೇವತಾ ಸ್ವರೂಪವನ್ನು ಭಾವಿಸಿ, ಬುದ್ಧಿವೃತ್ತಿಯಿಂದ ಧರಿಸಿಕೊಂಡು, ಉಪಾಸನೆ ಮಾಡಬೇಕೆಂಬುದೇ ಆಗಿದೆ. ಉಪಾಸಕರೇ ಅಲ್ಲದೆ ಮಂತ್ರವನ್ನು ಜಪಮಾಡ ತಕ್ಕವರೂ, ಅಷ್ಟೋತ್ತರ, ಸಹಸ್ರನಾಮ ಪೂಜೆ ಮಾಡತಕ್ಕವರೂ ಸಹ ಮಂತ್ರ ಮತ್ತು ದೇವರನಾಮಗಳಿಗೆ ಪ್ರಥಮದಲ್ಲಿ ಓಂಕಾರವನ್ನು ಉಚ್ಚರಿಸಿ ಅನಂತರ ಜಪದ ಮಂತ್ರ ಮತ್ತು ದೇವರನಾಮಗಳನ್ನು ಉಚ್ಚರಿಸ ಬೇಕೆಂಬುದು ಈ ಅರ್ಥದಲ್ಲಿಯೇ. ಎಲ್ಲಾ ತಾಂತ್ರಿಕ ಮಂತ್ರಗಳೂ ಅವುಗಳ ಆದಿಯಲ್ಲಿ ಓಂಕಾರವನ್ನು ಸೇರಿಸುವತನಕ ಪೂರ್ಣಗೊಳ್ಳುವುದಿಲ್ಲ. ಪ್ರಣವವು 'ಸರ್ವವಾಚ್ಯ ವಸ್ತು' ಎಂದು ಶಾಸ್ತ್ರಗಳು ಘೋಷಿಸುತ್ತವೆ. ಈ ಪ್ರಣವವು ಎಲ್ಲದರಲ್ಲಿಯೂ, ಎಲ್ಲಾ ಕಾಲದಲ್ಲಿಯೂ ವ್ಯಾಪಾರ ಮಾಡುವ ನಾದಶಕ್ತಿ; ಇದೇ ಎಲ್ಲಾ ಭೂತಗಳಲ್ಲಿಯೂ ಇರುವ ಚೈತನ್ಯಶಕ್ತಿ; ಇದೇ ನಾವು ಆಡುವ ಮಾತಿನ ಮೂಲ. ಇದೇ ನಾದವು ಷಟ್ಚಕ್ರಗಳನ್ನು ಮುಟ್ಟಿದಾಗ ವರ್ಣ (ಅಕ್ಷರ)ಗಳ ರೂಪವನ್ನು ತೆಗೆದುಕೊಂಡು ಸಮಸ್ತ ವಾಙ್ಮಯಗಳ ಆಕಾರ ವನ್ನು ಧರಿಸುತ್ತದೆ. ಇದೇ 'ಅನಾಹತ ನಾದ'; ಇದೇ ನಾದಬ್ರಹ್ಮ; ಇದೇ ಶಬ್ದಬ್ರಹ್ಮ. ಮನುಷ್ಯನಲ್ಲಿರುವ ಇಚ್ಛಾಶಕ್ತಿ, ಜ್ಞಾನಶಕ್ತಿ ಮತ್ತು ಕ್ರಿಯಾ ಶಕ್ತಿಯೇ ಈ ಪ್ರಣವ. ಈ ಮೂರು ಶಕ್ತಿಗಳೂ ಪ್ರಣವದ ಮೂರು ಮಾತ್ರೆ ಗಳು. ಶರೀರದಲ್ಲಿರುವ ಪ್ರಣವ ಜ್ಯೋತಿಯೇ ಈ ಶಕ್ತಿಗಳ ಮೂಲ; ಇವುಗಳ ಪ್ರೇರಕಶಕ್ತಿ. ಈ ಅಕ್ಷರವನ್ನು ತಿಳಿದಮೇಲೆ ಯಾವನು ಏನನ್ನು ಬಯಸು ವನೋ ಅದು ಅವನದಾಗುತ್ತದೆ. ತೈತ್ತಿರೀಯೋಪನಿಷತ್ತು, ಛಾಂದೋ ಗ್ಯೋಪನಿಷತ್ತು. ಮುಂಡಕೋಪನಿಷತ್ತು, ಕಠೋಪನಿಷತ್ತು, ಮಾಂಡೂ ಕ್ಯೋಪನಿಷತ್ತು, ಮನುಧರ್ಮಶಾಸ್ತ್ರ—ಮುಂತಾದುವು ಓಂಕಾರವನ್ನು ವಿಶೇಷವಾಗಿ ವರ್ಣಿಸಿವೆ. ಪ್ರಣವದಿಂದಲೇ ವೇದವು ವಿಸ್ತಾರಗೊಳ್ಳುವುದರಿಂದ 'ಹರಿಃ ಓಂ' ಎಂದು ಪ್ರಣವದಿಂದಲೇ ವೇದಾರಂಭವಾಗುವುದು. ಓಂ ಎಂಬುದು ಇಡೀ ಜಗತ್ತಿನ ಪ್ರಾಣ. ಸೃಷ್ಟಿಯ ಉತ್ಪತ್ತಿಕಾಲದಲ್ಲಿ ಪ್ರಥಮ ವಾಗಿ ಮೂಡಿಬಂದ ನಾದವೇ ಓಂಕಾರ. ಜೀವನು ಓಂಕಾರದ ಮೂಲಕ

ಮೃತ್ಯುವನ್ನು ದಾಟುವನು. ಮಾನವ ಜೀವನದ ಆದಿ–ಅಂತ್ಯವೂ ಇದೇ ಆಗಿದೆ. ಉಪಾಸಕನ ಭಾವನೆ ಹಾಗೂ ಕಾಮನೆಗಳನ್ನು ಪೂರ್ಣಗೊಳಿಸುವ ಶಕ್ತಿ ಇದಕ್ಕಿದೆ. ಜ್ಞಾನಿಗಳು ಧ್ಯಾನಕ್ಕೆ ಕುಳಿತಾಗ ವೀಣೆ, ವೇಣು, ಶಂಖ, ಭೇರಿ ಮೊದಲಾದ ಹತ್ತು ರೀತಿಯ ಧ್ವನಿಗಳು ಕೇಳಿಬರುತ್ತವೆ. ಹತ್ತನೆಯ ಧ್ವನಿಯೇ ಪ್ರಣವ. ಓಂಕಾರವನ್ನು ಶಾಸ್ತ್ರದಲ್ಲಿ 'ತಾರ' ಎಂದು ಪ್ರಯೋಗ ಮಾಡಿದ್ದಾರೆ. ಜನನ–ಮರಣ ಪ್ರವಾಹರೂಪವಾದ ಸಂಸಾರ ಸಾಗರವನ್ನು ದಾಟಿಸುವುದರಿಂದ 'ತಾರ' ಎನ್ನುವರು. ಪ್ರಣವವನ್ನು ಶಾಸ್ತ್ರಗಳು 'ಆತ್ಮ ಮಂತ್ರ'ವೆಂದೂ ಕರೆಯುತ್ತವೆ. ಸಕಲ ವರ್ಣಾತ್ಮಕ ಮತ್ತು ಧ್ವನ್ಯಾತ್ಮಕ ಶಬ್ದಗಳಿಗೂ ಓಂಕಾರವೇ ಮೂಲ. ಸ್ಥೂಲದಿಂದ ಸೂಕ್ಷ್ಮಕ್ಕೆ ಸಾಧಕನನ್ನು ಕರೆದುಕೊಂಡುಹೋಗಿ ಕೊನೆಗೆ ದ್ವೈತಜ್ಞಾನವನ್ನು ನಾಶಮಾಡುವುದೇ ಈ ಪ್ರಣವೋಪಾಸನೆಯ ಉದ್ದೇಶ.

ಓಂಕಾರದಲ್ಲಿ ಮೂರು ಅವಯವ(ವರ್ಣ)ಗಳಿವೆ. 'ಅ'ಕಾರ 'ಉ'ಕಾರ ಮತ್ತು 'ಮ'ಕಾರಗಳೇ ಈ ಮೂರು ಅವಯವಗಳು. (ಲಘುನಾರಾಯಣೋಪನಿಷತ್ತು) 'ಅ'ಕಾರವು ಪ್ರಣವದ ಪ್ರಥಮ ಪಾದ, ವಿಷ್ಣುವಾಚಕವಾದುದು. ಈ ಓಂಕಾರದ ಉತ್ತರಮುಖವಾದ ಈ 'ಅ'ಕಾರ ವಿಷ್ಣುವಿನ ಹೆಸರಿಗೆಲ್ಲಾ ಸಂಕೇತ. ಇದು ಸತ್–ಜಗತ್ತು–ಸ್ಥೂಲ ಪ್ರಪಂಚ–ಭೂಲೋಕ–ಪುರುಷಪ್ರಾಣಿ–ಜಾಗ್ರದಾವಸ್ಥೆ–ಸತ್ತ್ವಗುಣ–ಬ್ರಹ್ಮದೇವರು. ಇವರ ಸ್ಥಾನ ಕಂಠ. ಇದು ಸರ್ವೋತ್ತಮತ್ತ್ವವನ್ನು ಸೂಚಿಸುವುದಾಗಿದೆ. ಇದರಿಂದ ಋಗ್ವೇದ ಆರಂಭ. ಈ 'ಅ'ಕಾರವನ್ನು ಹೇಳುವಾಗ ತುಟಿಗಳು ತೆರೆದಿರುತ್ತವೆ. ಇದು ಸೃಷ್ಟಿಯ ಸೂಚಕ. 'ಉ'ಕಾರವು ಓಂಕಾರದ ದ್ವಿತೀಯ ಪಾದ. ಪಶ್ಚಿಮ ಮುಖದ ಈ 'ಉ'ಕಾರವು ಶಂಕರನ ಹೆಸರುಗಳಿಗೆಲ್ಲಾ ಸಂಕೇತ. ಚಿತ್–ಜೀವ–ಸೂಕ್ಷ್ಮ ಪ್ರಪಂಚ–ಅಂತರಿಕ್ಷ–ಸ್ತ್ರೀಪ್ರಾಣಿ–ಸ್ವಪ್ನಾವಸ್ಥೆ–ರಜೋಗುಣ–ವಿಷ್ಣುದೇವರು. ಇದರ ಸ್ಥಾನ ಮುಖದ ಮಧ್ಯಭಾಗ. ಇದು ಗುಣಪೂರ್ಣತ್ವವನ್ನು ಸೂಚಿಸುವುದಾಗಿದೆ. ಇದು ಲಕ್ಷ್ಮೀ ವಾಚಕವಾದುದು. 'ಉ'ಕಾರವು ಯಜುರ್ವೇದದ ಸಂಕೇತ. ಈ 'ಉ'ಕಾರವನ್ನು ಉಚ್ಚರಿಸುವಾಗ ತುಟಿಗಳು ತೆರೆದೇ ಇರುತ್ತವೆ ಇದು ಸ್ಥಿತಿಯ ಸೂಚಕ. 'ಮ'ಕಾರವು ಓಂಕಾರದ ಮೂರನೇ ಪಾದ. ದಕ್ಷಿಣ ಮುಖದ ಈ 'ಮ'ಕಾರವು ಬ್ರಹ್ಮನ ಹೆಸರುಗಳಿಗೆಲ್ಲಾ ಸಂಕೇತ. ಆನಂದ–ಈಶ್ವರ–ಕಾರಣ ಪ್ರಪಂಚ–ಆಕಾಶ–ನಪುಂಸಕ ಪ್ರಾಣಿ–ಸುಷುಪ್ತಿ–ತಮೋಗುಣ–ರುದ್ರ

ದೇವತೆ. 'ಮ' ಎಂಬುದು ಎಲ್ಲಾ ಸಂಗೀತಮಯ ಧ್ವನಿಗಳ ಅಂತ ಮಾತ್ರ ವಲ್ಲದೆ ಅವುಗಳ ಕೊನೆಯೂ ಆಗಿದೆ. ಇದರ ಸ್ಥಾನ ಓಷ್ಠ(ತುಟಿ)ವಾಗಿದೆ. ಮಕಾರವನ್ನು ಉಚ್ಚರಿಸುವಾಗ ತುಟಿಗಳು ಮುಚ್ಚುತ್ತವೆ. ಇದು ಲಯದ ಸೂಚಕ. ಮಕಾರವನ್ನು ಬಾಯಿ ಮುಚ್ಚಿದನೇಲೂ ಉಚ್ಚರಿಸಬಹುದಾದು ದರಿಂದ ಇದು ಕೊನೆಯನ್ನು ಸೂಚಿಸುತ್ತದಲ್ಲದೆ ಮಧುರವಾಗಿರುವುದರಿಂದ ಸಂಗೀತಮಯತ್ತ್ವವನ್ನೂ ಸೂಚಿಸುತ್ತದೆ. ಇದು ಸ್ವಃ(ಪರಮಸುಖ)ದ ಪ್ರತೀಕವಾಗಿದೆ. ಇದು ಜ್ಞಾನ ಗುಣಾರ್ಥವಾಗಿದೆ (ಪದ್ಮೋದ್ಭವ ಸಂಹಿತೆ). ಮಕಾರವು ಸಾಮವೇದದಲ್ಲಿ ಅಂತ್ಯವಾಗುವುದು. ಇದು ಅಮಿತತ್ತ್ವ ಅಥವಾ ಅನಂತತತ್ತ್ವವನ್ನು ಬೋಧಿಸುವುದು. ಈ ಮೂರು ವಿಭಾಗಗಳೂ ಸತ್–ಚಿತ್–ಆನಂದವನ್ನು ಸೂಚಿಸುವುವು. ಓಂಕಾರಕ್ಕೆ ಈ ಮೂರು ಅವಯವ ಗಳಲ್ಲದೆ ಇನ್ನೂ ಎರಡು ಅವಯವಗಳನ್ನೂ ಹೇಳುತ್ತಾರೆ. ೪) ಪೂರ್ವ ಮುಖ–ಇದೇ ಬಿಂದು. ೫) ಮಧ್ಯದ ಮುಖ–ಇದು ನಾದ. ಹೀಗೆ ಐದು ಭಾಗಗಳಲ್ಲಿ ಆರ್ವಿಭವಿಸಿ, ಈ ಐದೂ ಸೇರಿ 'ಓಂ' ಆಗುತ್ತದೆ. ಶಾಂತ–ಪರಮಾತ್ಮ–ಅವ್ಯಕ್ತ–ಅಲಿಂಗ–ವಿಶ್ವ–ಅನಂತ ಪ್ರಕೃತಿ–ವಿರಾಟ್ಪುರುಷ–ತ್ರಿಗುಣಾತೀತ–ಪರಬ್ರಹ್ಮ. ಇದಲ್ಲದೆ ಓಂಕಾರದಲ್ಲಿ ಎಂಟು ಅವಯವ (ಅಷ್ಟಾಂಗ)ಗಳಿವೆ ಎಂದು ಶಾಸ್ತ್ರಗ್ರಂಥಗಳಲ್ಲಿ ವರ್ಣನ ಇದೆ. ಹೇಗೆಂದರೆ :

| ಸಂ. | ಓಂಕಾರದ ಅವಯವ | ಪರಮಾತ್ಮನ ನಿಯಾಮಕ ರೂಪ |
|---|---|---|
| ೧. | 'ಅ' = ಕಾರ | ವಿಶ್ವ–ಕೃಷ್ಣ |
| ೨. | 'ಉ' = ಕಾರ | ತೈಜಸ–ರಾಮ |
| ೩. | 'ಮ' = ಕಾರ | ಪ್ರಾಜ್ಞ–ನರಸಿಂಹ |
| ೪. | ನಾದ | ತುರೀಯ–ವರಾಹ |
| ೫. | ಬಿಂದು | ಆತ್ಮ–ವಿಷ್ಣು |
| ೬. | ಘೋಷ | ಅಂತರಾತ್ಮ–ಪರಂಜ್ಯೋತಿ |
| ೭. | ಶಾಂತ | ಪರಮಾತ್ಮ–ಬ್ರಹ್ಮ |
| ೮. | ಅತಿಶಾಂತ | ಜ್ಞಾನಾತ್ಮ–ವಾಸುದೇವ |

ಈ ಪ್ರಣವವೇ ಜೀವಕೋಟಿಯ ಜಾಗ್ರತ್ (ಎಚ್ಚರ), ಸ್ವಪ್ನ (ನಿದ್ರೆ) ಮತ್ತು ಸುಷುಪ್ತಿ (ಗಾಢನಿದ್ರೆ) ಎಂಬ ಮೂರು ಅವಸ್ಥೆಗಳು; ಭೂಃ, ಭುವಃ

ಮತ್ತು ಸುವಃ ಎಂಬ ಮೂರು ಲೋಕಗಳು ; ಬ್ರಹ್ಮ, ವಿಷ್ಣು ಮತ್ತು ಮಹೇಶ್ವರರೆಂಬ ಸೃಷ್ಟಿ ಸ್ಥಿತಿ ಮತ್ತು ಸಂಹಾರಕಾರಣರಾದ ಮೂರು ದೇವತೆಗಳು ; ಸತ್ತ್ವ (ಪ್ರಕಾಶ), ರಜಸ್ಸು (ಪ್ರವೃತ್ತಿ) ಮತ್ತು ತಮಸ್ಸು (ಮೋಹ)ಗಳೆಂಬ ಮೂರು ಗುಣಗಳೂ ಮತ್ತು ಋಗ್ಯಜಸ್ಸಾಮಗಳೆಂಬ ಮೂರು ವೇದಗಳೂ, ತಾರ–ಮಂದ್ರ–ಮಧ್ಯಮವೆಂಬ ಮೂರು ಸ್ಥಾಯಿಗಳೂ, ಉದಾತ್ತ–ಅನುದಾತ್ತ–ಸ್ವರಿತವೆಂಬ ಮೂರು ಸ್ವರಬೇಧಗಳೂ, ಹ್ರಸ್ವ–ದೀರ್ಘ–ಪ್ಲುತವೆಂಬ ಮೂರು ಮಾತ್ರೆಗಳೂ ಆಗಿರುವುವೆಂದು ಶಾಸ್ತ್ರಗಳು ಸಾರುತ್ತವೆ. ಈ ಪ್ರಣವದ ಕಲ್ಪನೆಯು ಭಿನ್ನ ಭಿನ್ನವಾಗಿರುವ ಸೃಷ್ಟಿಯ ಹಿಂಬದಿಯಲ್ಲಿರುವ ಏಕತೆಯ ಕಡೆಗೆ ನಿರ್ದೇಶನ ಮಾಡುತ್ತದೆ. ಪರಬ್ರಹ್ಮ ಪ್ರತೀಕವಾಗಿ ಸರ್ವಮಂಗಳ ಸ್ವರೂಪವಾಗಿ, ಸಕಲ ಸ್ವರೂಪವೂ ಆಗಿರುವುದರಿಂದ ಮಂತ್ರಗಳ ಆದ್ಯಂತಗಳಲ್ಲಿಯೂ ಓಂಕಾರವಿರುವುದು. ಓಂ ಎಂಬುದು ಹಿಂದಿನ, ಇಂದಿನ ಮತ್ತು ಮುಂದಿನ ಕಾಲದ್ದಾಗಿದ್ದು ಕಾಲಗಳೆಲ್ಲವನ್ನೂ ಮೀರಿ ಕಾಲನಿಯಮವೇ ಇಲ್ಲದ 'ನಿತ್ಯವಸ್ತು'ವಾಗಿದೆ. ಇದು ಸರ್ವಾತ್ಮಕವಾದ ಸಂಯುಕ್ತವಾದ 'ಓಂ'ಕಾರವು ಹರಿ-ಹರ-ರುದ್ರ ಜೀವ ಮತ್ತು ಪರಮ ಎಂಬ ಐದು ವಿಧವಾದ ದೇವತೆಗಳನ್ನೂ (ಪಂಚ ದೈವತಂ) ಒಳಗೊಂಡಿದೆ. ಇದರ ಉಚ್ಚಾರಣೆಮಾತ್ರದಿಂದ ಸಮಸ್ತಲೋಕಗಳನ್ನೂ ವ್ಯಾಪಿಸಿ ತನ್ನ ಮಹಿಮೆಯನ್ನು ಎಲ್ಲೆಡೆ ಹೊರಗಾಣಿಸುವುದರಿಂದ ಇದು 'ಸರ್ವವ್ಯಾಪಿ'. ಇವನ್ನು ಉಚ್ಚರಿಸಿದೊಡನೆ ಎಲ್ಲೆಡೆಯಲ್ಲಿಯೂ ಹರಡಿಕೊಳ್ಳುವುದಾದರೂ ಇದರ ಸಾಕ್ಷಾತ್ಕಾರ ಕಷ್ಟಸಾಧ್ಯವಾದ್ದರಿಂದ ಇದು 'ಅನಂತ' ; ಇದನ್ನು ಉಚ್ಚರಿಸಿದ ಕೂಡಲೇ ಹುಟ್ಟು, ರೋಗ, ಮುಪ್ಪು, ಸಾವು ಎಂಬ ಅತಿ ಭಯಂಕರವಾದ ಸಂಸಾರ ಸಾಗರವನ್ನು ದಾಟಿಸಬಲ್ಲುದಾದರಿಂದ ಇದು 'ತಾರ' ; ಇದನ್ನು ಉಚ್ಚರಿಸುತ್ತಿದ್ದಂತೆಯೇ ಸಮಸ್ತ ಪಾಪಗಳನ್ನು ಅಂದರೆ ಮಾನಸಿಕ ಪೀಡೆಗಳನ್ನು ಪರಿಹರಿಸಿ ಉಪಾಸಕನನ್ನು ಶುದ್ಧಿಗೊಳಿಸುವುದರಿಂದ ಇದು 'ಶುಕ್ಲ'; ಉಚ್ಚರಿಸಿದೊಡನೆಯೇ ಇದು ಅತಿ ಸೂಕ್ಷ್ಮರೂಪವನ್ನು ತಳೆದು ಪ್ರಾಣಿಗಳ ಶರೀರದಲ್ಲಿ ಚೈತನ್ಯಸ್ವರೂಪವಾಗಿ ನೆಲೆಸಿ ಎಲ್ಲಾ ಅಂಗಗಳೂ ತೊಡಗುವಂತೆ ಮಾಡುವುದರಿಂದ ಇದು 'ಸೂಕ್ಷ್ಮ'; ಉಚ್ಚರಿಸಿದಮಾತ್ರಕ್ಕೆ ಕಣ್ಣೆದುರಿಗೆ ಈ ಜಗತ್ತಿನಲ್ಲಿ ಮಹತಿ-ಮಹತ್ ತತ್ತ್ವದಲ್ಲಿ ಮತ್ತು ತಮಸ್ಸನ್ನು ದೂಡುವ ಮಿಂಚಿನಂತೆ ತಲೆದೋರುವುದರಿಂದ ಇದು

'ವೈದ್ಯುತ' (ಮಿಂಚಿನ ಬಳ್ಳಿ); ಎಲ್ಲಕ್ಕಿಂತಲೂ ಅತಿ ಶ್ರೇಷ್ಠವೆಂದೆನಿಸಿ ಸಮಸ್ತ ಚರಾಚರ ವಸ್ತುಗಳಿಗೂ ಮುಖ್ಯ ಆಶ್ರಯವಾಗಿರುವುದರಿಂದ ಇದು "ಪರಂ;" ಅತಿ ದೊಡ್ಡ ವಸ್ತುವಿಗಿಂತಲೂ ಅತಿದೊಡ್ಡದೆನಿಸಿರುವುದು 'ಬ್ರಹ್ಮ.' ಈ ಎರಡು ಕಾರಣಗಳಿಂದ ಇದು 'ಪರಂಬ್ರಹ್ಮ;' ಪ್ರಾಣಿ ಸಮೂಹವು ಸಮಸ್ತ ದಿಕ್ಕುಗಳನ್ನೂ ಆವರಿಸಿ ಅಲ್ಲಿರುವ ಭೂತವರ್ಗಗಳೊಳಗೆ ಪ್ರವೇಶಿಸಿ, ಅವನ್ನು ಚೈತನ್ಯದಾಯಕಗಳನ್ನಾಗಿ ಮಾಡುವುದಲ್ಲದೆ ಅದು ಒಂದೇ ಇದ್ದರೂ ಚೈತನ್ಯರೂಪದಿಂದ ಸಮಸ್ತ ಭೂತಗಳನ್ನೆಲ್ಲಾ ಆವರಿಸಿಕೊಂಡು, ಅವುಗಳ ಆಗುಹೋಗುಗಳಿಗೂ, ಚಲನ-ವಲನಗಳಿಗೂ ಕಾರಣವಾಗಿ ಅದೊಂದೇ ಆಗಿರುವುದರಿಂದ ಇದು 'ಏಕಃ;' ಚಿತ್ತೈಕಾಗ್ರತೆಗೆ ಆತ್ಮವನ್ನು ಸಾಕ್ಷಾತ್ಕರಿಸಿಕೊಂಡ ಋಷಿಗಳಲ್ಲದೆ ಉಳಿದವರೂ ಅಸಕ್ತರಾಗಿರುವುದರಿಂದ ಇದು 'ರುದ್ರ;' ಎಲ್ಲಾ ದೇವತೆಗಳನ್ನೂ ತನ್ನ ಅಚಿಂತ್ಯವಾದ ಶಕ್ತಿಗಳಿಂದ ಸರಿಯಾದ ನೀತಿಪಥದಲ್ಲಿ ನಡೆಸುವ ಮತ್ತು ಪೋಷಿಸುವ ಹಾಗೂ ಸಂರಕ್ಷಿಸುವ ವ್ಯಕ್ತಿಯೇ ಆದ ಇದು 'ಈಶಾನ;' ಯೋಗೈಶ್ವರ್ಯದಿಂದ ಭಕ್ತರು ಪೂಜಿಸುವ ಮಾಹತ್ಮ್ಯಾದಿ ಷಡ್ಗುಣೈಶ್ವರ್ಯಗಳಿಂದ ಕೂಡಿರುವ ಇದುವೇ 'ಭಗವಾನ್ ಮಹೇಶ್ವರ.' ಎಲ್ಲವನ್ನೂ ತಿಳಿಯುವವನೂ, ಎಲ್ಲರಿಂದ ತಿಳಿಯಲರ್ಹನೂ ಆಗಿರುವುದರಿಂದ ಸರ್ವಜ್ಞನೂ, ಸರ್ವಜ್ಞೇಯನೂ, ದುಷ್ಟಶಿಕ್ಷಕನೂ, ಶ್ರವಣೀಯನೂ, ನಿತ್ಯತೃಪ್ತನೂ, ಸರ್ವರಕ್ಷಕನೂ, ಆಧ್ಯಾತ್ಮಿಕ ಸೌಂದರ್ಯ ತೇಜಃಪ್ರದನೂ, ಬ್ರಹ್ಮಾಂಡಕ್ಕೆ ಗತಿದಾಯಕನೂ, ವಿಶ್ವನಾಥನೂ, ಸರ್ವ ಶ್ರೇಯೋಭಿಲಾಷಿಯೂ ಆದ ಪರಮಾತ್ಮನೇ 'ಓಂ' ಎನಿಸುತ್ತಾನೆ.

'ಅ'ಎಂದರೆ ಸ್ಥೂಲಶರೀರಾಭಿಮಾನಿ 'ವಿರಾಟ್ ಸ್ವರೂಪ.' 'ಉ' ಎಂದರೆ ಲಿಂಗಶರೀರಾಭಿಮಾನಿ 'ಹಿರಣ್ಯಗರ್ಭ' ಮತ್ತು 'ಮ' ಎಂದರೆ ಕಾರಣ ಶರೀರಾಭಿಮಾನಿಯಾದ 'ಈಶ್ವರ.' ಹೀಗೆ ಶರೀರತ್ರಯಾಭಿಮಾನಿ 'ಓಂ.'

'OM' is made up of A+U+M, A=means supreme of superlative person compared to any other deities/men. U=means perfect/complete in all aspects M=means unlimited/endless Omkar is called TARA meaning

as above. It is the root meaning of Vedas. Omkar is called the tara in the Sastras.

ಶರೀರದಲ್ಲಿ ಎಲ್ಲಕ್ಕಿಂತಲೂ ಮುಖ್ಯವಾದ ಅವಯವವೆನಿಸಿರುವ ಸುಷುಮ್ನಾನಾಡಿಯಲ್ಲಿ ಧ್ವನಿಮಾಡುವ ಈ ಪ್ರಣವನಾದಶಕ್ತಿಯಿಂದಲೇ ಮನುಷ್ಯನ ಸಮಸ್ತ ವ್ಯಾಪಾರಗಳೂ ನಡೆಯುತ್ತವೆ. ಶಿರಃ ಪ್ರದೇಶದಲ್ಲಿ ಇಚ್ಛಾಶಕ್ತಿಯೂ, ಅದಕ್ಕಿಂತ ಕೆಳಗೆ ಜ್ಞಾನೇಂದ್ರಿಯಗಳ ಶಕ್ತಿಯೂ, ನಂತರ ಕರ್ಮೇಂದ್ರಿಯಗಳ ಶಕ್ತಿಯೂ ಇರುತ್ತವೆ. ಪ್ರಣವವೇ ಈ ಮೂರು ಶಕ್ತಿಗಳೂ ಆಗಿರುತ್ತದೆ. ಲೋಕದಲ್ಲಿ ಯಾರು ಯಾವ ಕೆಲಸವನ್ನು ಮಾಡಿದರೂ ಮೊದಲು ಮನಸ್ಸಿನಲ್ಲಿ ಇಚ್ಛೆ, ನಂತರ ಆ ವಿಷಯದಲ್ಲಿ ವಿವರವಾದ ಜ್ಞಾನ, ಅನಂತರ ಅದನ್ನು ಕಾರ್ಯರೂಪಕ್ಕೆ ತರುವುದು—ಹೀಗೆ ಮೂರು ಹಂತಗಳಲ್ಲಿ ಕೆಲಸವಾಗುತ್ತದೆ. ಈ ಆತ್ಮಮಂತ್ರವಾದ ಪ್ರಣವವನ್ನು ಸರ್ವದಾ ಅಭ್ಯಾಸ(ಜಪ)ಮಾಡುವುದರಿಂದ ಮನುಷ್ಯನಲ್ಲಿ ಯೋಗದ ಸ್ಥಿತಿಯುಂಟಾಗುತ್ತದೆ. ಪರಮಾತ್ಮನು ಅವರ ಹೃದಯದಲ್ಲಿ ಪ್ರಕಾಶಕ್ಕೆ ಬರುತ್ತಾನೆ. ಈ ಪ್ರಣವ ಜ್ಞಾನವನ್ನು ಸಂಪಾದಿಸುವುದು ಯೋಗಸಾಧನೆಯ ಅಂತಿಮ ಚರಣವಾಗಿರುತ್ತದೆ. ಇದು ಆತ್ಮ ಗರ್ಭದಲ್ಲಿ ಗೋಪ್ಯವಾಗಿರುವ ರಹಸ್ಯ. ಈ ಓಂಕಾರದ ಮಹಿಮೆ ಜಗದ್ವ್ಯಾಪಕವಾಗಿವೆ. ವೇದಗಳಲ್ಲಿಯೂ, ಉಪನಿಷತ್ತುಗಳಲ್ಲಿಯೂ, ದರ್ಶನಗಳಲ್ಲಿಯೂ ಓಂಕಾರದ ವಿಸ್ತೃತವಾದ ವ್ಯಾಖ್ಯಾನವಿದೆ.

'ತತ್' ಎಂಬುದು ವೇದಗಳಲ್ಲಿ ಪರಬ್ರಹ್ಮಬೋಧಕವಾದ ಪದವಾಗಿರುವುದು. ಈ 'ತತ್' ಪ್ರತಿಪಾದ್ಯವಾದ ಪರಮಾತ್ಮನಿಂದ ಪ್ರಪಂಚವು ಸೃಷ್ಟಿಯಾಗಲು 'ಓಂ'ಕಾರ ಸ್ವರವು ಪ್ರಥಮದಲ್ಲಿ ಉದಯಿಸಿತು.

ಈ ಪ್ರಣವೋಚ್ಚಾರಣೆಗೊಂದು ವಿಧಾನವಿದೆ ; ಅದಕ್ಕೊಂದು ವಿಜ್ಞಾನವಿದೆ, ವಿಜ್ಞಾನದೊಡನೆ ಶಾಸ್ತ್ರವಿದೆ. ಮಹರ್ಷಿಗಳು ಧ್ಯಾನದಲ್ಲಿದ್ದಾಗ ಪ್ರಣವ ಘೋಷವು ಅವರಿಗೆ ಒಳಗೆ ಹೇಗೆ ಕೇಳಿಬಂತೋ ಹಾಗೆಯೇ ಅವರು ಅದನ್ನು ತೆಗೆದುಕೊಂಡು ಬಂದರು. ಆದ್ದರಿಂದ ಅದನ್ನು ಹಾಗೆಯೇ ಹೇಳಬೇಕೆಂಬ ಉಚ್ಚಾರಣೆಯ ನಿಯಮವುಂಟು. ಹಾಗೆಯೇ ಈ ಸ್ಥಿತಿಯಲ್ಲೇ ಇರಬೇಕೆಂಬ ನಿಯಮವಿದೆ. 'ಉತ್ + ಚಾರಣೆ' ಎಂದರೆ ಮೇಲ್ಮುಖವಾದ ಸಂಚಾರ ಅಂದರೆ ಉಸಿರಾಟವನ್ನು ಮೇಲಕ್ಕೆಳೆದು—ಬಾಗಿಸುವುದು. ಮೇಲ್ಮುಖವಾಗಿ ಉಚ್ಚಾರಣೆ ಸಾಗಿದಂತೆ ಬಾಯಿ ಸಿಲ್ಲುತ್ತದೆ. ಅಲ್ಲಿ 'ಜಪ' ರೂಪವಾಗಿ,

ಮಾನಸಿಕರೂಪವಾಗಿ ಉಚ್ಚಾರಣೆಯಾಗುತ್ತದೆ. ಆಗ ಶಾಂತ ಸ್ಥಿತಿಬಂದಾಗ ಪರಮಾತ್ಮನಲ್ಲಿ ಎಲ್ಲಾ ಪ್ರಾಣಗಳನ್ನೂ ಸೇರಿಸುವ ಒಂದು ಸ್ಥಿತಿ ಇರುವುದ ರಿಂದ ಪ್ರಣವವಾಗುತ್ತದೆ. ಪ್ರಣವವು ಒಳಗೆ ಮೊಳಗುವ ನಾದ. ಓಂಕಾರವು ಹೃದಯಾಕಾಶದಲ್ಲಿ ಯೋಗಿಗಳ ಅನುಭವಕ್ಕೆ ಬಂದ ನಾದವಿಶೇಷವೆಂದು ಹಿಂದೆಯೇ ತಿಳಿಸಿದೆ. ಅದನ್ನು ಅಂತೆಯೇ ಹೇಳುವುದರಿಂದ, ಅದರ ಆಕಾರಕ್ಕೆ ಮನಸ್ಸು ತಿರುಗುವುದರಿಂದ, ಈ ಜಪ ವಿಧಾನ ಈ ಸದ್ದನ್ನು ಕೇಳುತ್ತಾ ಕೇಳುತ್ತಾ ಮೇಲಕ್ಕೆ ಒಯ್ಯುತ್ತದೆ. ಪ್ರಣವಜಪವು ಜ್ಯೋತಿರ್ಜಪದಲ್ಲಿ ನಿಲ್ಲುತ್ತದೆ. ಇದು ಪರಮಾತ್ಮನ ನೆಲೆಗೆ ಒಯ್ಯುವುದಾದುದರಿಂದಲೇ ಪರಮಾತ್ಮನಿಗೆ ವಾಚಕವೂ ಆಗಿದೆ. ಓಂಕಾರದ ಅರ್ಥವನ್ನು ಬಿಡಿಸಿ ನೋಡಿದರೆ ಉಸಿರಾಟದ ಆರಂಭದಿಂದ ಹಿಡಿದು ಸೃಷ್ಟಿಯ ವಿಕಾಸದ ವರೆಗೂ ಇದರ ಅರ್ಥವಿದೆ. ಮನುಷ್ಯರಲ್ಲಿ ಸಂತಾನಕ್ಕೆ ಮೂಲವಾದ ಶಕ್ತಿ ಇರುವುದು ಮೂಲಾಧಾರ ಚಕ್ರದಲ್ಲಿ. ಇದೇ 'ಓಂ'ಕಾರದಲ್ಲಿನ 'ಅ'ಕಾರ ಸ್ಥಾನವಾಗಿಯೂ, ಸೃಷ್ಟಿಕಾರ್ಯ ಮಾಡುವ ಪ್ರಜಾಪತಿಗೆ (ಚತುರ್ಮುಖ ಬ್ರಹ್ಮನಿಗೆ) ಸ್ಥಾನವಾಗಿಯೂ ಇರುವುದು. ಇದರಿಂದಲೇ ಈ ಚಕ್ರಕ್ಕೆ (ಮೂಲಾಧಾರ ಚಕ್ರಕ್ಕೆ) 'ಬ್ರಹ್ಮಗ್ರಂಥಿ' ಎನ್ನುವರು. (ಉಪನಿಷತ್). ಒರೆಯು ಕತ್ತಿಗೆ ಆಧಾರವಾಗಿರುವಂತೆ ಬ್ರಹ್ಮನನ್ನು ಅರಿಯಲು ಓಂಕಾರವು ಆಧಾರವಾಗಿರುತ್ತದೆ. ಪ್ರಣವವು ಬ್ರಹ್ಮಕ್ಕೆ ಪ್ರತೀಕವಾದದ್ದು. ಅದರ ಮೂಲಕ ಬ್ರಹ್ಮವು ಲಭಿಸುತ್ತದೆ. ಈ ಉಚ್ಚಾರಣೆಯಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ ಓಂಕಾರವನ್ನು ಉಚ್ಚರಿಸಿದಾಗ 'ಅ'ಕಾರ, 'ಉ'ಕಾರ ಮತ್ತು 'ಮಕಾರ'ಗಳ ಉಚ್ಚಾರಣೆಯಲ್ಲಿಯೇ ಕೊನೆಗೊಳ್ಳದೆ 'ಮ'ಕಾರವು ಮುಂದುವರಿಯುತ್ತದೆ. ಈ ಮುಂದುವರಿದ ಮಕಾರವು 'ತುರೀಯ' (Transcendental) ಎಂದು ಕರೆಯಲ್ಪಡುವುದು. ಅಂದರೆ ಈ ಓಂಕಾರವು ಸಗುಣ ಮತ್ತು ನಿರ್ಗುಣ ಬ್ರಹ್ಮವಾಗಿರುವುದು.

ಪ್ರಣವದ ಅರ್ಥಗಳೇ ಗುಣಗಳೂ ಆಗಿವೆ. ಪ್ರಣವೋಪಾಸನೆಯಿಂದ, ಅದರ ಜಪದಿಂದ ಈ ಕೆಳಗಿನ ಹತ್ತೊಂಬತ್ತು ಗುಣಗಳು ಪ್ರಾಪ್ತವಾಗು ತ್ತವೆ : ರಕ್ಷಣೆ, ಗತಿ, ಕಾಂತಿ, ಪ್ರೀತಿ, ತೃಪ್ತಿ, ಅವಗಮ, ಪ್ರವೇಶ, ಶ್ರವಣ, ಸ್ವಾಮಿತ್ವ, ಯಾಚನಾ, ಕ್ರಿಯಾ, ಇಚ್ಛಾ, ದೀಪ್ತಿ, ವ್ಯಾಪ್ತಿ, ಆಲಿಂಗನ, ಹಿಂಸಾ, ದಾನ, ಭೋಗ ಮತ್ತು ವೃದ್ಧಿ.

'ಓಂ' ಶಬ್ದವು ಬ್ರಹ್ಮವಾಚಕವು. ಗಾಯತ್ರಿಯು ಬ್ರಹ್ಮದ ಮಹಾ

ಶಕ್ತಿ, 'ಬ್ರಾಹ್ಮೀ.' ನಾದ, ಬಿಂದು ಮತ್ತು ಕಲಾತ್ರಿಪುಟಿಯು ಪ್ರಣವ ದಲ್ಲಿ ಸನ್ನಿಹಿತವಾಗಿದೆ. ತ್ರಿಪಾದಗಾಯತ್ರಿಯ ಮೂರು ಚರಣಗಳಲ್ಲಿ ಆ ತ್ರಿಪುಟಿಯ ಸಮ್ಮಿಲನವಾದಾಗ ಅಪಾರ ಆನಂದದ ಅನುಭವವಾಗುವುದು. ದಕ್ಷಿಣ ಮಾರ್ಗ ಮತ್ತು ವಾಮಮಾರ್ಗಗಳ ಸಾಧಕರು ತಮ್ಮತಮ್ಮ ರೀತಿ ಯಿಂದ ಆನಂದಾಸ್ವಾದನೆ ಮಾಡುತ್ತಾರೆ.

ಓಂಕಾರಾನುಷ್ಠಾನ ಮಾಡಲಾರಂಭಿಸಿದರೆ ಬ್ರಹ್ಮತತ್ತ್ವಗಳ ವೃದ್ಧಿಯು ದೇಹದ ಒಳಗಡೆ ಆಗುತ್ತದೆ. ಫಲಸ್ವರೂಪವಾಗಿ ಗುಣ, ಕರ್ಮ ಮತ್ತು ಸ್ವಭಾವಗಳಲ್ಲಿ ಬ್ರಾಹ್ಮೀಭಾವಗಳಿಗೆ ಪ್ರಧಾನತೆ ಉಂಟಾಗುತ್ತದೆ. ಈ ಅಭಿ ವರ್ಧನದ ಫಲವಾಗಿ ಮನುಷ್ಯನು ಸ್ವರ್ಗ, ಮೋಕ್ಷ, ಅಮರತ್ವ, ಸಿದ್ಧಿ, ಮಂಗಳ, ನಿರ್ಭಯ, ಆತ್ಮದರ್ಶನ, ಬ್ರಹ್ಮನಿರ್ವಾಣ, ಮನೋಜಯ, ಶಿವತ್ವಗಳ ಕಡೆಗೆ ಮುಂದುವರಿಯುತ್ತಾನೆ. ಈಶ್ವರನ ಈ ಸ್ವಯಂಸಿದ್ಧ ನಾಮದ ಆಶ್ರಯ ಮಾಡುವುದರಿಂದ ಮನುಷ್ಯನು ಈಶ್ವರನ ಕಡೆಗೆ ಹೋಗಲು ಉಪಕ್ರಮಿಸುತ್ತಾನೆ. ಹಗ್ಗ ಹಿಡಿದು ನಡೆಯುವವನು ಹಗ್ಗ ಕಟ್ಟಿರುವ ಜಾಗವನ್ನು ಸೇರುವಂತೆ ಪ್ರಣವವು ಬ್ರಹ್ಮನೊಡನೆ ಸಂಬಂಧಿಸಿ ದ್ದಾದ ಕಾರಣ, ಈ ಆಧಾರದಿಂದ ಬ್ರಾಹ್ಮೀಸ್ಥಿತಿಗೆ ಬರುತ್ತಾನೆ.

ಇಂತಹ ಎಲ್ಲವೂ ಆದ ಮತ್ತು ಎಲ್ಲವನ್ನೂ ತನ್ನಲ್ಲಿ ಒಳಗೊಂಡಿರುವ ಪ್ರಣವದ ಮಂತ್ರದೊಡನೆ ಗಾಯತ್ರಿಯು ಆರಂಭವಾಗುತ್ತದೆ. ಗಾಯ ತ್ರಿಯು ಪ್ರಣವದ ಅರ್ಥ ಮತ್ತು ಅದರಲ್ಲಿರುವ ಅನುಭವಗಳನ್ನೇ ವಿಸ್ತ ರಿಸುತ್ತದೆ. ಈ ಪ್ರಣವದಿಂದಲೇ ಗಾಯತ್ರಿಯು ತನ್ನ ಅಗಾಧವಾದ ಅರ್ಥ ವನ್ನು ತೆಗೆದುಕೊಳ್ಳುತ್ತದೆ. ಪ್ರಣವವನ್ನು ಬೀಜವೆಂದು ಹೇಳುವುದಾದರೆ ಗಾಯತ್ರಿಯನ್ನು ಅದರಿಂದ ಹೊರಬಂದ ವೃಕ್ಷವೆಂದು ಕರೆಯಬಹುದು. ದಾನ ತಪಃ ಕ್ರಿಯೆಗಳನ್ನು 'ಓಂ' ಎಂದು ಉಚ್ಚರಿಸಿ ಪ್ರಾರಂಭಿಸ ಬೇಕೆಂದು ಗೀತೆಯು ಹೇಳುತ್ತದೆ. (೧೭–೨೪). ಓಂಕಾರವು ಪರಮಾತ್ಮ ನನ್ನೇ ಪ್ರತಿಪಾದಿಸುವುದರಿಂದ ಪವಿತ್ರವಾಗಿದೆ.

**ವ್ಯಾಹೃತಿಗಳು :** ವ್ಯಾಹೃತಿಗಳನ್ನು ಮೂಲಾಧಾರವೇ ಮೊದಲಾದ ಏಳು ಚಕ್ರಗಳಲ್ಲಿ ಮನಸ್ಸನ್ನು ಏಕಾಗ್ರಮಾಡಿ ಜಪಿಸಬೇಕು ಎಂದು ವಿಧಿ. ಮೂಲಾಧಾರದಿಂದ ಹಿಡಿದು ಗಹನವಾದ ಬ್ರಹ್ಮಸ್ಥಾನದವರೆಗೆ ಯೋಗಿಯ ಮನಸ್ಸು ಸಂಚರಿಸಿದಾಗ ಪ್ರಣವದಲ್ಲಿರುವ ಎಂಟು ಮಾತ್ರೆಗಳಲ್ಲಿ ಏಳು ಲೋಕಗಳು ಮತ್ತು ಅವಕ್ಕೆ ಮೂಲವಾದ ಶಿವ ಅಥವಾ ಪರಮಾತ್ಮನೂ

ಅಡಕವಾಗಿರುತ್ತವೆ. ಆದುದರಿಂದಲೇ ಓಂಕಾರವನ್ನು ಉಚ್ಚರಿಸಿದ ನಂತರ ವ್ಯಾಹೃತಿಗಳನ್ನೂ ಹೇಳಬೇಕೆಂದು ಶಾಸ್ತ್ರನಿಯಮ. ವ್ಯಾಹೃತಿಗಳು ಪರಮಾತ್ಮನ ಸ್ಥಾನವನ್ನು ಮುಟ್ಟಲು ಏಣಿಗಳಂತೆ ಇವೆ.

ಶ್ರೀಗಾಯತ್ರೀ ಮಂತ್ರದಲ್ಲಿ 'ಓಂ'ಕಾರದ ತರುವಾಯ 'ಭೂಃ', 'ಭುವಃ' ಮತ್ತು 'ಸ್ವಃ' ಎಂಬ ಮೂರು ವ್ಯಾಹೃತಿಗಳು ಬರುತ್ತವೆ. ಇವು ಅನೇಕಾರ್ಥಬೋಧಕಗಳಾಗಿಯೂ, ಅನೇಕ ಭಾವನೆಗಳ ಮತ್ತು ದಿಕ್ಕುಗಳ ಕಡೆಗೆ ಬೊಟ್ಟುಮಾಡಿತೋರಿಸುವವುಗಳಾಗಿಯೂ ಇವೆ. ಅಲ್ಲದೆ ಅನೇಕ ತಥ್ಯಗಳ ಕಡೆಗೆ ನಮ್ಮ ಗಮನ ಸೆಳೆಯುತ್ತವೆ. ಅಗ್ನಿ, ವಾಯು ಮತ್ತು ಸೂರ್ಯ ಈ ಮೂರು ಪ್ರಧಾನ ದೇವತೆಗಳನ್ನೂ ಈ ಮೂರು ವ್ಯಾಹೃತಿಗಳು ಅನುಕ್ರಮವಾಗಿ ಪ್ರತಿನಿಧಿಸುತ್ತವೆ. ಇವು ಬ್ರಹ್ಮ, ವಿಷ್ಣು ಮತ್ತು ಮಹೇಶ್ವರರೆಂಬ ಸೃಷ್ಟಿ, ಸ್ಥಿತಿ ಮತ್ತು ಲಯ ಶಕ್ತಿಗಳ ಹೆಸರುಗಳು. ಈ ವ್ಯಾಹೃತಿಗಳು ಗಾಯತ್ರೀದೇವಿಯ ಅವಯವರೂಪವಾಗಿವೆ. ಈ ಮೂರು ವ್ಯಾಹೃತಿಗಳು ಶ್ರೀಗಾಯತ್ರೀ ಮಂತ್ರದ ಒಂದೊಂದು ಚರಣವನ್ನು ಸೂಚಿಸುತ್ತವೆ. ಇವುಗಳ ಒಂದೊಂದು ಚರಣದಲ್ಲಿ ಮೂರು ಮೂರು ಪದಗಳಿವೆ. ಈ ಪ್ರಕಾರ ಈ ತ್ರಿಗುಣಿತ ಸೂಕ್ಷ್ಮ ಪರಂಪರೆಗಳು ನಡೆಯುತ್ತಾ ಬಂದಿವೆ. ಇವು ಮೂರು ವೇದಗಳನ್ನೂ, ಸತ್–ಚಿತ್–ಮತ್ತು ಆನಂದವನ್ನೂ ಸೂಚಿಸುತ್ತವೆ. ಇವುಗಳಲ್ಲಿ ನಮಗೆ ಸಂಬಂಧವು ಹೆಚ್ಚಾಗಿರುವ ಭೂಲೋಕ, ಭುವರ್ಲೋಕ ಮತ್ತು ಸುವರ್ಲೋಕಗಳನ್ನು ಭೂಃ, ಭುವಃ, ಮತ್ತು ಸ್ವಃ ಎಂಬುವು ಸೂಚಿಸುತ್ತವೆ. ಪ್ರಧಾನ, ಪುರುಷ ಮತ್ತು ಕಾಲಗಳು ಈ ವ್ಯಾಹೃತಿಗಳಲ್ಲಿ ಸೂಚಿತವಾಗಿವೆ ಎಂದುಕೂರ್ಮಪುರಾಣ ಉತ್ತರ ವಿಭಾಗದಲ್ಲಿ (ಅ.೧–೧೪ ಶ್ಲೋ ೫೪) ಹೇಳಿದೆ. ಭೂಃ ಎಂದರೆ ವಿಷ್ಣು. ಭುವಃ ಎಂದರೆ ಲಕ್ಷ್ಮೀ ಎಂದೂ ಅವರಿಬ್ಬರದಾದ 'ಸ್ವಃ' ಎಂಬ ಜೀವನೆಂದೂ ವೃದ್ಧಹಾರೀತಸ್ಮೃತಿ (ಅ-೬-೯೦)ಯು ಹೇಳಿಕೆ. ವೇದಗಳ ಸಾರ ಉಪನಿಷತ್ತುಗಳು. ಉಪನಿಷತ್ತುಗಳ ಸಾರ ಗಾಯತ್ರೀ, ಗಾಯತ್ರಿಯ ಸಾರ ಈ ಭೂಃ, ಭುವಃ, ಸ್ವಃ ಎಂಬ ವ್ಯಾಹೃತಿಗಳು.

ಈ ರೀತಿಯಾಗಿ ಹಲವು ಸಂಕೇತಗಳು ಈ ವ್ಯಾಹೃತಿತ್ರಯಗಳಲ್ಲಿ ಅಡಗಿವೆ. ಈ ಮೂರು ತತ್ತ್ವಗಳನ್ನು ಕುರಿತು ವಿಚಾರಮಾಡಿದರೆ ನಮಗೆ ಅನೇಕ ಅವಶ್ಯಕ ವಿಚಾರಗಳು ಬೆಳಕಿಗೆ ಬರುತ್ತವೆ; ಹಲವು ಮಹತ್ತ್ವಪೂರ್ಣ ಜ್ಞಾನದಾಯಕ ವಿಚಾರಗಳು ಮನದಟ್ಟಾಗುತ್ತವೆ. ಬ್ರಹ್ಮದೇವನು 'ಭೂಃ,

ಮೊದಲಾದ ತ್ರಿಲೋಕಗಳನ್ನು ಉಚ್ಚರಿಸಿದನು. ಆದುದರಿಂದ ಇವು ಸಮಸ್ತವೂ ಬ್ರಹ್ಮಸ್ವರೂಪವಾಗಿವೆ. ಈ ಕಾರಣದಿಂದಲೇ ಈ ಮೂರು ವ್ಯಾಹೃತಿಗಳು ಶ್ರೀಗಾಯತ್ರೀ ಮಂತ್ರದ ಮೊದಲು ಸೇರಲ್ಪಟ್ಟಿವೆ.

ಈ ಮೂರು ವ್ಯಾಹೃತಿಗಳು ಯಾವ ಮೂರು ಕ್ಷೇತ್ರಗಳ ಮೇಲೆ ಪ್ರಕಾಶ ವನ್ನು ಬೀರುವುವೋ ಅವು ವಿಚಾರಣೀಯವಾಗಿವೆ. ಈಶ್ವರ, ಜೀವ, ಪ್ರಕೃತಿ ಗಳ ನಡುವಿನ ತೊಡಕನ್ನು ಈ ವ್ಯಾಹೃತಿಗಳೇ ಬಿಡಿಸುವ ಶಕ್ತಿಯುಳ್ಳವು ಗಳಾಗಿವೆ. ಭೂಲೋಕ, ಭುವರ್ಲೋಕ ಮತ್ತು ಸ್ವರ್ಲೋಕಗಳು ಲೋಕ ವಿಶೇಷಗಳಾಗಿದ್ದಾಗ್ಯೂ, ಅಂತಃಕರಣ, ಶರೀರ ಮತ್ತು ಸಂಸಾರ—ಈ ಮೂರು ಕ್ಷೇತ್ರಗಳೂ ಸೂಕ್ಷ್ಮಲೋಕಗಳಾಗಿದ್ದು, ಅವುಗಳಲ್ಲಿ ಸ್ವರ್ಗ–ನರಕ ಗಳ ರಚನೆಯನ್ನು ಮನುಷ್ಯನು ತನ್ನಷ್ಟಕ್ಕೆ ತಾನೇ ಮಾಡಿಕೊಳ್ಳುತ್ತಾನೆ. ಸತ್ತ್ವ, ರಜ ಮತ್ತು ತಮಗಳೆಂಬ ಮೂರು ಗುಣಗಳಿಂದ ಜೀವನು ಬದ್ಧ ನಾಗಿದ್ದಾನೆ. ಈ ಮೂರರ ಸರಿಯಾದ ಉಪಯೋಗ ಮಾಡಿಕೊಂಡರೆ, ಅವು ಬಂಧನಗಳಾಗದೆ ಮುಕ್ತಿಗೆ ಸಹಾಯಕವೂ, ಆನಂದಕ್ಕೆ ಉಪಕರಣಗಳೂ ಆಗುತ್ತವೆ.

'ವ್ಯಾಹೃತಿ'ಎಂದರೆ ಹೇಳಿಕೆ, ವರ್ಣನೆ, ನಿರೂಪಣೆ ಎಂದರ್ಥ. 'ವ್ಯಾಹೃತ' ನೆಂದರೆ ಉಚ್ಚಾರಣೆ (ವ್ಯಾಕರಣ) ಅಥವಾ ಒಂದು ಮಂತ್ರವಿಶೇಷ. ನನ್ನಿಂದ ಸಂಬೋಧಿಸಲ್ಪಟ್ಟ ನೀನು ಒಂದೇ, ಆದುದರಿಂದ 'ವ್ಯಾಹೃತಿ' ಎಂದು ಹೆಸರು ಬರುತ್ತದೆ(ವಾಯುಪುರಾಣ). ವಿ + ಆ + ಹರ = ವ್ಯಾಹರ. ವಿ = ಎಂದರೆ ವಿಶಿಷ್ಟವಾದ ಒಂದು ನಿರ್ಧಾರಿತವಾದ ಉದ್ದೇಶಕ್ಕೆ ಸಾಧಕವಾದ ತತ್ತ್ವವನ್ನು, ಆ ಎಂದರೆ ಎಲ್ಲಾ ಕಡೆಯಿಂದಲೂ, ಮರಳಿಮರಳಿ, ಹರ= ಎಂದರೆ ಗ್ರಹಿಸು(ಹೃ ಧಾತುವಿನ ಪ್ರಧಾನಾರ್ಥ ಗ್ರಹಿಸು ಎಂಬುದೇ) ವ್ಯಾಹೃತ= ಎಂಬ ಭೂತ ಕೃದ್ವಾಚಿಯಿಂದ ವ್ಯಾಹೃತಿ ಎಂಬ ಸಂಜ್ಞಾಶಬ್ದ ಗ್ರಹಿಸಲ್ಪಡುತ್ತದೆ. ಹೀಗೆ ವ್ಯಾಹೃತಿ ಎಂದರೆ ಸಾರರೂಪವಾಗಿ ಹಿಂಡಿ ತೆಗೆದ ರಸ ಎಂದರ್ಥವಾಗುತ್ತದೆ (ತೈತ್ತಿರೀಯೋಪನಿಷತ್ತು–ಶಿಕ್ಷಾವಲ್ಲಿ). ಭೂ ಮೊದಲಾದ ಏಳು ಲೋಕಗಳನ್ನು ನಿರ್ದೇಶಿಸುವುದರಿಂದ ಅವುಗಳಿಗೆ 'ವ್ಯಾಹೃತಿ' ಎಂದು ಹೆಸರು. ಅರ್ಥಾತ್ ಲೋಕಗಳೇ ವ್ಯಾಹೃತಿಗಳು.

ಬ್ರಾಹ್ಮೀ, ಭಾರತೀ, ಭಾಷಾ, ಗೀಃ, ವಾಣೀ, ಸರಸ್ವತೀ, ವಾಹಾರಃ (ವ್ಯಾಹೃತಿ), ಉಕ್ತಿ, ಲಪಿತಂ, ಭಾಷಿತಂ, ವಚನಂ ಮತ್ತು ವಚಃ ಎಂಬ ೧೩ ಪರ್ಯಾಯ ಪದಗಳಿವೆ.

ವ್ಯಾಹೃತಿಗಳಲ್ಲಿ ಮಹಾವ್ಯಾಹೃತಿ ಮತ್ತು ಸಾಮಾನ್ಯವ್ಯಾಹೃತಿ ಎಂದು ಎರಡು ವಿಧ. ಮೊದಲ ಮೂರು (ಭೂಃ, ಭುವಃ, ಸುವಃ) ಮಹಾ ವ್ಯಾಹೃತಿಗಳು. ಉಳಿದ ನಾಲ್ಕು (ಮಹಃ, ಜನಃ, ತಪಃ ಮತ್ತು ಸತ್ಯಂ) ಸಾಮಾನ್ಯ ವಾಹೃತಿಗಳು. ಈ ಏಳು ವ್ಯಾಹೃತಿಗಳು ಏಳು ಲೋಕಗಳನ್ನು ಸೂಚಿಸುತ್ತವೆ. ಮೊದಲ ಮೂರು ವ್ಯಾಹೃತಿಗಳಲ್ಲಿಯೇ ಉಳಿದ ಲೋಕ ಗಳೂ ಅಡಗಿರುವುದರಿಂದ ಹಾಗೂ ಇವು ಮೂರು ಮೊದಲೇ ಆಗಿರುವುದ ರಿಂದ ಇವು ಮಹಾ ವ್ಯಾಹೃತಿಗಳು.

ಶರೀರವು ಭೂಮಿಯಲ್ಲಿಯೇ ಹುಟ್ಟಿ, ಅಲ್ಲಿಯೇ ನಾಶಹೊಂದುತ್ತದೆ ಎಂಬುದು ನಿಜವಾದರೂ ಆತ್ಮದ ವ್ಯಾಪ್ತಿ ಈ ಭೂಮಿಗೆ ಮಾತ್ರ ಪರಿಮಿತ ವಾಗಿರದೆ ಇಲ್ಲಿಂದ ಸತ್ಯಲೋಕದವರೆಗೆ ಇದೆ. ಈ ಸತ್ಯಲೋಕವನ್ನು ಮೀರಿ ಪರಮಾತ್ಮನವರೆಗೆ ಹಸರಿಸುತ್ತದೆ ಎಂಬುದನ್ನೇ ವ್ಯಾಹೃತಿಗಳು ಹೇಳು ತ್ತವೆ. ವ್ಯಾಹೃತಿಗಳು ಆನುಪೂರ್ವಾಗ್ರವಾದ ವಿಶ್ವದ ನೋಟವನ್ನು ಹೇಳು ತ್ತವೆ.

ಶರೀರವು ಒಂದು ವಿಶ್ವ. ಬ್ರಹ್ಮರೂಪವಾದ ಈ ಶರೀರದಲ್ಲಿಯೇ ಸಮಸ್ತ ಲೋಕಗಳೂ ಇರುತ್ತವೆ. ಧ್ಯಾನದಿಂದ ಸಾಧಕನ ಹೃದಯವು ವಿಸ್ತರಿಸಿ ಈ ಲೋಕಗಳನ್ನು ಸಾಕ್ಷಾತ್ಕರಿಸುವುದಲ್ಲದೆ, ಸತ್ಯಲೋಕವನ್ನೂ ಮೀರಿ ಇರುವ ಪರಮಾತ್ಮನ ದರ್ಶನವನ್ನೂ ಅವನು ಮಾಡುತ್ತಾನೆ. ವ್ಯಾಹೃತಿಗಳನ್ನು ಸಾಧಕನು ಜಪಿಸುವುದರಿಂದ ಆ ಲಕ್ಷ್ಯವನ್ನು ಮುಟ್ಟಲು ತನಗೆ ಒಳದಾರಿ ಯನ್ನು ರಚಿಸಿಕೊಳ್ಳುತ್ತಾನೆ ಎಂಬುದು ವ್ಯಾಹೃತಿಗಳ ಸಾರ.

ಭಾಗವತ ಪುರಾಣದಲ್ಲಿ ಹೀಗೆ ಹೇಳಿದೆ—ಪರಮಾತ್ಮನ ಪಾದಗಳಿಂದ ಭೂಲೋಕವು ನಿರ್ಮಿತವಾಯಿತು. ಭುವರ್ಲೋಕವು ಅವನ ನಾಭಿಯಿಂದ ಸೃಷ್ಟವಾಯಿತು ಮತ್ತು ಅವನ ತಲೆಯಿಂದ ಸ್ವರ್ಗಲೋಕವು ಸೃಷ್ಟವಾಗಿದೆ ಎಂದು ವರ್ಣಿತವಾಗಿದೆ. 'ಸ್ವಃ' ಎಂಬುದು ಸುವರ್ಲೋಕದಿಂದ ಹಿಡಿದು ಸತ್ಯಲೋಕದವರೆಗಿನ ಐದು ಲೋಕಗಳನ್ನೂ ಅಡಕಮಾಡಿಕೊಂಡಿರುತ್ತದೆ ಎಂದು ಇದರ ತಾತ್ಪರ್ಯವಾಗಿದೆ.

ವ್ಯಾಹೃತಿಗಳು ಹೇಳುವ ಲೋಕಗಳು ಮಿಥ್ಯಾಕಲ್ಪನೆಯಾಗಿರದೆ ಯೋಗ ದಿಂದ ಒಳದೃಷ್ಟಿಯು ಬೆಳೆದಾಗ ಮಹರ್ಷಿಗಳಿಗೆ ಕಂಡ ಸತ್ಯಗಳಾಗಿವೆ. ಈ ಮಹರ್ಷಿಗಳು ತಮ್ಮೊಳಗೆ ಲೋಕಗಳನ್ನು ನೋಡಿದುದು ಮಾತ್ರವಲ್ಲದೆ ಆ ಲೋಕಗಳಿಗೆ ಸ್ವಾಮಿಯಾದ ಪರಮಾತ್ಮನನ್ನೂ, ಜೊತೆಗೆ ಆ ಜ್ಯೋತಿಯೇ

ಹೊರಗೆ ಅನಂತವಾಗಿ ಆಕಾಶದ ಹಿಂಬದಿಯಲ್ಲಿಯೂ ಇರುವ ಜ್ಯೋತಿ ಎಂಬುದನ್ನೂ ಮನಗಂಡರು.

ಪ್ರಾಣಾಯಾಮದಲ್ಲಿ ಏಳು ವ್ಯಾಹೃತಿಗಳನ್ನು ಹೇಳಬೇಕೆಂದು ವಿಧಿ. ಆದರೆ ಗಾಯತ್ರೀ ಜಪದಲ್ಲಿ ಮೂರು ವ್ಯಾಹೃತಿಗಳನ್ನೇ ಹೇಳುತ್ತೇವೆ. ಮೂರು ಮತ್ತು ಏಳು ವ್ಯಾಹೃತಿಗಳೆರಡೂ ಆಧ್ಯಾತ್ಮ ಭೂಮಿಯನ್ನು ಒಂದು ಕೊನೆಯಿಂದ ಮತ್ತೊಂದು ಕೊನೆಯವರೆಗೆ ಗುರುತಿಸುತ್ತವೆ. ಆದುದರಿಂದ ಸಂಖ್ಯೆಯಲ್ಲಿ ವ್ಯತ್ಯಾಸವಿದ್ದರೂ ಅವುಗಳು ಹೇಳುವ ವಿಷಯದಲ್ಲಿ ವ್ಯತ್ಯಾಸವಿಲ್ಲ.

ವ್ಯಾಹೃತಿಗಳೊಡನೆ ಜಪಮಾಡುವವನು ಸಮಸ್ತ ವೇದಪಾಠದ ಫಲವನ್ನು ಪಡೆಯುವನು. ವಿಷ್ಣುಸಹಸ್ರನಾಮವು ಕೂಡ ವಿಷ್ಣುವೇ ಏಳು ಲೋಕಗಳಾಗಿ (ವಿಶ್ವವಾಗಿ) ಆಗಿರುತ್ತಾನೆ ಎಂದು ವಿವರಿಸುತ್ತದೆ. ಜ್ಯೋತಿರ್ಮಯನಾದ ಭಗವಂತನಿಂದಲೇ ಭೂಮಿಯಿಂದ ಹಿಡಿದು ಸತ್ಯಲೋಕದವರೆಗೆ ವ್ಯಾಪಿಸಿರುವ ಅಗಾಧವಾದ, ಅನಂತವಾದ, ಅದ್ಭುತವಾದ ಸೃಷ್ಟಿ ಎಲ್ಲವೂ ಉಂಟಾಗಿರುತ್ತದೆ ಎಂದು ಶಾಸ್ತ್ರದ ಹೇಳಿಕೆ. ಭಾಗವತದಲ್ಲಿ ಒಂದುಕಡೆ ಮಹಃ, ಜನಃ, ತಪಃ ಮತ್ತು ಸತ್ಯಲೋಕಗಳೆಲ್ಲವೂ ಪ್ರಳಯಾದಿಗಳಿಗೆ ಸಹ ಸಿಗದ ಶಾಶ್ವತವಾದ ಲೋಕಗಳು ಎಂದು ಹೇಳಿದೆ. ಆದುದರಿಂದಲೇ ಇಲ್ಲಿ ನಾವು ಈ ಮೂರು ವ್ಯಾಹೃತಿಗಳನ್ನು ಮಾತ್ರ ಕುರಿತು ವಿಚಾರ ಮಾಡುತ್ತೇವೆ. ಭೂಃ, ಭುವಃ, ಮತ್ತು ಸ್ವಃ—ಎಂಬ ಮೂರು ವ್ಯಾಹೃತಿಗಳಿಗೆ ಭೂಮಿ, ಜಲ ಮತ್ತು ತೇಜಸ್ಸು ತತ್ತ್ವಗಳೆಂದರ್ಥ. ತೇಜಸ್ಸಿನಿಂದಲೇ ಧ್ಯಾನವು ಪ್ರಾರಂಭವಾಗುವುದು. ಅಂದರೆ ಧ್ಯಾನಮಾಡುವ ಅಧಿಕಾರಿಯು ತೇಜಸ್ಸನ್ನು ಧರಿಸಿಕೊಂಡೇ ಧ್ಯಾನವನ್ನು ಮೊದಲು ಆರಂಭಿಸಬೇಕು. ಆದ್ದರಿಂದ ಭೂಃ ಮತ್ತು ಭುವಃ ಈ ಎರಡನ್ನೂ ದಾಟಿ ತೇಜಸ್ತತ್ತ್ವದಿಂದಲೇ ಧ್ಯಾನಮಾಡಿ ಮೋಕ್ಷವನ್ನು ಪಡೆಯಬೇಕೆಂಬ ತತ್ತ್ವವಾಗಿರುವುದು. ಅಲ್ಲದೆ ಸಪ್ತವ್ಯಾಹೃತಿಗಳ ಸಂಜ್ಞಾರೂಪವೇ ಇವಾಗಿದೆ. ಆದ್ದರಿಂದ ನಮ್ಮಲ್ಲಿರುವ ಲೋಕಗಳ ತತ್ತ್ವಗಳನ್ನು ದಾಟಿಯೇ ಆತ್ಮಸಾಕ್ಷಾತ್ಕಾರವಾಗಬೇಕೆಂಬ ತತ್ತ್ವವೂ ಆಗಿದೆ. ಛಾಂದೋಗ್ಯೋಪನಿಷತ್ತು —ಭೂಃ = ಜ್ಞಾನದಿಂದಲೂ, ಭುವಃ = ಕರ್ಮದಿಂದಲೂ ಮತ್ತು ಸ್ವಃ = ಉಪಾಸನೆಯಿಂದಲೂ ಹೊರಬಂದವು ಎಂದು ವಿವರಿಸುತ್ತದೆ.

ವ್ಯಾಹೃತಿತ್ರಯ ನಿಯಾಮಕರು—ಈ ರೀತಿ ಎಂದು ಹೇಳಿದೆ.

| ಸಂ. | ವ್ಯಾಹೃತಿ | ಋಷಿ | ಛಂದಸ್ಸು |
|---|---|---|---|
| ೧. | ೨. | ೩. | ೪. |
| ೧. | ಓಂ ಭೂಃ | ವಿಶ್ವಾಮಿತ್ರ | ಗಾಯತ್ರೀ |
| ೨. | ಓಂ ಭುವಃ | ಜಮದಗ್ನಿ | ಉಷ್ಣಿಕ್ |
| ೩. | ಓಂ ಸ್ವಃ | ಭಾರದ್ವಾಜ | ಅನುಷ್ಟುಪ್ |

| ಸಂ. | ದೇವತಾ | ನಿಯಾಮಕರು |
|---|---|---|
| ೧. | ೫. | ೬. |
| ೧. | ಅಗ್ನಿ–ಅಂತರ್ಗತ | ಅನಿರುದ್ಧ–ವರಾಹ |
| ೨. | ವಾಯು–ಅಂತರ್ಗತ | ಪ್ರದ್ಯುಮ್ನ–ನೃಸಿಂಹ |
| ೩. | ಸೂರ್ಯ–ಅಂತರ್ಗತ | ಸಂಕರ್ಷಣ–ಕಪಿಲ |

ಸಪ್ತವ್ಯಾಹೃತಿಗಳಲ್ಲೂ ಎಲ್ಲಾ ವ್ಯಾಹೃತಿಗಳ ತತ್ತ್ವಗಳ ಸಂಜ್ಞಾರೂಪ ವಾಗಿ ಭೂಃ, ಭುವಃ, ಸುವಃ ಎಂಬುವನ್ನು ಪ್ರಧಾನವಾದುವನ್ನಾಗಿ ವೇದ ದಲ್ಲಿ ವಿಂಗಡಣೆ ಮಾಡಿದೆ. ಓಂಕಾರದಲ್ಲಿನ ಮೂರು ಮಾತ್ರೆಗಳ ತತ್ತ್ವಗಳಿ ಗನುಸಾರವಾಗಿಯೇ ಈ ವ್ಯಾಹೃತಿಗಳ ತತ್ವಗಳನ್ನೂ ಹೇಳಬಾಗಿದೆ.

| ಭೂಃ | ಭುವಃ | ಸುವಃ |
|---|---|---|
| ಅಕಾರ | ಉಕಾರ | ಮಕಾರ |
| ವಿರಾಟ್ ಸ್ವರೂಪ | ಹಿರಣ್ಯಗರ್ಭ | ಈಶ್ವರ |
| ವಿಶ್ವ | ತೈಜಸ | ಪ್ರಾಜ್ಞ |
| ಜಾಗ್ರತ್ | ಸ್ವಪ್ನ | ಸುಷುಪ್ತಿ |
| ಬ್ರಹ್ಮ | ವಿಷ್ಣು | ರುದ್ರ |
| ಬಿಂದು | ನಾದ | ಕಳಾ |
| ಹ್ರಸ್ವ | ದೀರ್ಘ | ಪ್ಲುತ |
| ಸೃಷ್ಟಿ | ಸ್ಥಿತಿ | ಲಯ |

| | | |
|---|---|---|
| ಗಾರ್ಹಪತ್ಯಾಗ್ನಿ | ದಕ್ಷಿಣಾಗ್ನಿ | ಆಹವನೀಯಾಗ್ನಿ |
| ಪ್ರಾತಃಕಾಲ | ಮಧ್ಯಾಹ್ನ ಕಾಲ | ಸಾಯಂಕಾಲ |
| ಬ್ರಹ್ಮಗ್ರಂಥಿ | ವಿಷ್ಣುಗ್ರಂಥಿ | ರುದ್ರಗ್ರಂಥಿ |
| ಸತ್ತ್ವ | ರಜಸ್ಸು | ತಮಸ್ಸು |
| ಭೂಮಿ | ಜಲ | ತೇಜಸ್ಸು |
| ಸತ್ಯ | ಜ್ಞಾನ | ಅನಂತ |
| ಪೂರ್ಣ | ಐಶ್ವರ್ಯ | ಸುಖ |

ತೈತ್ತಿರೀಯೋಪನಿಷತ್ತಿನ ಶಿಕ್ಷಾವಲ್ಲಿಯಲ್ಲಿ ಹೀಗೆ ಹೇಳಿದೆ :

೧. ಭೂಃ —ಈ ಸಮೀಪಸ್ಥ ಲೋಕ, (ಭೂಲೋಕ), ಅಗ್ನಿ, ಋಗ್ವೇದ, ಪ್ರಾಣ. (ಜೀವನದಾತ)

೨. ಭುವಃ—ಅಂತರಿಕ್ಷಲೋಕ, ವಾಯು, ಸಾಮವೇದ, ಅಪಾನ. (ರಕ್ಷಕ)

೩. ಸ್ವಃ —ದ್ಯುಲೋಕ (ಸ್ವರ್ಗಲೋಕ), ಆದಿತ್ಯ, ಯಜುರ್ವೇದ, ವ್ಯಾನ. (ಕ್ರಿಯಾಶೀಲ)

ಇದರ ವಿವರವನ್ನು ಈ ರೀತಿಯಾಗಿ ಹೇಳಬಹುದು. (೧) ಭೂಃ–ಭಗವಂತನು ಈ ಲೋಕವನ್ನೆಲ್ಲಾ ವ್ಯಾಪಿಸಿ, ಅಗ್ರಣಿಯಾಗಿ, ಋಗ್ವೇದೀಯ ಜ್ಞಾನದಿಂದ ಬಾಳಿಗೆ ಬೆಳಕನ್ನು ತರುತ್ತಾ ಪ್ರಾಣಕ್ಕೆ ಪ್ರಾಣವಾಗಿದ್ದಾನೆ. (೨) ಭುವಃ–ಭಗವಂತನು ಅಂತರಿಕ್ಷದಲ್ಲೆಲ್ಲಾ ವ್ಯಾಪಿಸಿ, ಜೀವನ ದಾನ ಮಾಡುತ್ತಾ ಸಾಮವೇದೀಯ ಜ್ಞಾನದ ಮೂಲಕ ಹೇಯವಾದ ಅಂಶಗಳನ್ನೆಲ್ಲಾ ದೂರೀಕರಿಸಿದ್ದಾನೆ. (೩) ಸ್ವಃ–ಭಗವಂತನು ದ್ಯುಲೋಕದಲ್ಲೆಲ್ಲಾ ವ್ಯಾಪಿಸಿ, ಸೂರ್ಯ ಎಂದರೆ ಸಂಚಾಲಕನಾಗಿ, ಯಜುರ್ವೇದೀಯ ಜ್ಞಾನದ ಮೂಲಕ ವಿಶಿಷ್ಟ ಶಕ್ತಿಯನ್ನು ವಿಸ್ತರಿಸಿದ್ದಾನೆ.

**ಭೂಃ (ಭೂಮಿ)** : 'ಭೂ' ಎಂಬ ಸತ್ಯಸ್ವರೂಪನಾದ ಭಗವಂತನನ್ನು ಸೂಚಿಸುವ ಈ ವ್ಯಾಹೃತಿಯು, ಆ ಭಗವಂತನು ಪ್ರತ್ಯಕ್ಷ ಪ್ರಕಾಶನಾಗಿಯೂ, ಜಗದಗ್ರಣಿಯಾಗಿಯೂ, ಸ್ತುತ್ಯನೂ, ಪ್ರಾಣರೂಪನೂ ಆಗಿದ್ದಾನೆ ಎಂದು ಹೇಳುತ್ತದೆ. ಋಗ್ವೇದ ಅಥರ್ವ ವೇದಗಳ ಜ್ಞಾನ–ವಿಜ್ಞಾನ ಭಂಡಾರವಾದ ಈ ವ್ಯಾಹೃತಿಯು ಆ ಜ್ಞಾನ–ವಿಜ್ಞಾನಗಳ ರಸ–ಸಾರ; ಸಮಸ್ತ ಜ್ಞಾನ–ವಿಜ್ಞಾನಗಳ ರಹಸ್ಯ–ಸತ್ಯ. ಸತ್ಯನೇ–ಭೂಃ,

ಜ್ಞಾನವೇ–ಭೂಃ. ವೇದದಲ್ಲಿ ಪರಮಾತ್ಮನನ್ನು 'ನುರುತ' ಎನ್ನುವರು. ಇದರ ಅರ್ಥವೂ 'ಪ್ರಾಣ'ವೆಂದೇ. ಪ್ರಾಣವನ್ನೇ ಜ್ಯೇಷ್ಠ ಹಾಗೂ ಶ್ರೇಷ್ಠ ವೆಂದೂ ಕರೆಯುತ್ತಾರೆ.

ವ್ಯಾಹೃತಿಯಲ್ಲಿ 'ಸತ್ತಾ' ಎಂದರೆ 'ಅಸ್ತಿತ್ವ' (ಇರುವಿಕೆ) ಎಂಬುದೇ ಮುಖ್ಯಾರ್ಥವಾಗಿರುತ್ತದೆ. ಸರ್ವಪ್ರಯತ್ನವನ್ನೂ ತನ್ನ ಅಸ್ತಿತ್ವ (Existence)ಕ್ಕಾಗಿಯೇ ಮಾಡಬೇಕಾಗುತ್ತದೆ, ಒಂದು 'ವ್ಯಕ್ತಿಗತ' ಅಸ್ತಿತ್ವ (Individual Existence) ಮತ್ತೊಂದು 'ಸಾಮುದಾಯಿಕ' ಅಸ್ತಿತ್ವ (Collective Existence]· ಮನುಷ್ಯನು ತನಗೋಸ್ಕರ ಜೀವಿಸುವಂತೆಯೇ ಸಮಾಜಕೋಸ್ಕರವಾಗಿಯೂ ಜೀವಿಸುತ್ತಾನೆ. ಸಂಘ ವಿಲ್ಲದೆ ಮನುಷ್ಯನು ಜೀವಿಸಲಾರನು. ವ್ಯಕ್ತಿಗತ ಮತ್ತು ಸಾಮುದಾಯಿಕ ಅಸ್ತಿತ್ವವನ್ನು ಕಾಪಾಡಬೇಕೆಂಬ ಸೂಚನೆ 'ಭೂಃ' ಎಂಬ ವ್ಯಾಹೃತಿಯಲ್ಲಿ ಪ್ರಥಮತಃ ಕೊಟ್ಟಿದೆ. ಅಂದರೆ ಆದರ್ಶಜೀವನ ನಡೆಸಬೇಕೆಂಬ ಸಂದೇಶ, ಸೂಚನೆ ಇಲ್ಲಿದೆ. ಇಡೀ ಸೃಷ್ಟಿಯ ಪ್ರಾಣಾಧಾರ, ಜೀವದಾತ, ಪರಮಾತ್ಮನೇ ಆಗಿರುವುದರಿಂದ ಗಾಯತ್ರೀ ಮಂತ್ರದ ಮೊದಲ ವ್ಯಾಹೃತಿಯಲ್ಲಿ ದೇವತೆಗಳ ದೇವನಾದ ಪರಮಾತ್ಮನನ್ನು 'ಭೂಃ' ಶಬ್ದದಿಂದ ಕರೆಯ ಲಾಗಿದೆ.

**ಭುವಃ (ಅಂತರಿಕ್ಷ) :** 'ಭುವಃ' ಎಂಬ ಚೇತನಸ್ವರೂಪನಾದ ಭಗವಂತನನ್ನು ಸೂಚಿಸುವ ಈ ವ್ಯಾಹೃತಿಯು, ಆ ಭಗವಂತನು ಅಂತ ರ್ಯಾಮಿಯೂ, ಜೀವಪ್ರದನೂ, ಶಾಂತನೂ, ಪಾಪ–ತಾಪ ನಿವಾರಕನೂ ಆಗಿದ್ದಾನೆ ಎಂದು ಹೇಳುತ್ತದೆ. ದುಃಖದಿಂದ ಪಾರುಮಾಡುವ ಚಿತ್ತ, ಅಪಾನ. ಯಜುರ್ವೇದ ಕರ್ಮಶಾಸ್ತ್ರದ ಭಂಡಾರ. ಆ ಕರ್ಮಶಾಸ್ತ್ರದ ರಸ–ಸಾರ ಭುವಃ. ಕರ್ಮವಿಸ್ತಾರದ ರಸವೇ–ಚೈತನ್ಯ. ಚೈತನ್ಯವೇ ಭುವಃ ; ಪ್ರಯತ್ನವೇ ಭುವಃ.

'ಭೂಃ' ವ್ಯಾಹೃತಿಯ ಪೂರ್ವೋಕ್ತ ಅರ್ಥಗಳ ಜೊತೆಗೆ ಇದರಲ್ಲಿ ಶುದ್ಧಿ, ಕ್ರಮ, ಚಿಂತನೆ ಮತ್ತು ಮಿಶ್ರಣ ಈ ಭಾವವು ವಿಶೇಷವಾಗಿರುತ್ತದೆ. ಈ ವ್ಯಾಹೃತಿಯಲ್ಲಿ 'ಭಾವನೆ'ಯೂ, ಮೊದಲನೆ ವ್ಯಾಹೃತಿಯಲ್ಲಿ 'ಕರ್ಮವೂ' ಪ್ರಧಾನವಾಗಿವೆ. ಭೂನಲ್ಲಿ ಹೃದಯುನ ಭಾವನೆಗೂ, ಭುವಃ ವ್ಯಾಹೃತಿಯಲ್ಲಿ ಕಾಯೇನ, ವಾಚಾ, ಮನಸಾ ಮಾಡುವ ಕರ್ಮಗಳಿಗೂ ವಿಶೇಷ ಸಂಬಂಧ

ವಿರುತ್ತದೆ. ಭೂಃ–ವ್ಯಾಹೃತಿಗೆ 'ಪೃಥಿವಿ'ಯೊಡನೆ ಎಂದರೆ 'ಸ್ಥೂಲ'ದೊಡನೆ ಸಂಬಂಧವಿರುತ್ತದೆ ಮತ್ತು ಭುವಃ–ವ್ಯಾಹೃತಿಗೆ 'ಅಂತರಿಕ್ಷ'ದೊಡನೆ ಎಂದರೆ 'ಸೂಕ್ಷ್ಮ'ದೊಡನೆ ಸಂಬಂಧವಿರುತ್ತದೆ. ಭೂಃ–ವ್ಯಾಹೃತಿಯು ಸ್ಥೂಲ ಶರೀರ ಮತ್ತು ಸ್ಥೂಲ ಇಂದ್ರಿಯಗಳನ್ನೂ, ಭುವಃ–ವ್ಯಾಹೃತಿಯು ಅಂತರಿಕ್ಷ ಮತ್ತು ಸೂಕ್ಷ್ಮಭಾವನೆಗಳನ್ನೂ ನಿರ್ದೇಶಿಸುತ್ತವೆ. ಹೃದಯ ಶುದ್ಧಿಯಾಗಿರುವವರ ಬಾಹ್ಯಾಚರಣೆಯೂ ಸಹ ಶುದ್ಧಿಯಾಗಿಯೇ ಇರುವುದು. ಈ 'ಭುವಃ' ಪರಮಾತ್ಮನೊಡನೆ ಸಂಪರ್ಕ ಆಳವಾದಷ್ಟೂ ಸುಖವೂ ಸಹಾ ಅದೇ ರೀತಿ ವೃದ್ಧಿಯಾಗುವುದು.

**ಸ್ವಃ (ಆಕಾಶ)** : 'ಸ್ವಃ'–ಎಂಬ ಆನಂದಮಯನಾದ ಭಗವಂತನನ್ನು ಸೂಚಿಸುವ ಈ ವ್ಯಾಹೃತಿಯು, ಆ ಭಗವಂತನು ಪರೋಕ್ಷ ಪ್ರಕಾಶನೂ, ಅಖಂಡನೂ, ಯಜ್ಞಸ್ವರೂಪನೂ, ವಿಶಿಷ್ಟ ಶಕ್ತಿದಾಯಕನೂ ಆಗಿದ್ದಾನೆ ಎಂದು ಹೇಳುತ್ತದೆ. ಸಾಮವೇದವು ಉಪಾಸನಾ ಭಂಡಾರ. ಆ ಉಪಾಸನಾ ಶಾಸ್ತ್ರದ ರಸ–ಸಾರ ಸ್ವಃ. ಉಪಾಸನಾಕ್ರಿಯೆಯ ರಸ–ಆನಂದ. ಆನಂದವೇ ಸ್ವಃ ; ಸುಖವೇ–ಸ್ವಃ. ಪರಮೇಶ್ವರನ ಹೆಸರೇ 'ಸ್ವಃ'–ಸುಖದಾತ, ಆನಂದ ದಾತ, ವ್ಯಾನ, ಆನಂದ, ಬ್ರಹ್ಮ–ಎಂದು.

ಈ ವ್ಯಾಹೃತಿಯಲ್ಲಿ ಮಾನವನಿಗೆ ಧ್ಯೇಯಮಾರ್ಗದ ಉಪದೇಶವು ದೊರೆಯುತ್ತದೆ. ಪ್ರಕಾಶ, ಜ್ಞಾನ, ಆತ್ಮೀಯತೆ ಅಥವಾ ಸ್ವಾತಂತ್ರ್ಯ ಮೊದಲಾದ ಶಬ್ದಗಳಲ್ಲಿ ಶುದ್ಧವಾದ ಆನಂದಾವಸ್ಥೆಯು ನಿರ್ದೇಶಿತವಾಗಿದೆ. ಯಾವ ಅನುಷ್ಠಾನವು 'ಭೂಃ'ಮತ್ತು 'ಭುವಃ'ಗಳಲ್ಲಿ ಸೂಚಿತವಾಯಿತೋ ಅದರ ಅಂತಿಮ ಸಾಧ್ಯವು 'ಸ್ವಃ ಎಂಬ ಈ ವ್ಯಾಹೃತಿಯಲ್ಲಿ ನಿರ್ದೇಶಿಸಿದೆ.

೧. ನಿಮ್ಮ ಅಸ್ತಿತ್ವವನ್ನು ಕಾಪಾಡಿಕೊಳ್ಳಿ.
೨. ಜ್ಞಾನವನ್ನು ಸಂಪಾದಿಸಿಕೊಳ್ಳಿ.
೩. ಉತ್ತಮ ಮಾರ್ಗದಲ್ಲಿ ಪ್ರವಿಷ್ಟರಾಗಿರಿ.

ಈ ಮೂರು ಮುಖ್ಯ ಭಾವಗಳು ಮೂರು ವ್ಯಾಹೃತಿಗಳಿಂದ ಪ್ರಾಪ್ತವಾಗುವುವು. ಉಳಿದ ಇತರ ಭಾವಗಳನ್ನು ಹಿಂದೆಯೇ ಉದಾಹರಿಸಿದೆ. ಈ ಮೂರುವ್ಯಾಹೃತಿಗಳೂ ಸಾಂಕೇತಿಕಮಹತ್ತ್ವಪೂರ್ಣವಾದ ಶಬ್ದಗಳಾಗಿವೆ.

ಅನೇಕ ಮಹರ್ಷಿಗಳೂ ಮತ್ತು ಮಹರ್ಷಿಯರೂ ಶ್ರೀಗಾಯತ್ರೀ ಮಂತ್ರದ ಪ್ರತಿಯೊಂದು ಪದಕ್ಕೂ, ಪ್ರತಿಯೊಂದು ವರ್ಣಕ್ಕೂ ವಿಶೇಷ

ವ್ಯಾಖ್ಯಾನವನ್ನು ಮಾಡಿರುತ್ತಾರೆ ಮತ್ತು ತಮ್ಮತಮ್ಮ ದೃಷ್ಟಿಕೋನಕ್ಕೆ ಅನುಗುಣವಾಗಿ ಅರ್ಥಮಾಡಿರುವರು. ಇವುಗಳನ್ನು ಈ ಮುಂದೆ ಸಂಕ್ಷೇಪ ವಾಗಿ ವಿವರಿಸಿದೆ. ಈ ವ್ಯಾಹೃತಿಗಳ ನಂತರ ಶ್ರೀಗಾಯತ್ರಿ ಮಂತ್ರ ಪ್ರಾರಂಭವಾಗುತ್ತದೆ. ಈ ಮಂತ್ರದಲ್ಲಿ ಬರುವ ನಾಲ್ಕು ಶಬ್ದಗಳು–ಸವಿತೃಃ–ವರೇಣ್ಯಂ–ಭರ್ಗಃ–ಮತ್ತು ದೇವಸ್ಯ–ಎಂಬುವು ಬಹು ಮಹತ್ತ್ವ ಪೂರ್ಣವಾದುವು. ಇವುಗಳ ವಿವರಣೆ ಮುಂದೆ ಕೊಡಲಾಗಿದೆ.

ಪ್ರತಿ ಮುಖ್ಯ ದೈವಕ್ಕೆ ಸಂಬಂಧಪಟ್ಟಂತೆಯೂ ಒಂದೊಂದು ಗಾಯತ್ರೀ ಮಂತ್ರವಿದೆ. ಈ ಗಾಯತ್ರೀಮಂತ್ರಗಳ ಸಾಮಾನ್ಯ ರಚನಾಕ್ರಮ ಒಂದೇ. ದೇವರ ಹೆಸರು ಮಾತ್ರಾ ಆಯಾ ಸ್ಥಾನಗಳಲ್ಲಿ ಬದಲಾಯಿಸಲಾಗಿದೆ. 'ಧೀಮಹಿ' 'ವಿದ್ಮಹೇ' ಪ್ರಚೋದಯಾತ್'' ಎಂಬ ಪ.ದಗಳು ಎಲ್ಲಾ ಗಾಯತ್ರಿಗಳಿಗೂ ಸಾಮಾನ್ಯವಾಗಿವೆ. ಆದ್ದರಿಂದ ಈ ಪದಗಳಲ್ಲೇ ಗಾಯತ್ರೀ ಮಂತ್ರದ ಮಹತ್ವದ ಸತ್ವ ಅಡಗಿರಬೇಕೆಂಬುದನ್ನು ಸಹಜ ವಾಗಿ ತೀರ್ಮಾನಿಸಬಹುದು.

ತತ್ : ಇದು ಗಾಯತ್ರೀ ಮೂಲ ಮಂತ್ರದ ಆರಂಭದ ಪದ. ಇದಕ್ಕೆ 'ಅದು' ಎಂದರ್ಥ. ಇದು ನಪುಂಸಕಲಿಂಗದ ಸರ್ವನಾಮ ಶಬ್ದ. ಇದನ್ನು ಪ್ರತಿಪಾದಿಸುವ ನಾಮಪದವು ಇದರಲ್ಲಿಲ್ಲ. ಅನಿರ್ವಾಚ್ಯವಾದ ನಾಮರೂಪ ಗಳಿಲ್ಲದ ಯಾವುದೋ ಒಂದು ವಸ್ತುವನ್ನು ಇದು ನಿರ್ದೇಶಿಸುತ್ತದೆ. ವೈದಿಕ ವಾಙ್ಮಯದಲ್ಲಿ ನಿರ್ದಿಷ್ಟವಾಗಿ ತೋರಿಸುವುದಕ್ಕೆ ಸಾಧ್ಯವಾಗದಿರು ವಾಗ 'ತತ್'' ಎಂಬ ಶಬ್ದ ಉಪಯೋಗಿಸಲ್ಪಡುತ್ತದೆ. ದೂರದಲ್ಲಿರುವ ಯಾವುದೋ ಒಂದು ವಸ್ತುವನ್ನು ಸೂಚಿಸುವ, ಇಲ್ಲವೆ ಬೊಟ್ಟುಮಾಡಿ ತೋರಿಸುವಾಗ 'ಅದು' ಎಂಬ ಪದವನ್ನು (ತತ್ ಶಬ್ದವನ್ನು) ಉಪಯೋಗಿ ಸುತ್ತೇವೆ. ಈ ಅದು ಎಂಬುದರ ವ್ಯಾಪ್ತಿಯು ಬಹು ದೊಡ್ಡದು. ಗಾಯತ್ರಿಯಲ್ಲಿ 'ತತ್'' ಪದದಿಂದ ಅರ್ಥದ ದಿಗ್ದರ್ಶನ ಮಾತ್ರವೇ ಆಗುವು ದಿಲ್ಲ; 'ತತ್'' ಪದಕ್ಕೆ ಮೂಲತಃ 'ಪರಮಾತ್ಮಾ' ಎಂಬ ಅರ್ಥವೂ, ತತ್ತ್ವತಃ ಪರಮಾತ್ಮನ ದಿಗ್ದರ್ಶನವೂ ಆಗುತ್ತದೆ. ಇದು ಪರಬ್ರಹ್ಮವಾಚ್ಯ ಶಬ್ದ. 'ಓಂ ತತ್ ಸತ್' 'ತತ್ ತ್ವಂ ಅಸಿ' ಮುಂತಾದ ಸ್ಮೃತಿವಾಕ್ಯ ಗಳಲ್ಲಿಯೂ ಇದೇ ಮಾರ್ಗವನ್ನು ಅವಲಂಬಿಸಲಾಗಿದೆ. ವೇದದಲ್ಲಿ ಇದು ಪರಮಾತ್ಮ ಬೋಧಕವಾದ 'ಶಬ್ದ. 'ಪರಮಾತ್ಮ'ನನ್ನು ನೋಡು, 'ಪರ ಬ್ರಹ್ಮ'ನನ್ನು ನೋಡು ಎಂದು ಸಂಕೇತ ಮಾತ್ರ ಸೂಚಿಸುತ್ತದೆ. ಪರಮಾತ್ಮನ

ದಿಕ್ಕನ್ನು ತೋರಿಸುತ್ತದೆ. 'ಇದೊ! ಈ ದಾರಿಯಲ್ಲಿ ಹೋದರೆ ಆ ಪರಮಾತ್ಮನ ಬಳಿಗೆ ಹೋಗಬಹುದು' ಎಂದು ಇದರ ಅರ್ಥ. ಸಂಕೇತಮಾತ್ರವಾಗಿ ಪರಮಾತ್ಮನನ್ನು ಸೂಚಿಸುವುದರ ಕಾರಣವೇನೆಂದರೆ—ಪರಮಾತ್ಮನು ಮಾನವ ಬುದ್ಧಿಗೆ ಎಟುಕದ ವಸ್ತು. ಅವನು ಬಹಳ ದೂರ ಅಂದರೆ ಅಸ್ಪಷ್ಟ.ಆದುದರಿಂದ ಅವನ ಹಿರಿಮೆಯನ್ನು ಮಹಿಮೆಯನ್ನು ಎಷ್ಟು ವರ್ಣಿಸಿದರೂ ಅದು ಅಪೂರ್ಣವೇ. ಅಸ್ಪಷ್ಟ, ಅದು ಪೂರ್ಣವಾಗಲಾರದು. ಯಾವುದೇ ಶಬ್ದದಿಂದಲೂ ಪರಮಾತ್ಮನನ್ನು ಸಂಪೂರ್ಣವಾಗಿ ತಿಳಿಸಲು ಸಾಧ್ಯವಿಲ್ಲ. ಆದ್ದರಿಂದ ಈ ರೀತಿ ಸೂಚಿಸಲಾಗಿದೆ. ದೂರದಲ್ಲಿರುವ ವಸ್ತುವನ್ನು ಬೆರಳಿನಿಂದ ಸಂಜ್ಞೆ ಮಾಡಿ ತೋರಿಸಿ 'ಅದೋ ಆ ವಸ್ತು ಅಲ್ಲಿದೆ' ಎಂದು ಸೂಚಿಸುವಂತೆ, ಈ ವರ್ಣನೆಯೂ ಪರಮಾತ್ಮನನ್ನು ಕುರಿತಾದ ಒಂದು ಸಂಕೇತ ಮಾತ್ರವಾಗಿದೆ. ಆ ವಸ್ತುವನ್ನು ನೋಡುವುದು ನೋಡುವವನ ನೇತ್ರ ಜ್ಯೋತಿಯನ್ನು ಪೂರ್ಣವಾಗಿ ಅವಲಂಬಿಸಿರುತ್ತದೆ. ಬೆರಳುಮಾಡಿ ತೋರಿಸುವುದರಿಂದ ಯಾವ ದಿಕ್ಕಿನಲ್ಲಿ ಆ ವಸ್ತುವಿದೆಯೋ ಆ ದಿಕ್ಕಿನ, ಮಾರ್ಗದ ಜ್ಞಾನವನ್ನು ಮಾತ್ರ ಮಾಡಲಾಗುತ್ತದೆ. ಗಾಯತ್ರಿಯು ಆರಂಭದ ಪದವಾದ 'ತತ್' ಎಂಬುದರಲ್ಲಿ ಈ ಮರ್ಯಾದೆಯನ್ನು ಸೂಚಿಸಲಾಗಿದೆ. ಪರಮಾತ್ಮನ ಸ್ವರೂಪ ವರ್ಣನೆ ಮಾಡುವುದಕ್ಕಿಂತಲೂ 'ಆ' ಪರಮಾತ್ಮನನ್ನು ನೋಡಿರೆಂದು ಬರೀ ಸಂಕೇತ ಮಾತ್ರವನ್ನು ಕೊಡಲಾಗಿದೆ. ಇಲ್ಲಿ ಸಾಧಕನ ಸಾಧನೆಯೂ ಸೂಚ್ಯವಾಗಿದೆ. ಆ ಪರಮಾತ್ಮ ಹೇಗಿದ್ದಾನೆಂಬುದರ ಜ್ಞಾನವು ಶಬ್ದ, ರೂಪ, ರಸ, ಗಂಧ, ಸ್ಪರ್ಶಗಳೆಂಬ ಪಾಂಚಭೌತಿಕ ತನ್ಮಾತ್ರಗಳಿಂದಾಗದೆ, ನೋಡುವವರ ಅಂತರಾತ್ಮನ ಮೂಲಕ ಆಗುತ್ತದೆ. ಆತ್ಮವು ಪರಮಾತ್ಮನ ಬಳಿ ಸಾರಿದಾಗ ಅದಕ್ಕೆ ಆತನ ಸ್ವರೂಪ ಗೋಚರವಾಗುತ್ತದೆ. ಭಾಷೆ-ಲಿಪಿಗಳ ಅಸಮರ್ಥತೆಯನ್ನು, ಸೀಮಿತ ಶಕ್ತಿಯನ್ನು, ಗಮನದಲ್ಲಿಟ್ಟುಕೊಂಡು ಗಾಯತ್ರಿಯು 'ತತ್' ಶಬ್ದದಿಂದ ಪರಮಾತ್ಮನ ಕಡೆಗೆ ಕೇವಲ ಅಂಗುಲಿ ನಿರ್ದೇಶನವನ್ನು ಮಾಡುತ್ತದೆ. ಯಾರಿಗೆ ಅದರ ಅವಶ್ಯಕತೆ ಇದೆ ಅನ್ನಿಸಿದೆಯೋ, ಯಾರು ಅದರ ಮಹತ್ತ್ವವನ್ನು ತಿಳಿದಿರುವರೋ ಅವರು ಸ್ವಯಂ ಅದರ ಸ್ವರೂಪವನ್ನರಿಯಲು ಪ್ರಯತ್ನಿಸುವರಲ್ಲದೆ ಪ್ರಾಪ್ತ ಮಾಡಿಕೊಂಡುಬಿಡುವರು. ಪೋಲಿಸಿನವನು ಎದುರಿಗಿರುವುದನ್ನು ನೋಡಿದರೆ ಕಳ್ಳನಿಗೆ ಕೂಡ ಕಳ್ಳತನ ಮಾಡಲು ಸಾಹಸವಾಗದಿರುವಂತೆ, ಸಾಧಕನು ಆ ಪರಬ್ರಹ್ಮಸ್ವರೂಪ

ಪರಮಾತ್ಮನ ಸರ್ವವ್ಯಾಪಕತೆಯನ್ನು ಸ್ಮರಣೆಯಲ್ಲಿಟ್ಟುಕೊಂಡು ಕೆಟ್ಟತನ ದಿಂದ ತನ್ನ ರಕ್ಷಣೆಮಾಡಿಕೊಳ್ಳಲಿ ಎಂಬುದೇ ಅದರ ಅಪೇಕ್ಷೆ. ಪ್ರತಿ ಚೇತನಾ ಚೇತನ ವಸ್ತುವಿನೊಡನೆ ಸದ್ಭಾವನಾಪೂರ್ಣವಾದ ಸದ್ವ್ಯವಹಾರ ಮಾಡ ಬೇಕೆಂಬುದನ್ನು ಸಾಧಕನು ಲಕ್ಷದಲ್ಲಿಟ್ಟುಕೊಳ್ಳಬೇಕಾಗಿರುವುದರಿಂದಲೂ, ಆ ಪರಮಾತ್ಮನನ್ನು ಸ್ಮರಿಸುವುದು ಅವಶ್ಯಕವಾಗಿದೆ. ಈ ದೃಷ್ಟಿಯಿಂದಲೇ 'ತತ್' ಎಂಬ ಗಾಯತ್ರೀ ಪ್ರಥನು ಪದದಲ್ಲಿ ಪರಮಾತ್ಮನ ಕಡೆಗೆ ನಮ್ಮ ಗಮನ ಸೆಳೆಯುವ ಸಂಕೇತವನ್ನಿರಿಸಲಾಗಿದೆ. ಪ್ರಪಂಚದ ಸೃಷ್ಟಿ-ಸ್ಥಿತಿಗಳ ಕಾಲದಲ್ಲಿ ತಚ್ಛಬ್ದವಾಚ್ಯವಾದ ಪರಬ್ರಹ್ಮ ಒಂದೇ ಇರುವುದೆಂಬುದನ್ನು ಪ್ರತಿಪಾದಿಸುವ ಉದ್ದೇಶದಿಂದ ಈ ಮಂತ್ರದ ಮೂಲದಲ್ಲಿ 'ತತ್' ಪದ ಬಂದಿದೆ. 'ತತ್' ಪ್ರತಿಪಾದ್ಯವಾದ ಪರಬ್ರಹ್ಮನೇ ಸರ್ವಕ್ಕೂ ಆದಿ ಯಾಗಿಯೂ, ಅಂತ್ಯದಲ್ಲಿ ಉಳಿಯುವುದಾಗಿಯೂ ಇರುವ್ರದು.

'ತತ್' ಎಂದರೆ 'ಪ್ರಸಿದ್ಧ' ಎಂದರ್ಥ. 'ತತ್' ಎಂದರೆ 'ಪರಬ್ರಹ್ಮ' ಎಂದೂ ಅರ್ಥ. ಎಲ್ಲಾ ಲೋಕಗಳ ಉತ್ಪತ್ತಿ-ಸ್ಥಿತಿ-ಪ್ರಳಯಗಳಿಗೆ ಕಾರಣ ವಾದ ಸವಿತೃಮಂಡಲದಲ್ಲಿ ಆ ಪರಬ್ರಹ್ಮನನ್ನು ಧ್ಯಾನಿಸಬೇಕೆಂಬುದು ಇದರ ತತ್ತ್ವ. ಜಗತ್ಕಾರಣವಾದ ಮೂಲತತ್ತ್ವವು ತತ್ ಪದದ ಅರ್ಥ. ಪ್ರತ್ಯಗಾತ್ಮನಿಗೂ, ಪರಮಾತ್ಮನಿಗೂ ಅಭೇದವನ್ನು ಗಾಯತ್ರೀ ಮಂತ್ರವು 'ತತ್' ಎಂಬುದರ ಮೂಲಕ ಪ್ರತಿಪಾದಿಸುತ್ತದೆ (ತೈ.ಉ.೨-೬) 'ತತ್' ಎಂದರೆ ಎಲ್ಲಾ ಕ್ಷೇತ್ರಗಳಿಗೂ ಭಾಸಕವಾದ ಪರಮಾತ್ಮ ರೂಪ. 'ತತ್' ಪದವನ್ನು 'ಸವಿತೃ'ವಿಗೆ ವಿಶೇಷಣವಮಾಡದೆ 'ವರೇಣ್ಯ' ರೂಪಕ್ಕೆ ವಿಶೇಷಣ ವನ್ನಾಗಿ ಮಾಡಿದ್ದರಿಂದ, ಜಗತ್ಕಾರಣವೂ, ಮಾಯೋಪಾಧಿಕವೂ ಆದ ಪ್ರತ್ಯಗಾತ್ಮ ಭಿನ್ನವಲ್ಲ, ಅದಕ್ಕೂ ಅಧಿಷ್ಠಾನವಾದ ಶುದ್ಧ ಚೈತನ್ಯವೇ ಪ್ರತ್ಯಗಾತ್ಮ ಎಂದು ಸಿದ್ಧವಾಗುತ್ತದೆ. ಪ್ರತ್ಯಗ್ಭೂತವಾಗಿರುವ, ಸ್ವತಸ್ಸಿದ್ಧ ವಾಗಿರುವ, ಉಪನಿಷದ್ಗಮ್ಯವೆಂದು ಪ್ರಸಿದ್ಧವಾಗಿರುವ ಸೂರ್ಯಮಂಡ ಲಾಂತರ್ಗತವಾದ ಬ್ರಹ್ಮರೂಪವು ಮಾತು ಮನಗಳಿಗೆ ಗೋಚರವಾಗ ದಿದ್ದರೂ ಸಮಸ್ತರಿಂದಲೂ ಧ್ಯಾನ ಮಾಡಲ್ಪಡಲು ಯೋಗ್ಯವಾದುದೆಂಬು ದನ್ನು ಇದು ತಿಳಿಸುತ್ತದೆ.

'ತತ್' ಪದದಲ್ಲಿ 'ತ' ಎಂಬ ಪೂರ್ಣಾಕ್ಷರವೂ 'ತ್' ಎಂಬ ಅರ್ಧಾಕ್ಷರವೂ ಇವೆ. ಇವೆರಡೂ ಒಂದೇ ಜಾತಿಯ ಅಕ್ಷರಗಳಾಗಿಯೂ ಇವೆ. 'ತ್' ಅರ್ಧಾಕ್ಷರವು ಪ್ರಪಂಚದ ಬೀಜಶಕ್ತಿಯಾಗಿಯೂ, 'ತ' ಎಂಬ ಪೂರ್ಣಾ

ಕ್ಷರವು ಸಚ್ಚಿದಾನಂದ ಸ್ವರೂಪನೆಂಬ ತತ್ತ್ವವಾಗಿಯೂ ಪ್ರತಿಪಾದಿತವಾಗಿದೆ. 'ತತ್' ಪದವು ಬುದ್ಧಿಯ ಪ್ರವೃತ್ತಿಗಳನ್ನು ಸೂಚಿಸುತ್ತದೆ. ಭಗವತಿ ಗಾಯತ್ರಿಯು ಎಲ್ಲರ ಬುದ್ಧಿಗಳಲ್ಲೂ ಸುತ್ತುತ್ತಿರುವುದರಿಂದ ಅವಳು ತತ್ಪದ ವಾಚ್ಯಳಾಗಿರುವಳು.

**ಸವಿತುಃ :** 'ಸವಿತಾ' ಎಂದರೆ ಸಾಧಾರಣವಾಗಿ ಸೌರಬ್ರಹ್ಮಾಂಡದ ಕೇಂದ್ರವಾದ ಸೂರ್ಯ ಎಂದು ಅರ್ಥಮಾಡಿಕೊಳ್ಳುತ್ತೇವೆ. ಇದಕ್ಕೆ ಕಾರಣ ಅವನು ಪ್ರತ್ಯಕ್ಷವಾಗಿ ತೇಜಸ್ವಿಯೂ, ಪ್ರಕಾಶಮಾನನೂ ಆಗಿದ್ದಾನೆ. ನಮ್ಮ ಸ್ಥೂಲ ನೇತ್ರಗಳಿಗೆ ತೇಜಸ್ಸಿನ ರೂಪದಲ್ಲಿ ಕಾಣಿಸುವ ಪರಮಾತ್ಮನ ಶಕ್ತಿಗೆ ಸೂರ್ಯ ಎಂದು ಹೆಸರು. ಸೂರ್ಯನೇ ಸೌರಬ್ರಹ್ಮಾಂಡದ ಜೀವ ಕೇಂದ್ರ. ಪ್ರತ್ಯಕ್ಷವಾಗಿಯಾಗಲಿ, ಪರೋಕ್ಷವಾಗಿಯಾಗಲೀ ಎಲ್ಲಾ ಘಟ್ಟಗಳಲ್ಲಿಯೂ ಜೀವಧಾರಣೆ ಸೂರ್ಯನಿಂದಲೇ ನಡೆಯುತ್ತದೆ. ಜೀವನದ ಎಲ್ಲಾ ಮುಖಗಳಿಗೂ ಅವನೇ ಕೇಂದ್ರ ಮತ್ತು ಮೂಲ. ಅಗ್ನಿಯನ್ನು ಸವಿತಾ ಎನ್ನುತ್ತಾರೆ. ಕಾರಣ ಅಗ್ನಿಯೇ ಎಲ್ಲದರ ಉತ್ಪಾದಕ. (ನಿರುಕ್ತ ದೈವತ ಕಾಂಡ, ಅಬಪಾ.ಖ.೯). ಗೋಪಥ ಬ್ರಾಹ್ಮಣ(೧–೩೩)ದಲ್ಲಿ ಹೀಗೆ ಹೇಳಿದೆ—ಚಂದ್ರಮನೂ ಸವಿತಾ, ಪ್ರಾಣವೂ ಸವಿತಾ, ವಿದ್ಯುತ್ತೂ ಸವಿತಾ ಆಗಿದೆ. ಮೈತ್ರುಪನಿಷತ್(೬–೭)ನಲ್ಲಿ ಸವಿತಾ ಎಲ್ಲಾ ಪ್ರಾಣಗಳ ಆತ್ಮವಾಗಿದೆ ಎಂದು ಹೇಳಿದೆ. 'ಸವಿತಾ' ಎಂದರೆ ಸರ್ವೋತ್ಪಾದಕ, ಸೃಷ್ಟಿಸುವವನು (ಜಗತ್ತಿನ ಸೃಷ್ಟಿ–ಸ್ಥಿತಿ–ಲಯಕಾರಕ), ಸರ್ವಾಂತರ್ಯಾಮಿ, ಸರ್ವಪ್ರೇರಕ ಎಂದೂ ಅರ್ಥವಾಗುತ್ತದೆ. ಪ್ರಾಣಿಗಳನ್ನು ಪ್ರಸವಿಸುವುದರಿಂದ 'ಸವಿತಾ' (ವಿಷ್ಣುಧರ್ಮೋತ್ತರ ಪು.). ನಿಶ್ಚಯವಾಗಿಯೂ ಸಮಸ್ತ ಸೃಷ್ಟಿಗೆ ಸವಿತನು ಈಶ್ವರನು (ಕೃಷ್ಣಯಜುರ್ವೇದ). ಸಮಸ್ತ ಪ್ರಾಣಿಗಳನ್ನೂ ರಕ್ಷಿಸುವ ಕಾರಣದಿಂದ 'ಸವಿತಾ' ಎಂದು ಹೆಸರು (ವೃ.ಯೋ. ಯಾಜ್ಞ ೬–೬೧). ಧ್ಯಾನ ಮಾಡುವವರಿಗೆ ಸಕಲ ಕಲ್ಯಾಣಗಳನ್ನು ಕೊಡುತ್ತಾನಾದ್ದರಿಂದ 'ಸವಿತಾ' (ಸಂಧ್ಯಾಭಾಷ್ಯ). ಈ ಸೂರ್ಯದೇವನೇ ನಿಶ್ಚಯವಾಗಿಯೂ ಬ್ರಹ್ಮದೇವನು (ಶತಪಥ ಬ್ರಾ). ಜಗತ್ತನ್ನು ಪಾಲಿಸುವುದರಿಂದ 'ಸವಿತಾ' ಎಂದು ಹೆಸರು (ಮೈತ್ರ್ಯುಪನಿಷತ್–೬–೩೫). ಸವಿತೃವು ಉಷೆಯ ಪ್ರಯಾಣದ ಹಿಂಬದಿಯಲ್ಲಿ ವಿರಾಜಿಸುತ್ತಾನೆ(ಋ.೫–೮೩–೭). ಉಷೆಯ ಉದಯವಾದ ನಂತರ ಸೂರ್ಯೋದಯವಾಗುವಷ್ಟರ

ತನಕ ಸೂರ್ಯನನ್ನು ಸವಿತಾ ಎಂದು ಕರೆಯುತ್ತಾರೆ(ಋ.೧೦-೧೪೯-೧). ಸವಿತಾ ಎಂದರೆ ಶಾಸನದ ಸ್ರೋತಸ್ಸು, 'ಸೂ' ಎಂದರೆ ಆಳುವುದು. 'ಸವಿತಾ' ಎಂದರೆ ಶಾಸಕ ಎಂದರ್ಥವಾಗುವುದು. ರಾಷ್ಟ್ರದಲ್ಲಿ ರಾಜನು ರಾಜ್ಯ ನಿಯಮಗಳನ್ನು ನಿರ್ಮಿಸಿದಾಗ 'ಸವಿತಾ ;' ಶಿಕ್ಷೆ ವಿಧಿಸಿದಾಗ 'ಯಮ ;' ಅಧಿಕಾರ ನಿರ್ಣಯ ಮಾಡುವಾಗ 'ಅರ್ಯಮ ;' ಹಾಗೂ ಶಕ್ತಿಯನ್ನು ತೋರಿಸುವಾಗ 'ಇಂದ್ರ'ನೆನಿಸುವನು. ಇಂದ್ರನಿಗೂ ಶಾಸನವು ಸವಿತೃವಿನಿಂದಲೇ ಸಿಗುತ್ತದೆ (ಋ. ೧೦-೧೪೯-೧).

ಈ ಮಂತ್ರದಲ್ಲಿ ಪರಮಾತ್ಮನನ್ನು 'ಸವಿತಾ' ಎಂದು ಕರೆದಿರುವರು. ಆದುದರಿಂದ ಈ ಗಾಯತ್ರಿ(ಗೇಯಗೀತೆ)ಯನ್ನು 'ಸಾವಿತ್ರೀ' ಎಂದು ಕರೆಯುವರು. ಸೃಷ್ಟಿಯ ಪ್ರೇರಕನಾದ ಪರಮಾತ್ಮನೇ 'ಸವಿತುಃ.' ಚರಾ ಚರ ಪ್ರಾಣಿಗಳಿಗೆ ಆತ್ಮನು ಸೂರ್ಯ. ಬ್ರಹ್ಮಾಂಡದ ಆದಿ ಸೂರ್ಯ. ಆದ್ದ ರಿಂದ 'ಆದಿತ್ಯ' ಎಂದರು. ಪ್ರಾಣಿಗಳು ಹೊರಕ್ಕೆ ಬರಲು ಕಾರಣ 'ಸವಿತೃ.' 'ಕರ' ಎಂದರೆ ಕೈ. ಅದರಿಂದ ಬಂದುದು 'ಕರ್ಮ'—ಕೆಲಸ. ಇದಕ್ಕೆ ಚೇತನ ಶಕ್ತಿ ಅಗತ್ಯ. ಈ ಶಕ್ತಿ ಜಗತ್ತಿಗೆ ಬರುವುದು ಸೂರ್ಯನಿಂದ. ಇವನು ಸಕಲ ಜೀವಿಗಳ ಶಕ್ತಿದಾತ. ಆದ್ದರಿಂದಲೇ ಸಂಧ್ಯಾವಂದನೆಯಲ್ಲಿ ಮಂತ್ರಗಳೆಲ್ಲವೂ ಸೂರ್ಯನಿಗೇ ಕೇಂದ್ರೀಕೃತವಾಗಿವೆ. ರವಿ ಜಗತ್ಚಕ್ಷು. ಇವನಿಲ್ಲದೆ ವಿಶ್ವದ ಅಸ್ತಿತ್ವವೇ ಇಲ್ಲ. ಮಾನವರ ಹೃದಯದಲ್ಲಿ ಅಜ್ಞಾನ ಅಂಧಕಾರವನ್ನು ನಾಶಮಾಡುವ ಪರಂಜ್ಯೋತಿ ಇವನು. ಸಾಧಕನು ಈತನಿಂದ ತೇಜಸ್ಸನ್ನು ಆಶಿಸುತ್ತಾನೆ.

ಉತ್ಪತ್ತಿ ಮತ್ತು ಐಶ್ವರ್ಯ ಎಂಬ ಅರ್ಥದಲ್ಲಿ 'ಕ್ಷು' ಧಾತುವಿನಿಂದ 'ಸವಿತಾ' ಆಗುತ್ತದೆ. ಈ ಕಾರಣದಿಂದ ಸಮಸ್ತ ವಸ್ತುಗಳ ಜನನದ ಹಾಗೂ ಸರ್ವೈಶ್ವರ್ಯದ ಉತ್ಪತ್ತಿಯ ಸ್ಥಾನವು 'ಸವಿತಾ' (ಮಹೀಧರ ಭಾಷ್ಯ). ಜಗತ್ತನ್ನು ಹುಟ್ಟಿಸುವವನು, ಅರ್ಥಾತ್ ಪರಮೇಶ್ವರ ಎಂಬರ್ಥದಲ್ಲಿ 'ಸೂ' ಧಾತುವಿನಿಂದ 'ತೃಚ' ಪ್ರತ್ಯಯವಾಗಿ 'ಸವಿತಾ' ಆಗುತ್ತದೆ. ಪ್ರೇರಣಾರ್ಥದಲ್ಲಿ 'ಕ್ಷು' ಧಾತುವಿನಿಂದ 'ಸವಿತಾ' ಆಗುತ್ತದೆ. ಪ್ರಾಣಿ ಗಳನ್ನು ಅವರವರ ಕಾರ್ಯಗಳಲ್ಲಿ ಪ್ರವೃತ್ತಿಗೊಳಿಸುವ ಕಾರಣದಿಂದ 'ಸವಿತಾ' ಎನ್ನುತ್ತಾರೆ. ಈ ಸವಿತನು ಪ್ರೇರಕನು, ಅಂತರ್ಯಾಮಿಯು, ವಿಜ್ಞಾನ-ಆನಂದಸ್ವರೂಪನು, ಹಿರಣ್ಯಗರ್ಭನು, ಹಾಗೂ ಸಮಾಧಿಯಲ್ಲಿ ವ್ಯಾಪಕ ಸ್ವರೂಪನೂ ಆಗಿರುವನು (ಮಹೀಧರ ಭಾಷ್ಯ). ಅಗ್ನಿಯು

ಸಾಕ್ಷಾತ್ ನಾರಾಯಣನು. (ಅಗ್ನಿ ಸವಿತನೇ ಆಗಿರುವನು). ಅಂತೆಯೇ ಅಗ್ನಿಸ್ವರೂಪ ನಾರಾಯಣನಿಗೆ ನಮಸ್ಕಾರವಿರಲಿ. (ನಾರಾಯಣ ಹೃದಯ). ಹೃದಯಾಕಾಶದಲ್ಲಿ ಯಾವ ಜೀವನು (ಭಗವಂತನು) ಸಾಧಕ ರಿಂದ ಧ್ಯಾನಿಸಲ್ಪಡುತ್ತಾನೋ ಆತನೇ ಬ್ರಾಹ್ಯ ಪ್ರಪಂಚದಲ್ಲಿ ಸೂರ್ಯ ರೂಪದಿಂದ ಶೋಭಿಸುತ್ತಾನೆ. (ವ್ಯಾಸ). ಸಂಕ್ಷೇಪವಾಗಿ ಸವಿತ ಜನ್ಮ ಕೊಡು ವಂತಹ, ಎಂದರೆ ಪ್ರೇರಕವಾದ, ಸರ್ವಭೂತಗಳ ರಕ್ಷಣೆ ಮಾಡುವಂತಹನಾ ಗಿದ್ದಾನೆ. ನಿದ್ರಿಸುವ ಪ್ರಕೃತಿಗೆ ಪ್ರೇರಣೆ ನೀಡಿ, ಅದರ ನಾನಾ ರೂಪಗಳನ್ನು ಮಾನವ ಕಲ್ಯಾಣಕ್ಕಾಗಿ ಧಾರಣೆ ಮಾಡುವಂತಹ ಪರಮಾತ್ಮನ ಶಕ್ತಿಗೆ 'ಸವಿತಾ' ಎಂದು ಹೆಸರು. ಸಂಸಾರಿಕ ಜಗತ್ತನ್ನು ನಿದ್ರೆಯಿಂದ ಎಚ್ಚರಿಸಿ ಚಟುವಟಿಕೆಯಲ್ಲಿ ತೊಡಗಿಸುವುದರಿಂದ ಸೂರ್ಯನೂ 'ಸವಿತಾ' ಎನಿಸಿ ಕೊಳ್ಳುತ್ತಾನೆ.

ಸೂರ್ಯಮಂಡಲದ ಅಧಿದೇವತೆ ಸೂರ್ಯನಾದರೆ ಸೂರ್ಯನ ಶಕ್ತಿ ಯಾದ ಉತ್ತೇಜಕತ್ವ, ಪ್ರಚೋದಕತ್ವ, ಜೀವದಾತೃತ್ವಗಳ ಅಧಿದೇವತೆ ಸವಿತೃ. ನಮ್ಮ ಋಷಿಗಳು ಮತ್ತು ಗುಪ್ತವಿದ್ಯೆಯಲ್ಲಿ ಪರಿಣಿತರಾದ ಜೀವನ್ಮುಕ್ತರು ಯೋಗವಿಧಾನಗಳಿಂದ ಪರಿಶೀಲಿಸಿ ಕಂಡುಹಿಡಿದಿರುವು ದೇನೆಂದರೆ—ಭೌತ ಸೂರ್ಯನು ಅತ್ಯಂತ ಹೊರಗಿನ ಕವಚ ಮಾತ್ರ. ಈ ಕವಚವು ಒಳಗಿರುವ ಪೂರ್ಣಸತ್ಯವನ್ನು ಮುಚ್ಚಿಕೊಂಡಿದೆ. ಭೌತ ಸೂರ್ಯನ ಒಳಗಡೆ ಸೌರಬ್ರಹ್ಮಾಂಡವನ್ನು ದೂರಿಕೊಂಡು (ಭೇದಿಸಿ ಕೊಂಡು) ಊಹಿಸಲಸಾಧ್ಯವಾದ ತೇಜಸ್ಸು ಮತ್ತು ಶಕ್ತಿಗಳಿಂದ ತುಂಬಿರುವ ಸೂಕ್ಷ್ಮ ಲೋಕಗಳು ಅಡಗಿವೆ. ಈ ಲೋಕಗಳ 'ಸೂರ್ಯನಾರಾಯಣ' ನೆಂದು ನಾವು ಕರೆಯುವ ಅದ್ಭುತ ಜೀವಿಯೇ ಸೌರಬ್ರಹ್ಮಾಂಡದ ಈಶ್ವರ. ಸೌರ ಬ್ರಹ್ಮಾಂಡದಲ್ಲಿ ಬೇರೆಬೇರೆ ಮಟ್ಟಗಳಲ್ಲಿ ಮತ್ತು ಬೇರೆಬೇರೆ ಗೋಳ ಗಳಲ್ಲಿ ಕೆಲಸ ಮಾಡುತ್ತಿರುವ ಸಮಸ್ತ ಜೀವವೂ ಅವನ ಪ್ರಜ್ಞೆಯಲ್ಲಿ ಅಡಕ ವಾಗಿವೆ. ಅವನ ಪ್ರಾಣದಿಂದ ಹಾಗೂ ಅವನಿಂದ ಹೊರಬರುವ ಚೈತನ್ಯ ಮತ್ತು ಶಕ್ತಿಗಳಿಂದ ಸಮಸ್ತ ಜೀವಿಗಳೂ ಪೋಷಿಸಲ್ಪಡುತ್ತಿವೆ. ಸೌರ ಬ್ರಹ್ಮಾಂಡದಲ್ಲಿರುವ ಪ್ರಜ್ಞೆಯ ಎಲ್ಲಾ ರೂಪಗಳೂ ಅವನ ಪ್ರಜ್ಞೆಯ ಪರಿಮಿತ ರೂಪಗಳು. ಎಲ್ಲಾ ಸಾಮರ್ಥ್ಯಗಳೂ ಅವನ ಸಾಮರ್ಥ್ಯದಿಂದಲೇ ಉದ್ಭವವಾಗಿವೆ. ನಾವು ಅಕ್ಷರಶಃ 'ಅವನಲ್ಲಿ ಜೀವಿಸುತ್ತೇವೆ, ಚಲಿಸುತ್ತೇವೆ ಮತ್ತು ನಮ್ಮ ಅಸ್ತಿತ್ವನನ್ನು ಹೊಂದಿದ್ದೇವೆ.'

ಹಿಂದೂ ತತ್ತ್ವಶಾಸ್ತ್ರದ ಪ್ರಕಾರ, ವಿಶ್ವದಲ್ಲಿ ಪ್ರತಿಯೊಂದು ಸೌರ ಬ್ರಹ್ಮಾಂಡವು ಪ್ರತ್ಯೇಕವಾದ ಮತ್ತು ಸ್ವಯಂಪೂರ್ಣವಾದ ಏಕಾಂಶ (unit). ಬ್ರಹ್ಮ-ವಿಷ್ಣು-ಮಹೇಶ್ವರರೆಂಬ ತ್ರಿಮೂರ್ತಿರೂಪದಲ್ಲಿ ವ್ಯಕ್ತವಾಗುವ ಈಶ್ವರನೇ ಈ ಸೌರಬ್ರಹ್ಮಾಂಡದ ಒಡೆಯ. ಈ ಎಲ್ಲಾ ವಿಶ್ವಗಳ ಒಟ್ಟು ಕೂಟವನ್ನು 'ಮಹಾವಿಶ್ವ' (Cosmos) ಎಂದು ಕರೆಯುತ್ತಾರೆ. ಹಾಗೂ ತತ್ತ್ವಶಾಸ್ತ್ರದಲ್ಲಿ ವರ್ಣಿಸಿರುವ ಸಗುಣ ಬ್ರಹ್ಮನು ಈ ಅದ್ಭುತವಾದ ಮತ್ತು ಭಯಂಕರವೆನ್ನಬಹುದಾದ ಮಹಾವಿಶ್ವದ ಒಡೆಯನಿರಬೇಕು.

'ಸವಿತಾ ಸರ್ವಸ್ಯಪ್ರಸವಿತಾ'-(ನಿರುಕ್ತಕಾರಯಾಸ್ಕರ) ಅಂದರೆ ಸಮಸ್ತಕ್ಕೂ ಉತ್ಪಾದಕನಾದವನು ಸವಿತೃವು. ಇವನೇ ಪೃಥ್ವಿಯನ್ನು ಆಧಾರ ಸಹಿತವಾಗಿರುವಂತೆ ಮಾಡಿದ್ದಾನೆ. ಆಧಾರ ರಹಿತವಾದ ಅಂತರಿಕ್ಷವು ಸ್ಥಿರವಾಗಿ ನಿಂತಿರುವುದು ಇವನ ಪ್ರಭಾವದಿಂದಲೇ. ಆಕಾಶದಲ್ಲಿರುವ ಮೇಘವು ಮಳೆಯನ್ನು ಸುರಿಸುವಂತೆ ಮಾಡುವವನೂ ಇವನೇ 'ಏಕೋ ವಿಶ್ವಸ್ಯ ಭುವನಸ್ಯ ರಾಜಾ' ಎಂದು ಸವಿತೃವನ್ನು ವರ್ಣಿಸಲಾಗಿದೆ. ಈ ಆದಿತ್ಯನ ದಿವ್ಯಸ್ವರೂಪವು ನಿತ್ಯವೂ, ವಿಕಾರರಹಿತವೂ ಆದುದು. ಅದು ಯೋಗಿ ಹೃದಯ ಸಂವೇದ್ಯವಾದುದು. ಆ ಪರಮಧಾಮದಲ್ಲಿ ಈ ಆದಿತ್ಯನು ಎಂದಿಗೂ ಅಸ್ತಮನಾಗುವುದಿಲ್ಲ, ಉದಯಿಸುವುದೂ ಇಲ್ಲ.

ನಮ್ಮ ಸೂರ್ಯನಲ್ಲಿ ಅಡಗಿರುವ ರಹಸ್ಯವನ್ನು ಯಾರು ಭೇದಿಸುತ್ತಾರೋ ಅವರು ಮಹಾವಿಶ್ವದಲ್ಲಡಗಿರುವ ರಹಸ್ಯವನ್ನೂ ಬಹಳಮಟ್ಟಿಗೆ ಭೇದಿಸಿರುತ್ತಾರೆ ಅಥವಾ ಆ ರಹಸ್ಯವನ್ನು ಭೇದಿಸಲು ಪ್ರಯತ್ನವನ್ನು ಮಾಡುವ ಸ್ಥಿತಿಯನ್ನು ಮುಟ್ಟಿರುತ್ತಾರೆ. ಆದ್ದರಿಂದ ಗಾಯತ್ರೀ ಮಂತ್ರದ 'ಸವಿತಾ' ಸಾಧಕನು ಗುರಿ ಇಡಲು ಇದು ಯೋಗ್ಯ ಲಕ್ಷ್ಯ. ಸೂರ್ಯನಲ್ಲಿ ಅಂತರ್ಗತವಾಗಿರುವ (ಒಳಗೆ ಅಡಗಿರುವ) ಆಧ್ಯಾತ್ಮಿಕ ಜ್ಯೋತಿ ಅತ್ಯಂತ ಶ್ರೇಷ್ಠವಾದದ್ದು. ಅದು ಸಕಲ ಜೀವಿಗಳ ಹೃದಯಗಳ ಮೂಲಕ ಪ್ರಜ್ಞೆಯ ರೂಪದಲ್ಲಿ ಪ್ರಕಾಶಿಸುತ್ತದೆ. ಬಾಹ್ಯ ಸೂರ್ಯನಲ್ಲಿ ಪ್ರಕಾಶಿಸುತ್ತಿರುವ ಆಧ್ಯಾತ್ಮಿಕ ಜ್ಯೋತಿಯು ಪ್ರತಿ ಜೀವಿಯ ಹೃದಯದಲ್ಲಿಯೂ ಪ್ರಕಾಶಿಸುತ್ತದೆ. ಈ ಜ್ಯೋತಿಯು ಅಗ್ನಿ, ಧೂಮಕೇತು ಇತ್ಯಾದಿಗಳಿಂದ ಪ್ರಕಾಶಮಾನವಾಗಿದೆ. ಸಕಲ ಜೀವಿಗಳ ಹೃದಯದಲ್ಲಿಯೂ ಪ್ರಜ್ಞೆಯ ರೂಪದಲ್ಲಿ ಪ್ರಕಾಶಿಸುತ್ತಿರುವ ಜ್ಯೋತಿಯು ಈ ವಿಶ್ವದ ಮೂಲಕವೂ ಕೂಡ ಪುರುಷ

ರೂಪದಲ್ಲಿ ಪ್ರಕಾಶಿಸುತ್ತಾ ಅದನ್ನು ಜೀವಿಯನ್ನಾಗಿ ಮಾಡಿದೆ.

ಮೇಲಿನ ವಿವರಣೆಯಿಂದ ಈ ಮೂರು ವಿಷಯಗಳು, ತತ್ತ್ವಗಳು, ಹೊರ ಹೊಮ್ಮುತ್ತವೆ—(೧) ನಮ್ಮ ಕಣ್ಣಿಗೆ ಕಾಣಿಸುವ ಮತ್ತು ವಿಜ್ಞಾನ ಸಂಶೋಧಿಸಿರುವ ಬಾಹ್ಯಸೂರ್ಯನು ಬರಿಯ ಹೊರಗಿನ ಕವಚ ; ಸೌರ ಬ್ರಹ್ಮಾಂಡವನ್ನೆಲ್ಲಾ ಆವರಿಸಿಕೊಂಡು ಅದಕ್ಕೆ ಚೈತನ್ಯ ನೀಡುತ್ತಿರುವ ಅದ್ಭುತವಾದ ಈಶ್ವರನು ಈ ಕವಚದ ಒಳಗಡೆ ಗೂಢವಾಗಿದ್ದಾನೆ. (೨) ಪ್ರತಿಯೊಬ್ಬ ಮನುಷ್ಯನ ಹೃದಯದಲ್ಲಿಯೂ ಗೂಢವಾಗಿರುವ ಈಶ್ವರನೂ (ಸತ್ಯವೂ), ಸೂರ್ಯನಲ್ಲಿ ಗೂಢವಾಗಿರುವ ಈಶ್ವರನೂ ಮೂಲತತ್ತ್ವದಲ್ಲಿ ಒಬ್ಬನೇ. ತನ್ನ ಹೃದಯದಲ್ಲಿ ಅಡಗಿರುವ ಈ ಈಶ್ವರನನ್ನು (ಸತ್ಯವನ್ನು) ತಾನೇ ಸ್ವತಃ ಹುಡುಕಿ ಅರಿತುಕೊಳ್ಳುವುದೇ ಸಾಧನೆಯ ಅಂತಿಮ ಗುರಿ. ಮತ್ತು (೩) ತನ್ನಲ್ಲೇ ಇರುವ ಈ ಈಶ್ವರನನ್ನು ಪತ್ತೆಹಚ್ಚುವ ಕಾರ್ಯದಲ್ಲಿ ತೊಡಗಿರುವ ಸಾಧಕನು, ಸೂರ್ಯನಲ್ಲಿ ಗೂಢವಾಗಿರುವ ಈಶ್ವರನನ್ನು ಆರಾಧಿಸಿ, ಆಧ್ಯಾತ್ಮಿಕ ತೇಜಸ್ಸಿನ ಅಪ್ರತಿಮ ಮೂಲವಾದ ಅವನಿಂದ ಸಹಾಯ ಪಡೆಯಬಹುದು. ಇದರಿಂದ ಸಾಧಕನ ಆತ್ಮಾನ್ವೇಷಣೆಯ ಕಾರ್ಯ ಹಗುರವಾಗುತ್ತದೆ.

ಈ ಬಾಹ್ಯ ಸೂರ್ಯನು, ಸೌರಬ್ರಹ್ಮಾಂಡವನ್ನೆಲ್ಲಾ ಪದರಪದರವಾಗಿ ಊಹಾತೀತ ತೇಜಸ್ಸಿನಿಂದ ಆವರಿಸಿರುವ ಮಹಾಪ್ರಬಲವಾದ ಅತ್ಯದ್ಭುತ ಪ್ರಜ್ಞೆಯ ಬರಿಯ ಸ್ಥೂಲರೂಪ ಮಾತ್ರ. ಅಚ್ಚರಿಯ ಸಂಗತಿಯೆಂದರೆ ಯಾವ ಮಾನವನು ಈ ಅದ್ಭುತ ಪ್ರಜ್ಞೆಯ ದರ್ಶನಭಾಗ್ಯವನ್ನು ಪಡೆಯುತ್ತಾನೆಯೋ ಅವನೂ ಸಹ ಆ ಅದ್ಭುತ ಪ್ರಜ್ಞೆಯ ಒಂದು ಭಾಗವಾಗುತ್ತಾನೆ ; ಅಲ್ಲದೆ ಪರಿಮಿತಿಗೊಳಪಟ್ಟ ತನ್ನ ಪ್ರಜ್ಞೆಯು ಆ ಮಹಾಪ್ರಜ್ಞೆಯ ಒಂದು ವ್ಯಕ್ತ ಅಂಶ, ಒಂದು ಮುಖ, ಆಧ್ಯಾತ್ಮಿಕ ಸೂರ್ಯನ ಒಂದು ಕಿರಣ ಎಂಬುದನ್ನು ಕಂಡುಕೊಳ್ಳುತ್ತಾನೆ. ವಾಸ್ತವವಾಗಿ ಒಂದು ರಹಸ್ಯಗರ್ಭಿತ ರೀತಿಯಲ್ಲಿ, ಆದರೆ ಬಹಳ ಸತ್ಯವಾದ ರೀತಿಯಲ್ಲಿ, ಬಾಹ್ಯಸೂರ್ಯನ ಹಿಂದೆ ಗುಪ್ತವಾಗಿರುವ ಆಧ್ಯಾತ್ಮಿಕ ಸೂರ್ಯ ಮತ್ತು ಈ ಮಾನವ ಇಬ್ಬರೂ ಒಂದೇ. ಇದು ರಹಸ್ಯದಲ್ಲಿ ರಹಸ್ಯ. ತನ್ನನ್ನು ತಾನು ಅರಿತಿಲ್ಲದ, ತನ್ನ ಗುರಿಯನ್ನು ಅರಿತಿಲ್ಲದ, ಮಹಾಬಂಧಿತ ಮಾನವನಿಂದ ಈ ರಹಸ್ಯವು ಭೇದಿಸಲ್ಪಡಬೇಕಾಗಿದೆ. ಈ ಆಧ್ಯಾತ್ಮಿಕ ಸೂರ್ಯನೇ ಸವಿತಾ. ಘಟ್ಟಘಟ್ಟವಾಗಿ ಇವನನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವುದೇ ಈ ಗಾಯತ್ರೀ ಮಂತ್ರದ ಉದ್ದೇಶ.

ಸರ್ವ ಭಾವಗಳ, ಸಕಲ ಸತ್ಪದಾರ್ಥಗಳ ಉತ್ಪಾದಕನೂ, ಪ್ರೇರಕನೂ ಆದ ವಿಶ್ವಶಕ್ತಿ ರೂಪವಾದ ಸದ್ವಸ್ತುವನ್ನೇ 'ಸವಿತೃ' ಎನ್ನುವರು. ಆಧ್ಯಾತ್ಮಿಕ ಭಾಷೆಯಲ್ಲಿ ತೇಜಸ್ಸಿಗೆ, ಪ್ರಕಾಶವಂತನಿಗೆ, ಉತ್ಪಾದಕ ಶಕ್ತಿಗೆ 'ಸವಿತಾ' ಎನ್ನುವರು. ಪರಮಾತ್ಮನಿಗೆ ಅನಂತ ಶಕ್ತಿಗಳಿವೆ; ಅನಂತ ರೂಪ ಗಳಿವೆ. ಅವುಗಳಲ್ಲಿನ ತೇಜಸ್ವೀ ಶಕ್ತಿಗೆ 'ಸವಿತಾ' ಎಂದು ಕರೆಯುತ್ತಾರೆ.

'ಸವಿತೃ'ವು ದ್ವಿಪಾದಿ, ಚತುಷ್ಪಾದಿಗಳನ್ನು ಸಂತೋಷಗೊಳಿಸಿ, ಪುನರು ಜ್ಜೀವನಗೊಳಿಸಿ, ಹುರುಪನ್ನುಂಟುಮಾಡುವವನು; ಧೈರ್ಯವನ್ನು ಉತ್ಪಾ ದನೆ ಮಾಡುವವನು, ಧಾನ್ಯಗಳು ಹೆಚ್ಚುವಂತೆ ಮಾಡುವವನು. ದೇವತೆಗಳು ಅಮೃತತ್ವದ ಕಡೆಗೆ ತಿರುಗುವಂತೆ ಮಾಡುವವನು, ಮಾನವರ ಪಾಪಗಳನ್ನು ಕಳೆದು ಜೀವನವು ಸುಖಮಯವಾಗಿರುವಂತೆ ಮಾಡುವನು. ಬುದ್ಧಿ ಶಕ್ತಿ ಮತ್ತು ಜ್ಞಾನಗಳಿಗೆ ಇವನ ಅನುಗ್ರಹ ಬೇಕು.

ಸೂರ್ಯನು ತ್ರಿಕೂಟಶಕ್ತಿಗಳಾದ ಅಗ್ನಿ, ವಾಯು ಮತ್ತು ಸೂರ್ಯ ರಲ್ಲಿ ಒಬ್ಬನಾಗಿರುವವನು. ಇವನ ಪ್ರಕಾಶದಿಂದ ಕಿರಣಗಳು ಸರ್ವವ್ಯಾಪಿ ಯಾಗಿ, ಆಧ್ಯಾತ್ಮಿಕ ಪ್ರಜ್ಞಾವಸ್ಥೆಯನ್ನು ಸೃಷ್ಟಿಸಿ, ಮನಸ್ಸನ್ನು ಮುಕ್ತಿ ಯೆಡೆಗೆ ಒಯ್ಯುವ ಶಕ್ತಿದಾತನೂ ಇವನಾಗಿದ್ದಾನೆ. ಶ್ರುತಿಯಲ್ಲಿ ಸೂರ್ಯ ನನ್ನು 'ಆದಿತ್ಯ'ನೆಂಬ ತೇಜಸ್ಸಿನಿಂದ ಪ್ರಚೋದಿತವಾಗಿ ತನ್ನ ಕಿರಣಗಳ ಮೂಲಕ ಸರ್ವವನ್ನೂ ಸೃಜಿಸುವವನು, ಸರ್ವವನ್ನೂ ಸ್ಥಿತಿಯಲ್ಲಿ ಕಾಪಾಡು ವವನು ಮತ್ತು ಸರ್ವವನ್ನೂ ಲಯಮಾಡಿ ತನ್ನಲ್ಲಿ ಉಪಸಂಹಾರ ಮಾಡಿ ಕೊಳ್ಳುವವನು ಎಂದು ಹೇಳಿದೆ. ನಿದ್ರೆಯಲ್ಲಿ ಮಲಗಿದ್ದ ಮಾನವರನ್ನು ಜಗ ತ್ತಿಗೆ ತರುವುದು ಈ ಆದಿತ್ಯನ ಕಿರಣ. ಮಾನವರ ಹೃದಯವನ್ನು ಹೊಕ್ಕು ವಿಧವಿಧವಾದ ವ್ಯಾಪಾರಗಳಿಗೆ ಕಾರಣನಾಗುವವನೂ ಇವನೇ. ಒಂದುರೂಪ ದಿಂದ ತಪನ ಮಾಡಿ, ಇನ್ನೊಂದು ರೂಪದಿಂದ ವರ್ಷವನ್ನು ಕರೆದು, ಅನ್ನ ಕಾರಣನಾಗುವವನೂ ಆದಿತ್ಯನೇ, ಅನ್ನಾದನಾಗಿ ದೇಹದಲ್ಲಿ ಕುಳಿತು ಎಲ್ಲ ವನ್ನೂ ಜೀರ್ಣಿಸುವವನೂ ಈತನೇ. ಸೂರ್ಯನ ಶಾಖದಿಂದ ದ್ಯುತಿ ಸಂಶ್ಲೇಷಣ ಕ್ರಿಯೆಯು (Photo synthesis) ನಡೆದು ಅದು ಸಸ್ಯಗಳ ಬೆಳವಣಿಗೆಗೆ ಸಹಾಯವಾಗುತ್ತದೆ; ಹಾಗೆಯೇ ಪ್ರಾಣಿಗಳಿಗೆ ಶುದ್ಧ ವಾಯುವು ದೊರೆಯುತ್ತದೆ. ಈ ಸಸ್ಯಗಳಿಂದ ಪ್ರಾಣಿಗಳಿಗೆ ಬೇಕಾದ ಆಹಾರ ದೊರಕುತ್ತದೆ. ಸೂರ್ಯನೇ ಮಳೆ ಸುರಿಯಲು ಕಾರಣನಾಗಿ, ಪ್ರಾಣಿಗಳಿಗೂ, ಸಸ್ಯಗಳಿಗೂ ಅನ್ನ ಪಾನಾದಿಗಳಿಗೆ ಕಾರಣಭೂತನಾಗಿ

ದ್ದಾನೆ. ಈತನ ಕಿರಣಗಳಿಂದ ಕ್ರಿಮಿಗಳು ನಾಶವಾಗುತ್ತವೆ. ಇದರಿಂದ ರೋಗರುಜಿನಗಳು ಕಡಿಮೆಯಾಗುತ್ತವೆ. ಆದ್ದರಿಂದಲೇ ಸೂರ್ಯನನ್ನು ಪರಬ್ರಹ್ಮ ಪ್ರತೀಕವಾಗಿ ಪರಿಗ್ರಹಿಸಿದ್ದಾರೆ. ಸೂರ್ಯನ ಮೂಲಕ ಪರಮಾತ್ಮನನ್ನು ಧ್ಯಾನಿಸುವುದು ಭಾರತೀಯರ ವೈಶಿಷ್ಟ್ಯ. ಆದುದರಿಂದ ಸೃಷ್ಟಿಗೆ ಬಂದಿರುವ ಭೂತಜಾತವೆಲ್ಲವೂ ತಮ್ಮ ಕಾರ್ಯಗಳಿಗೆಲ್ಲಾ ಆದಿತ್ಯನಿಗೆ ಋಣಿ. ಆದಿತ್ಯನಿಲ್ಲದೆ ಯಾರು ತಾನೇ ಏನು ಮಾಡುವುದಕ್ಕಾದೀತು? ಪ್ರತ್ಯಕ್ಷದೇವತೆ ಎಂದು ಕರೆಯಬಹುದಾದವನು ಇವನೊಬ್ಬನೇ. ಇಂದ್ರಾದಿ ದೇವತೆಗಳೆಲ್ಲರೂ ಪರೋಕ್ಷ ದೇವತೆಗಳು. ಇವನೇ ಜೀವಕೋಟಿಗಳೆಲ್ಲದರ ಆಗುಹೋಗುಗಳಿಗೆ ಅವಶ್ಯಕವಾದ ಬೇರೆಬೇರೆ ಋತುಗಳನ್ನೂ ಮತ್ತು ಋತುಧರ್ಮಗಳನ್ನೂ ಉಂಟುಮಾಡುವವನು. ನಮ್ಮ ಸಂಸ್ಕೃತಿ ಸ್ತೋತ್ರದ ಮೂಲವಾದ ಋಗ್ವೇದದಲ್ಲಿ ನೂರಕ್ಕಿಂತ ಅಧಿಕವಾಗಿ ಸೂರ್ಯನನ್ನು ಸ್ತುತಿಸುವ ಮಂತ್ರಗಳು ಕಂಡುಬರುತ್ತವೆ. ಇವನು ದಿವಿಯಲ್ಲಿ ಸಂಚರಿಸುವ ಹಂಸ, ಇವನೇ ಅಂತರಿಕ್ಷದಲ್ಲಿ ಚಲಿಸುವ ವಾಯು, ಇವನೇ ವೇದದಲ್ಲಿ ಹೇಳಿರುವ ಅಗ್ನಿ, ಇವನೇ ಮನೆಗೆ ಬರುವ ಅತಿಥಿ, ಇವನೇ ಮನುಷ್ಯರಲ್ಲಿರುವ ಚೈತನ್ಯ, ಇವನೇ ಮಂಡಲದಲ್ಲಿರುವ ಪುರುಷ, ಇವನೇ ಯಜ್ಞದಲ್ಲಿನ ಯಜ್ಞೇಶ್ವರ, ಇವನೇ ವ್ಯೋಮಸ್ಥನಾದ ವಾಯು, ಇವನೇ ನೀರಿನಿಂದ (ಸಮುದ್ರದಿಂದ) ಹುಟ್ಟುವ ಬೆಳಕು, ಇವನೇ ರಶ್ಮಿಗಳಿಂದ ಕೂಡಿ ಹುಟ್ಟುವ ಜ್ಯೋತಿ. ಇವನು ಸತ್ಯದಿಂದ ಹುಟ್ಟುತ್ತಾನೆ, ಪರ್ವತ (ಉದಯಾಚಲ) ದಿಂದ ಹುಟ್ಟುತ್ತಾನೆ. ಇವನೇ ಋತ ಅರ್ಥಾತ್ ಪರಿಪೂರ್ಣ ಸತ್ಯ ಎಂಬುದಾಗಿ ಋಗ್ವೇದದ ನಾಲ್ಕನೇ ಮಂಡಲದಲ್ಲಿ ವರ್ಣಿತವಾಗಿದೆ, ಹಾಗೂ ಉಪನಿಷತ್ತುಗಳಲ್ಲಿಯೂ ಇದೇ ರೀತಿ ವರ್ಣಿಸಿ ಇವನ ಸ್ಮರಣೆಯಿಂದ ಕೂಡಿರುವುದನ್ನು ನಾವು ನೋಡುತ್ತೇವೆ. ಶ್ರೀರಾಮಾಯಣದಲ್ಲಿ ಬರುವ ಆದಿತ್ಯ ಹೃದಯವೂ ಮತ್ತು ಮಹಾಭಾರತದಲ್ಲಿ ಯುಧಿಷ್ಠಿರನು ಮಾಡುವ ಸೂರ್ಯ ಸ್ತೋತ್ರವೂ ಈ ಸಂದರ್ಭದಲ್ಲಿ ಸ್ಮರಣೀಯವಾಗಿದೆ. ಸೂರ್ಯನೇ ಸ್ಥಾವರ-ಜಂಗಮಾತ್ಮಕವಾದ ಪದಾರ್ಥಗಳೆಲ್ಲದರ ಆತ್ಮ. ಈ ಜ್ಯೋತಿಯೇ ಭೂಮಿಯಲ್ಲಿ ಅಗ್ನಿಯಾಗಿಯೂ, ಅಂತರಿಕ್ಷದಲ್ಲಿ ಮಿಂಚಾಗಿಯೂ, ಸ್ವರ್ಗದಲ್ಲಿ ಆದಿತ್ಯನಾಗಿಯೂ ಪ್ರಕಾಶಿಸುವುದು. ಸೂರ್ಯನ ಪ್ರಥಮ ರೂಪ ಅಗ್ನಿ ಎಂದು ತೈತ್ತಿರೀಯೋಪನಿಷತ್ತು ತಿಳಿಸುತ್ತದೆ. ಇದೇ ಉಪನಿಷತ್ತು ಮತ್ತೊಂದು ಕಡೆ ನಮಗಿರುವಂತೆ ಸವಿತೃವಿಗೂ ಒಬ್ಬ ಅಂತರ್ಯಾಮಿ

ಯಾದ ದೇವನಿದ್ದಾನೆ, ಆ ಅಂತರ್ಯಾಮಿ ನಮ್ಮೆಲ್ಲರಿಗೂ ಒಬ್ಬನೇ ಎಂದು ತಿಳಿಸುತ್ತದೆ.

ನಮ್ಮ ಪುರಾತನ ಮಹರ್ಷಿಗಳು ಸೂರ್ಯನೇ ಎಲ್ಲವೂ ಎಂಬುದಾಗಿ ಯೋಚಿಸುವ ಅವಸ್ಥೆಯನ್ನು ಮೀರಿ, ಅವನಿಗೆ ಮತ್ತು ಇತರ ದೈವೀ ವಸ್ತುಗಳೆಲ್ಲಕ್ಕೂ ಮೂಲ ಕಾರಣವೂ ಮತ್ತು ಪ್ರೇರಕವೂ ಆದ ಮೂಲ ಶಕ್ತಿಯೊಂದು ಇದೆ ಎಂದು ಕಂಡುಕೊಂಡರು. ಈ ಆದಿತ್ಯನಲ್ಲಿ ಇರುವ ಪುರುಷನೇ ನಮ್ಮೆಲ್ಲರ ಹೃದಯದಲ್ಲಿರುವ ಪುರುಷ ಎಂಬ ಸತ್ಯವನ್ನು ಸಾರಿದರು. ಆದ್ದರಿಂದಲೇ ಇವನನ್ನು 'ಸೂರ್ಯನಾರಾಯಣ' (ಸೂರ್ಯ+ ನಾರಾಯಣ) ಮುಂತಾಗಿ ಸಂಬೋಧಿಸಿ ತಮ್ಮ ಭಕ್ತಿಯನ್ನು ತೋರಿಸಿದರು. ಅವರು ತಮ್ಮ ಅಂತಃಕರಣದಲ್ಲಿ ಅರಿವಿಗೆ ಬಂದ ಸೂರ್ಯಸಂಬಂಧವಾದ ವಿಜ್ಞಾನವನ್ನು ಆತ್ಮಜ್ಞಾನ ಸಾಧನವಾಗಿ ಮಾಡಿಕೊಂಡರು. ಅದಕ್ಕೆ ಗಾಯತ್ರಿಯೇ ನಿದರ್ಶನ ಶ್ರೀಗಾಯತ್ರೀ ಮಂತ್ರವು ಸವಿತೃ ಅಥವಾ ಸೂರ್ಯ ದೇವತಾಕವಾದ ಮಂತ್ರ. ಸೂರ್ಯೋಪಾಸನೆಯೇ ಇದರ ಲಕ್ಷ್ಯ. ಆದರೂ ಗಾಯತ್ರೀ ಮಂತ್ರವು ಸೂರ್ಯನಲ್ಲಿ ಪರಿಸಮಾಪ್ತಿಗೊಳ್ಳದೆ, ಸೂರ್ಯನಲ್ಲಿ ಹಾಗೂ ಮಾನವರ ಹೃದಯದಲ್ಲಿರುವ ಆತ್ಮ ಬ್ರಹ್ಮನಲ್ಲಿ ಕೊನೆಗೊಳ್ಳುತ್ತದೆ. ಆದ್ದರಿಂದಲೇ ಗಾಯತ್ರಿಯನ್ನು ಬ್ರಹ್ಮ (ಆತ್ಮ) ನಿಂದ ಬೇರೆಯಾಗಿ ಉಪಾಸನೆ ಮಾಡದೆ 'ಅವನೇ ನಾನಾಗಿದ್ದೇನೆ' ಎಂಬುದಾಗಿ ಉಪಾಸನೆ ಮಾಡಬೇಕೆಂಬುದಾಗಿ ಹೇಳುವುದು. ಆತ್ಮೋಪಾಸನೆಯೇ ಗಾಯತ್ರಿಯ ಗುರಿ. ಆತ್ಮಜ್ಞಾನವನ್ನು ಸಾಧಿಸಲು ಬೇಕಾದ ಪ್ರಯೋಗ, ವಿಜ್ಞಾನವನ್ನು ಗಾಯತ್ರಿಯೂ ಮತ್ತು ಅದರ ಬಗ್ಗೆ ಬೆಳೆದುಬಂದಿರುವ ಸಂಪ್ರದಾಯವೂ ಒಳಗೊಂಡಿರುವುದೇ ಇದಕ್ಕೆ ಕಾರಣ. ಗಾಯತ್ರಿಯ ವಿನಿಯೋಗದಲ್ಲಿಯೂ ಸಹ ಸೂರ್ಯನ ಉದಯ, ಮಧ್ಯ ಮತ್ತು ಅಸ್ತಮಾನ ಕಾಲಗಳು ಗಾಯತ್ರೀ ಮಂತ್ರ ಜಪಕ್ಕೆ ಪ್ರಶಸ್ತವಾದ ಕಾಲಗಳೆಂದು ಬಹಳ ಹಿಂದಿನ ಕಾಲದಿಂದಲೂ ಪರಿಗಣಿತವಾಗಿದೆ. ಆದ್ದರಿಂದಲೇ ಗಾಯತ್ರೀ ಉಪಾಸನೆಯು ಸಂಧ್ಯಾಕರ್ಮ ಅಥವಾ ಸಂಧ್ಯಾವಂದನೆ ಎಂದು ಪ್ರಸಿದ್ಧವಾಗಿದೆ. ಸೂರ್ಯನಿಗೆ ಅರ್ಘ್ಯ ಕೊಡುವುದು ಸಂಧ್ಯಾಕರ್ಮದ ಒಂದು ಮುಖ್ಯವಾದ ಅಂಗ. ಸೂರ್ಯನನ್ನು ಮುಖ್ಯವಾಗಿ ಹೊಂದಿದ್ದರೂ, ಗಾಯತ್ರಿಯು ಸೂರ್ಯನಲ್ಲಿ ಪರ್ಯವಸಾನವಾಗದೆ ಅವನಿಗೂ ಮತ್ತು ವಿಶ್ವದಲ್ಲಿರುವ ಬೆಳಕುಗಳೆಲ್ಲಕ್ಕೂ ಬೆಳಕನ್ನು ಕೊಟ್ಟು, ಬ್ರಹ್ಮಾಂಡವೆಲ್ಲವನ್ನೂ

ಧರಿಸುವ ಪರಂಜ್ಯೋತಿ, ಪರಮಾತ್ಮನ ಉಪಾಸನೆಯನ್ನು ಗುರಿಯಾಗಿ ಹೊಂದಿದೆ. ಆ ಪರಮಾತ್ಮನೇ ಹೃದಯಾಕಾಶದಲ್ಲಿ ಬೆಳಗುತ್ತಾನೆ, ಅವನೇ ಹೊರಗೆ ಸೂರ್ಯನಲ್ಲಿಯೂ ಬೆಳಗುತ್ತಾನೆ. ಜ್ಯೋತಿಸ್ಸುಗಳೆಲ್ಲಕ್ಕೂ ಜ್ಯೋತಿಯಾದ ಯಾವ ಪರಮಾತ್ಮನು ಆದಿತ್ಯನಲ್ಲಿ ಇರುತ್ತಾನೆಯೋ ಅವನೇ ಎಲ್ಲಾ ಭೂತಗಳ ಹೃದಯದಲ್ಲಿಯೂ ನಿತ್ಯವಾದ ಜೀವಸ್ವರೂಪದಲ್ಲಿ ಇರುತ್ತಾನೆ.

ಸೂರ್ಯನು ಪರಬ್ರಹ್ಮನಲ್ಲ. ಸೂರ್ಯನಅಂತರ್ಗತವಾಗಿರುವ ಪರಬ್ರಹ್ಮನನ್ನು ಸೂರ್ಯನ ಮೂಲಕ ಹೊಂದಬೇಕಾಗಿರುವುದರಿಂದ ಸೂರ್ಯನ ತೇಜಸ್ಸನ್ನು ಅಧಿಕಾರಿಯು ಧರಿಸಿಕೊಂಡು ಧ್ಯಾನಿಸಬೇಕು (ಉಪನಿಷತ್ತು). ಸವಿತೃದೇವನು ಗಾಯತ್ರೀ ಮಂತ್ರಕ್ಕೆ ಮುಖ್ಯವಾಗಿ ಪ್ರತಿಪಾದ್ಯನಲ್ಲ. ಆ ಸವಿತೃವೂ ಯಾರನ್ನು ಪ್ರಾರ್ಥಿಸುತ್ತಾನೋ ಅಂತಹ ಅವನ ಅಂತರ್ಯಾಮಿಯಾದ ದೇವರನ್ನು ಈ ಮಂತ್ರವು ಪ್ರತಿಪಾದಿಸುತ್ತದೆ. ಸರ್ವಬುದ್ಧಿ ವೃತ್ತಿಗಳ ಪ್ರೇರಕತ್ವ ಸವಿತೃವಿಗೆ ಹೊಂದಲು ಸಾಧ್ಯವಿಲ್ಲ. ಕಾರಣ ಅವನು ನೇತ್ರೇಂದ್ರಿಯಕ್ಕೆ ಅನುಗ್ರಾಹಕ. ಕೇವಲ ನೇತ್ರ ಮೂಲಕವಾದ ಬುದ್ಧಿ ವೃತ್ತಿಗೆ ಅವನು ಪ್ರೇರಕನಾಗಬಲ್ಲನಷ್ಟೇ; ಎಲ್ಲಾ ಬುದ್ಧಿ ವೃತ್ತಿಗಳಿಗಲ್ಲ. ಪರಮಾತ್ಮನ ಈ ಮಹಾಶಕ್ತಿಯು ಸವಿತಾವನ್ನು ಕರೆಯುತ್ತಾ ಸಾಧಕನು ತನ್ನೊಳಗೆ ಅದರ ಶಕ್ತಿಯನ್ನು ಧಾರಣೆಮಾಡಿಕೊಳ್ಳುತ್ತಾನೆ. ಸವಿತಾ ಶಕ್ತಿಯು ಉತ್ತಮ ಕಾರ್ಯಗಳಲ್ಲಿ ಉತ್ಸಾಹ, ಪ್ರಸನ್ನತೆ ಹಾಗೂ ಆನಂದವನ್ನು ಹೆಚ್ಚಿಸುತ್ತದೆ. ಹಾಗೆಯೇ ಕೆಟ್ಟ ಕೆಲಸಗಳಲ್ಲಿ ಸಂದೇಹ, ನಾಚಿಕೆ ಹಾಗೂ ದುಃಖವನ್ನುಂಟುಮಾಡುತ್ತದೆ.

ಯಾರಿಂದ ಯಾವುದು ಪ್ರತ್ಯಕ್ಷವಾಗಿ (ಸ್ಪಷ್ಟವಾಗಿ) ಅನುಭವಿಸಲ್ಪಟ್ಟಿರುವುದೋ ಅದು ಆಯಾಸವಿಲ್ಲದೆ ಧ್ಯಾನಕ್ಕೆ ವಿಷಯವಾಗುತ್ತದೆ. ತಿಳಿಯದ ವಸ್ತು (ಧ್ಯಾನಕ್ಕೆ ಸುಲಭವಾದ ವಿಷಯ) ಆಗುವುದಿಲ್ಲ. ವಸ್ತುವಿನ ಸ್ವರೂಪವೇ ತಿಳಿಯದಿದ್ದಾಗ ಅದನ್ನು ಯಾರೂ ಧ್ಯಾನಿಸಲು ಸಾಧ್ಯವಿಲ್ಲ. ಪ್ರತ್ಯಕ್ಷವಾಗಿ ಸಿದ್ಧವಾದ ವಸ್ತುವನ್ನು ನೋಡಲು ಧ್ಯಾನದಲ್ಲಿ ಅಸಕ್ತರಾದವರಿಗೆ ಸಾಧ್ಯವಾಗುತ್ತದೆ. ಆದ್ದರಿಂದ ಎಲ್ಲರಿಗೂ ಪ್ರತ್ಯಕ್ಷವಾದ ಸೂರ್ಯನ ತೇಜಸ್ಸು ಸುಲಭವಾಗಿ ಧ್ಯಾನಕ್ಕೆ ಯೋಗ್ಯವಾದುದು.

ಆದಿತ್ಯನಲ್ಲಿ ತೇಜೋಮಯನೂ, ಅಮೃತಮಯನೂ ಆಗಿರುವ ಪುರುಷನೇ ಆತ (ಪರಂಜ್ಯೋತಿ). ಅಮೃತವೂ ಅದೇ, ಬ್ರಹ್ಮವೂ ಅದೇ,

ಸರ್ವವೂ ಅದೇ(ಬ್ರ. ಉ. ೨-೧-೫; ವಾ. ಬ. ೧-೬-೬-೬; ಭವಿಷ್ಯೋತ್ತರ ಪುರಾಣ, ಆದಿತ್ಯಹೃದಯಸ್ತೋತ್ರ ೧೫೫). ತೈತ್ತಿರೀಯ ಆರಣ್ಯಕದಲ್ಲಿ ಈ ಸೂರ್ಯಮಂಡಲ ಮಧ್ಯದಲ್ಲಿ ಹೊಳೆಯುವವನು 'ಸದ್ಯೋಜಾತ' ಎಂಬ ಐದು ಪರಶಿವಮೂರ್ತಿಗಳನ್ನು ಹೇಳುವ ಮಂತ್ರವಿದೆ (ತೈ. ಆ. ೧೦-೧೨).

ಈ ಸುಂದರ ಸರಸ ಸವಿತೃ ಸೃಷ್ಟಿಯಲ್ಲಿ ಸುಮನುಷ್ಯರಾಗಿ ಸೌಜನ್ಯದಿಂದ ಸಹಾಯ-ಸಹಕಾರ ಭಾವನೆಯಿಂದ ನಾವೆಲ್ಲರೂ ಬಾಳೋಣ. ಪರಮಾತ್ಮನ ಯಾವ ಶಕ್ತಿಯಿಂದ ನಮಗೆ ಪ್ರಯೋಜನವಾಗುವುದೊ, ಯಾವ ಶಕ್ತಿಯನ್ನು ನಾವು ನಮ್ಮೆಡೆಗೆ ಆಕರ್ಶಿಸಬಯಸುತ್ತೇವೆಯೋ, ಆ ಶಕ್ತಿಯ ಧ್ಯಾನ-ಸ್ಮರಣೆ ಮಾಡುವುದು ಸಹಜ. ಈ ವಿಜ್ಞಾನವನ್ನು ಗಮನದಲ್ಲಿಟ್ಟುಕೊಂಡು ಅನಂತ ಶಕ್ತಿಗಳ ಭಂಡಾರವಾದ ಈಶ್ವರನನ್ನು ಧ್ಯಾನಿಸಲು ವಿಧಿಸಿದೆ. ವಿಶ್ವಕ್ಕೆಲ್ಲಾ ಹಿತಮಾಡುವುದೇ ಈ ಮಹಾಮಹಿಮನ ಮಹದೌದಾರ್ಯ. ಸವಿತೃವು ಸರ್ವದಾತೃ, ಸದಾ ಸ್ವಜ್ಞಾನ ದೀಪ್ತಿಯಲ್ಲೇ ವಿರಾಜಿಸುವವನು. ಈ ಸದ್ರೂಪವೂ, ಚಿದ್ರೂಪವೂ, ಆನಂದರೂಪವೂ ಆದ ಈ ಸವಿತೃ ಶಕ್ತಿಯು ಸ್ವೀಕಾರಕ್ಕೆ ಯೋಗ್ಯವಾದುದು.

**ವರೇಣ್ಯಂ (ವರೇಣೀಯಂ)** : 'ವರೇಣ್ಯಂ' ಎಂದರೆ ಅತ್ಯಂತ ಶ್ರೇಷ್ಠವಾದುದು ; ಗ್ರಹಣ ಮಾಡಲು, ಧಾರಣೆ ಮಾಡಲು, ಧ್ಯಾನಮಾಡಲು, ವರಣಮಾಡಲು ಯೋಗ್ಯನಾದುದು, ಬೆಳಕು ಕೋರಲು ಅರ್ಹವಾದದ್ದು ಮತ್ತು ಶ್ರಮಪಟ್ಟು ಪಡೆಯಲು ಅಪೇಕ್ಷಣೀಯವಾದದ್ದು ಎಂದರ್ಥ. 'ವರೇಣ್ಯಂ' ಎಂದರೆ ಆಶ್ರಯ ಪಡೆಯಲು ಯೋಗ್ಯವಾದುದು. (ವಿದ್ಯಾರಣ್ಯ). ಸೇವೆ ಮಾಡಲು ಯೋಗ್ಯ (ಖಂಡರಾಜ ದೀ.ಸಂ.ಭಾ). ಯಾವ ದೋಷವೂ ಇಲ್ಲದಿರುವುದು 'ವರೇಣ್ಯಂ'. 'ವರೇಣ್ಯಂ' ಎಂದರೆ ವರೇಣೀಯಂ, ಪ್ರಾರ್ಥನೀಯಂ ಅಭೇದ ಜ್ಞಾನದಿಂದ ತಿಳಿಯಲ್ಪಟ್ಟಿದ್ದು ಎಂದು ಅರ್ಥವಾಗುತ್ತದೆ. ಜನ್ಮ-ಮೃತ್ಯು-ದುಃಖಾದಿಗಳ ವಿನಾಶಕ್ಕಾಗಿ ಧ್ಯಾನದಿಂದ ಇದು ಉಪಾಸನೀಯವು (ಸಾಯಣ ಭಾಷ್ಯ, ಭರದ್ವಾಜ ಮಹೀಧರ). 'ವರೇಣ್ಯಂ' ಎಂದರೆ ಅತಿ ಶ್ರೇಷ್ಠವಾದ ವಸ್ತು, ಸ್ವೀಕರಿಸಲು ತಕ್ಕುದ್ದು. ಇದು ವಸ್ತು ಧರ್ಮವನ್ನು ಬೋಧಿಸುವ ವಿಶೇಷಣ ಪದ. ಅತಿ ಶ್ರೇಷ್ಠವೆಂದರೆ ಪರಮಾತ್ಮನೇ. ಆದ್ದರಿಂದ 'ವರೇಣ್ಯಂ' ಎಂದರೆ ಪರಮಾತ್ಮ.

ಅಗ್ನಿ ಪುರಾಣ. ಯೋಗಯಾಜ್ಞವಲ್ಕ್ಯರು, ಸಾಯಣಾಚಾರ್ಯರು, ಮಹೀದರರ ಅಭಿಪ್ರಾಯದಂತೆ ಹುಟ್ಟು–ಸಾವುಗಳ ದುಃಖವನ್ನು ಕಳೆಯುವ ಶಕ್ತಿ ಇದಕ್ಕಿರುವುದರಿಂದ ಬ್ರಹ್ಮವಸ್ತುವು ಸರ್ವರಿಂದಲೂ ಪ್ರಾರ್ಥಿಸಲ್ಪಡಲು ಯೋಗ್ಯವಾದುದು ಎಂದರ್ಥ. ಇದಕ್ಕೆ ವಿಶೇಷ್ಯ ಪದವೆಂದರೆ ಮಂತ್ರದಲ್ಲಿನ 'ಭರ್ಗ' ಎಂಬುದು. ವಿದ್ಯಾರಣ್ಯರು 'ಆಶ್ರಯಣೀಯಂ' ಎಂದೂ, ಖಂಡ ರಾಜದೀಕ್ಷಿತರು 'ಸೇವ್ಯಂ' ಎಂದೂ ವ್ಯಾಖ್ಯಾನ ಮಾಡಿದ್ದಾರೆ. ಯಾವುದಕ್ಕೆ ಎಚ್ಚರ–ನಿದ್ರೆಗಳೆಂಬ ಅವಸ್ಥೆಗಳಿಲ್ಲವೋ, ಯಾವುದು ನಿತ್ಯವೋ, ಶುದ್ಧವೂ–ಬದ್ಧವೂ ಮತ್ತು ಎರಡಿಲ್ಲದ ಒಂದೇ ಆಗಿರುವುದೋ 'ಅಂತಹ ಪರಮಾತ್ಮ. ಅದೇ ಶ್ರೇಷ್ಠವಾದುದು. ಜನನ–ಮರಣಗಳೆಂಬ ಸಂಸಾರಕ್ಕೆ ಬೆದರಿ ಮುಕ್ತಿಯನ್ನು ಪಡೆಯಬೇಕಾದ ವಸ್ತು. ಅದೇ ಸೂರ್ಯಮಂಡಲ ಅಂತರ್ಗತವಾದ 'ಭರ್ಗ' ಅಂದರೆ ಪಾಪ ಜನಕವೆಂಬ ಅನ್ವರ್ಥನಾಮವನ್ನು ಪಡೆದಿರುವುದು. ಅದನ್ನೇ ಈ 'ವರೇಣ್ಯಂ' ಎಂಬ ಪದವು ನಿರ್ದೇಶಿಸುತ್ತದೆ. ಸೇವ್ಯವಾದ, ಮುಮುಕ್ಷುಗಳಿಂದ ಪ್ರಾರ್ಥಿಸಲ್ಪಡುವ, ನಿತ್ಯಾನಂದ ಸ್ವರೂಪ ಎನಿಸಿದ, ದೃಷ್ಟ ಜಗತ್ತಿಗೆ ಆಸರೆಯನ್ನು ಕೊಡುವಂತಹ ಮೋಕ್ಷಾಕಾಂಕ್ಷಿಗಳೆಲ್ಲರಿಂದಲೂ ಆತಿಸಲ್ಪಡುವ, ಧರ್ಮಾರ್ಥಕಾಮಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನು ಜಯಸುವುದರಿಂದ ಬೇಡಲ್ಪಡುವ ವಸ್ತು. ಅದೇ ಪರಮಾತ್ಮ. ಈ ಪರಬ್ರಹ್ಮಕ್ಕಿಂತ ಪ್ರಬಲವಾದ ವಸ್ತುವು ಇಲ್ಲವೇಇಲ್ಲ. ಆದ್ದರಿಂದ ಪರಬ್ರಹ್ಮವು ಸದಾ–ಸರ್ವದಾ–ಸರ್ವಥಾ 'ವರೇಣ್ಯ'ವೇ ಸರಿ; ವರಣೀಯವೇ ಸರಿ. ಯಾವ ದೋಷವೂ ಇಲ್ಲದಿರುವುದು 'ವರೇಣ್ಯಂ'. ಜನ್ಮ ಸಂಸಾರಗಳಿಂದ ಹೆದರಿದವರು ಮೂರು ವಿಧವಾದ ದುಃಖಗಳಿಂದ ತಪ್ಪಿಸಿಕೊಳ್ಳುವುದಕ್ಕೋಸ್ಕರ ಶ್ರೇಷ್ಠವೂ, ಆಶ್ರಯಿಸಲು ಯೋಗ್ಯವೂ, ಸರ್ವ ಪ್ರಾಣಿಗಳಿಂದಲೂ ಅಪೇಕ್ಷಣೀಯವೂ, ಸೇವಿಸತಕ್ಕದ್ದೂ ಆದ 'ಭರ್ಗ' ಅಥವಾ ಧ್ಯಾನದಿಂದ ಆಶ್ರಯಿಸುವ ಆ ತೇಜಸ್ಸೇ 'ವರೇಣ್ಯಂ' ಎಂಬ ಪದದಿಂದ ಸೂಚಿತವಾಗುತ್ತವೆ. ಇದು ನಿತ್ಯಶುದ್ಧ ಬದ್ಧವಾದ ಸತ್ಯವನ್ನು ತಿಳಿಸುತ್ತದೆ. ಸಂಸಾರ ಬಂಧನದಿಂದ ಕಂಪಿಸುವವರಿಗೆ ಅವಲಂಬಿಸಲು ಬೇಕಾಗುವ (ಮೋಕ್ಷ ಮಾರ್ಗಕ್ಕೆ ಯುಕ್ತವಾದ) ತೇಜಸ್ಸೆಂಬ ಅರ್ಥವನ್ನಿದು ಕೊಡುವುದು. ಪ್ರಧಾನವಾದ, ಪ್ರಾರ್ಥನೀಯವಾದ ವಸ್ತುವು, ಅತಿ ಶ್ರೇಷ್ಠ ವಸ್ತುವು ಯಾವುದೋ ಅದುವೇ ಅರ್ಥವೆಂದು ವಾಚಸ್ಪತ್ಯದಲ್ಲಿ ತಿಳಿಸಿದೆ. ದೇಹ ಸೃಷ್ಟಿಯಾಗಿ, ವ್ಯಾಪಾರಕ್ಕೆ ಪ್ರಾಣಿಗಳನ್ನೂ ಇಂದ್ರಿಯಗಳನ್ನೂ

ಸೇರಿಸುತ್ತ, ಇಂದ್ರಿಯ ಪ್ರಾಣಿಗಳಿಗಿಂತ ಜೀವ ಚೈತನ್ಯನು ಉತ್ತಮವಾದುದರಿಂದ ಮತ್ತು ಪ್ರಾಣಿಗಳಿಂದ ಸೇವಿಸಲ್ಪಡಲು ಯೋಗ್ಯವಾದುದರಿಂದ ಜೀವ ಚೈತನ್ಯನಿಗೆ 'ವರೇಣ್ಯಂ' ಎಂದು ಹೆಸರು. ಶ್ರೇಷ್ಠವಾದ ಪರಮ ಪದವಿಗೂ 'ವರೇಣ್ಯಂ' ಎಂದು ಹೇಳುತ್ತಾರೆ. 'ವರೇಣೀಯೋ ಗುಣೋನ್ನತೇಃ' (ಋಗ್ಭಾಷ್ಯ).

ಗಾಯತ್ರೀ ಮಂತ್ರದಲ್ಲಿ ಈಶ್ವರನ ಸರ್ವಶ್ರೇಷ್ಠ ಶಕ್ತಿಯನ್ನು ಅಭಿಮಂತ್ರಣ ಮಾಡುವುದರ ಉದ್ದೇಶ ಸಾಧಕನ ದೃಷ್ಟಿಕೋನವು ಶ್ರೇಷ್ಠವಾಗಲಿ, ಪ್ರತಿಯೊಂದು ಪರಿಸ್ಥಿತಿಯಲ್ಲಿಯೂ ಅವನ ದೃಷ್ಟಿಕೋನದಲ್ಲಿ ಆ ಶ್ರೇಷ್ಠತೆಯ ಸ್ವರ್ಗೀಯ ಅನುಭವ ಉಂಟಾಗಲಿ ಎಂಬುದೇ. ಮನುಷ್ಯನಿಗೆ ಯುಕ್ತವಾದ ಮತ್ತು ಅನುಪಯುಕ್ತವಾದ, ತತ್ತ್ವಗಳೆಲ್ಲವೂ, ಈಶ್ವರ ಸತ್ತೆಯಲ್ಲಿವೆ. ಅವುಗಳಲ್ಲಿ ಯಾವ ತತ್ತ್ವಗಳು ವರೇಣ್ಯವೋ, ಗ್ರಹಣ ಮಾಡಲು ಯೋಗ್ಯವೋ ಅವುಗಳನ್ನು ಗಾಯತ್ರೀ ಮುಖಾಂತರ ನಾವು ಗ್ರಹಿಸುತ್ತೇವೆ. ಧರ್ಮ, ಕರ್ತವ್ಯ, ಅಧ್ಯಾತ್ಮ, ಸತ್, ಚಿತ್, ಆನಂದ, ಸತ್ಯ, ಶಿವ, ಸುಂದರಗಳ ಕಡೆಗೆ ಯಾವ ತತ್ತ್ವಗಳು ನಮ್ಮನ್ನು ಮುಂದುವರಿಸುತ್ತವೆಯೋ ಅವು ವರೇಣ್ಯವಾದುವು. ಶ್ರೇಷ್ಠತ್ತ್ವವನ್ನು ಅಂತರ್ಯದಲ್ಲಿ ಸ್ಥಾಪಿಸುವುದರಿಂದ, ಶ್ರೇಷ್ಠತ್ತ್ವದತ್ತ ಅಭಿಮುಖರಾಗುವುದರಿಂದ ನಮ್ಮ ಈಶ್ವರಪ್ರದತ್ತವಾದ ಶ್ರೇಷ್ಠತ್ತ್ವವು ಜಾಗೃತವಾಗುವುದು. ಈ ಪ್ರಪಂಚದಲ್ಲಿ ತುಂಬಿರುವ ಪದಾರ್ಥಗಳಲ್ಲಿ ಕೇವಲ ಶ್ರೇಷ್ಠವಾದುದನ್ನೇ ಗ್ರಹಿಸುತ್ತೇವೆ. ಯಾರಲ್ಲಿ ಯಾವ ಭಾವನೆ ಇರುವುದೋ ಅದು ಅವರ ಕ್ರಿಯೆಯಲ್ಲಿ ಪ್ರಕಟವಾಗುವುದು. ಯಾವಾಗ ನಾವು ವರೇಣ್ಯವನ್ನು ಗ್ರಹಿಸುತ್ತೇವೋ ಆಗ ನಮಗೆ ಸಂಸಾರದ ವಿವಿಧ ಕ್ಷೇತ್ರಗಳಲ್ಲಿ ಅಂತಹ ಅಭೀಷ್ಟ ಪದಾರ್ಥಗಳೇ ಪ್ರಾಪ್ತವಾಗುತ್ತವೆ. ಆಗ ನಮಗೆ ಪ್ರತಿಯೊಂದರಲ್ಲಿಯೂ ಒಂದು ಶ್ರೇಷ್ಠತೆಯಿದೆ, ಪರಮಾತ್ಮನ ಶ್ರೇಷ್ಠಸತ್ತೆಯು ನಾಲ್ಕೂ ನಿಟ್ಟಿನಿಂದ ಆನಂದವನ್ನೆಸಗುತ್ತಿದೆ ಎಂಬುದು ಅನುಭವಕ್ಕೆ ಬರುತ್ತದೆ. ಕೆಟ್ಟದರ ಗರ್ಭದಲ್ಲಿಯೂ ಅದೊಂದು ಶ್ರೇಷ್ಠತೆ ಅಡಗಿರುವುದು ಗೋಚರವಾಗುತ್ತದೆ. ಆದರಿಂದಾಗಿ ನಮ್ಮಲ್ಲಿಯ ಒಳ್ಳೆಯ ಅಂಶಗಳು ವಿಕಾಸ ಹೊಂದಲು ಹಾಗೂ ಒಳ್ಳೆಯದರ ಸಾಧನೆಯ ಸಂಘರ್ಷದೆಡೆ ಪ್ರವೇಶಿಸಲು ಅನುಕೂಲವಾಗುತ್ತದೆ. ಈ ರೀತಿ ನೋಡಿದಲ್ಲಿ ಕೆಟ್ಟದ್ದೂ ಕೂಡ ನಮ್ಮ ಒಳ್ಳೆಯತನದ ಅಭಿವೃದ್ಧಿಗೆ ಕಾರಣವಾಗುತ್ತದೆ. ಹಾಗೂ ಅಪರಿಮಿತ

ಜ್ಞಾನಕ್ಕೆ ಕರೆದೊಯ್ಯುತ್ತದೆ. ಅಷ್ಟೆ ಅಲ್ಲ, ಮಹಾ ಮಾಯೆಯಿಂದ ಬಿಡುಗಡೆ ಹೊಂದಲು ಇದೊಂದು ಮಾರ್ಗವಾಗುತ್ತದೆ. 'ವರೇಣ್ಯಂ' ಎಂದು ಹೇಳಿ ಸಾಧಕನು ಆ ಸವಿತೃ ಶಕ್ತಿಯೆದುರು ಆತ್ಮಸಮರ್ಪಣೆ ಮಾಡಿ ತನ್ನ ತನುಮನಗಳಿಂದ ಆ ಪರಮಾತ್ಮನ ಆಜ್ಞಾಪಾಲನೆಗೆ ಉದ್ಯುಕ್ತನಾಗುತ್ತಾನೆ. ತನ್ನ ಸರ್ವಸ್ವವನ್ನೂ ಪರಮಾತ್ಮನಿಗೆ ಅರ್ಪಿಸಿ ಆತನ ಆಜ್ಞಾಪಾಲನೆಯಲ್ಲಿ ಸಾಧಕನು ತತ್ಪರನಾದರೆ ಮಾತ್ರಾ 'ವರೇಣ್ಯಂ'ನ ಭಾವನೆಯು ಪೂರ್ಣವಾಗುವುದು. ಇದನ್ನೇ 'ಈಶ್ವರಪ್ರಣಿಧಾನ'ವೆನ್ನುವರು ; ಇದನ್ನೇ 'ಶರಣಾಗತಿ' ಎನ್ನುವರು ; ಇದನ್ನೇ 'ಅನನ್ಯ ಭಕ್ತಿ' ಎನ್ನುವರು.

'ವರೇಣ್ಯಂ' ಎಂಬ ಶಬ್ದದಿಂದ ಸ್ವಯಂ ಸರ್ವರಿಗೂ ಅಭ್ಯಸಣಿಯುವಾದ ನಿರತಿಶಯ ಆನಂದ ರೂಪವೆಂದು ತಿಳಿದುಬರುತ್ತದೆ. ಮನೋಮಾಲಿನ್ಯವೇ ಮಾನವನ ಮಧುರ ಮನೋರಥಗಳಿಗೆಲ್ಲಾ ಮಹಾಶತ್ರು. ಆ ಶತ್ರುವನ್ನು ಮೂಲಸಹಿತ ಮರ್ದನ ಮಾಡಬಲ್ಲ ಶಕ್ತಿಯೇ ಭರ್ಗ. ಆದಿತ್ಯ ಭರ್ಗನೇ (ತೇಜಸ್ಸೇ) ಸರ್ವರಿಗೂ ವರೇಣ್ಯವಾದುದು, ಅದು ವರಣೀಯುವೇ ಸರಿ.

**ಭರ್ಗಃ** : ಕೆಟ್ಟದ್ದನ್ನು–ಅಂಧಕಾರವನ್ನು ನಾಶಮಾಡುವ ಪರಮಾತ್ಮನ ಶಕ್ತಿಗೆ (ತೇಜಸ್ಸಿಗೆ) 'ಭರ್ಗ' ಎನ್ನುವರು. ಭಂಜ್ ಧಾತು ಭಗ್ನಗೊಳಿಸುವುದು (ಆಮರ್ದನ), ನಾಶಗೊಳಿಸುವುದು ಎಂಬರ್ಥದಲ್ಲಿದೆ ಮತ್ತು ಭೃಜ್ ಧಾತು ಭರ್ಜನ–ಭೃಜನ ಅರ್ಥಾತ್ ಸುಡುವುದು–ಹುರಿಯುವುದು–ನಾಶಗೊಳಿಸುವುದು ಎಂಬರ್ಥದಲ್ಲಿದೆ. 'ಭಾರತಿ–ಜ್ಞಾನ ರೂಪಕ್ವಾತ್ ಭರ್ಗಃ' ಎಂದರೆ ಸುಖ ಮತ್ತು ಜ್ಞಾನಸ್ವರೂಪ ಎಂದರ್ಥ. ಭ್ರಾಜ್ ಧಾತುವಿನಿಂದ ಹುಟ್ಟಿದ ಭರ್ಗದ ಅರ್ಥವು 'ದೀಪ್ತಿ' ಎಂದಿದೆ. ಈ ಎರಡು ಧಾತುಗಳಿಂದ ಭಜಿಸುವವರ ಪಾಪನಾಶಮಾಡುವ ಹೇತು ಭರ್ಗವಾಗಿದೆ ಎಂದು ವಿವರಿಸಿದೆ (ಭಾರದ್ವಾಜ). ಮೈತ್ರ್ಯುಪನಿಷತ್ತಿನಲ್ಲಿ (೬–೭) ಈ ರೀತಿ ಹೇಳಿದೆ:

'ಭ' ಈ ಲೋಕದಲ್ಲಿ ಪ್ರಕಾಶಿಸುವಂತಹುದು, 'ರ' ಈ ಪ್ರಾಣಗಳಿಗೆ ಆನಂದವನ್ನು ನೀಡುವಂತಹುದು. 'ಗ' ಯಾವ ಆತ್ಮನಲ್ಲಿ ಎಲ್ಲವು ಪ್ರಳಯು ಮತ್ತು ಸುಷುಪ್ತಿ ಕಾಲದಲ್ಲಿ ಲಯಹೊಂದಿ, ಸೃಷ್ಟಿ ಮತ್ತು ಜಾಗೃತ ಕಾಲದಲ್ಲಿ ಪುನಃ ಉನ್ನತವಾಗುವುದೋ ಅದೇ ಎಂಬ ಭಾವವಾಗಿದೆ. ಚೈತನ್ಯರೂಪವಾದ ತೇಜಸ್ಸೆಂದು ಸ್ಕಾಂದಪುರಾಣದ ಸೂತಸಂಹಿತೆಯಲ್ಲಿ ಹೇಳಿದೆ. 'ಭರ್ಗ' ಪದಕ್ಕೆ ಬೇರೆಬೇರೆಯಾಗಿ ಅರ್ಥಗಳನ್ನು ಅಳವಡಿಸಿರು

ತ್ತಾರೆ. ಸಾಯಣಾಚಾರ್ಯರು ಈಶ್ವರೀಯ ಶಕ್ತಿ, ಸ್ವಪ್ರಕಾಶದ ಕಿರಣ ಗಳಿಂದ ಲೋಕಗಳನ್ನು ಬೆಳಗಿಸುವ ಶಕ್ತಿ ಎಂದೂ, ಶ್ರೀಮದ್ಭಗವತ್ಪಾದರು ತಮ್ಮ ಭಾಷ್ಯದಲ್ಲಿ–ತತ್ತ್ವಜ್ಞಾನೈಕಗಮ್ಯವಾದ ವಸ್ತು ಎಂದಿದ್ದಾರೆ. ಶತಪಥ ಬ್ರಾಹ್ಮಣದಲ್ಲಿ ಅಚಿಂತ್ಯವಾದ ವೀರ್ಯವೆಂದು ಹೇಳಿದೆ. ಪಾಪ ನಿವರ್ತಕವಾದ ಅಥವಾ ಅವಿದ್ಯಾತತ್ಕಾರ್ಯ ನಾಶಮಾಡುವ ತೇಜೋ ರೂಪಿಯಾದವನೇ 'ಭರ್ಗ'. 'ಭರ್ಗಃ' ಎಂದರೆ ತೇಜಸ್ಸು, ಶುದ್ಧ, ಪಾಪ ಗಳನ್ನು ಸುಡುವವನು, ಆನಂದ ನೀಡುವವನು ಎಂದೂ ಆಗುವುದು. ಇದು ಚೈತನ್ಯರೂಪವಾದ ತೇಜಸ್ಸು. ಆದಿತ್ಯ ಮಂಡಲಾಂತರ್ಗವಾದ ಈಶ್ವರೀ ತೇಜಸ್ಸು ಅವಿದ್ಯಾ ದೋಷವನ್ನು ದಹಿಸಿ ಪವಿತ್ರಗೊಳಿಸಬಲ್ಲ ಜ್ಞಾನೈಕ ಗಮ್ಯವಾದ ವಸ್ತು. ನಿತ್ಯ ಶುದ್ಧ–ಬದ್ಧ–ಮುಕ್ತ ಸ್ವಭಾವದ, ಪರಮಾತ್ಮ ಜ್ಞಾನರೂಪವಾದ, ಸ್ವಯಂಜ್ಯೋತಿ ಸ್ವರೂಪವಾದ ಚೈತನ್ಯಾತ್ಮಕ ತೇಜಸ್ಸು. ಆತ್ಮಸಂಸ್ಕಾರದಿಂದ ಅಜ್ಞಾನ ಮತ್ತು ಅದರಿಂದುಂಟಾಗುವ ಸಮಸ್ತ ಪಾಪಗಳನ್ನು ನಾಶಮಾಡಬಲ್ಲ, ಸ್ವಸಾಕ್ಷಾತ್ಕಾರದಿಂದ ಅನಾದಿ–ಜನ್ಮ–ಮರಣ ಪರಂಪರಾರೂಪವಾದ ಸಂಸ್ಕಾರಕ್ಕೆ ಮೂಲಕಾರಣವಾದ ಸ್ವಯಂಜ್ಯೋತಿಸ್ವರೂಪ. ನಿರ್ಗುಣ–ನಿಷ್ಕ್ರಿಯ-ನಿತ್ಯತೃಪ್ತ–ನಿರಂಜನ–ನಿರ್ವಿಕಾರ-ನಿರಾಕಾರ-ನಿತ್ಯಮುಕ್ತ ಮತ್ತು ನಿರ್ಮಲವಾದ ಪರಬ್ರಹ್ಮ ಸ್ವರೂಪ. ಭರ್ಗ ಶಕ್ತಿಯುಕ್ತನು ಆ ಪರಮಾತ್ಮನೇ. 'ಭರ್ಗಸ್' ಶಬ್ದವು ಸಕಾರಾಂತ (ನಪುಂಸಕಲಿಂಗ). ಇದು 'ತೇಜಸ್' ಎಂಬ ಅರ್ಥವನ್ನು ಕೊಡುತ್ತದೆ. ಪರಮಾತ್ಮನು ನಮ್ಮ ಅಂತಿಮ ಗುರಿ. ಸೂರ್ಯಬಿಂಬವು ಅವನ ಸಂಕೇತ. ಅದೇ 'ಭರ್ಗ'. ಇದು ಪರಶಿವನ ವಿಶೇಷ ನಾಮ (ಹರಃ ಸ್ಮರಹರೋ ಭರ್ಗಃ-ಅಮರಕೋಶ). ತೈತ್ತಿರೀಯ ಆರಣ್ಯಕ ಮತ್ತು ಶತರುದ್ರೀಯಗಳಲ್ಲಿ ಆದಿತ್ಯಮಂಡಲದಲ್ಲಿ ಹೊಳೆಯುವವನು ಪರಶಿವನೆಂದು ಹೇಳಲಾಗಿದೆ. 'ಭರ್ಗಸ್' ಶಬ್ದದಿಂದ ಆದಿತ್ಯನಿಗೂ ಅಂತರ್ಯಾಮಿಯಾದ ವನು, ಜ್ಯೋತಿರ್ಮಯನು ಎಂದು ಪ್ರತಿಪಾದಿತವಾಗುತ್ತದೆ. 'ಭರ್ಗಃ' ಶಬ್ದಕ್ಕೆ 'ಧಿಯೋ ಯೋ ನಃ' ಎಂಬ ಗಾಯತ್ರೀ ಮಂತ್ರದ ಮೂರನೇ ಪಾದದಲ್ಲಿರುವ 'ಯೋ' ಎಂಬುದರೊಡನೆ ವಿಶೇಷ್ಯರೂಪದಿಂದ ಅನ್ವಯ ಮಾಡಬೇಕು. (ನಿರುಕ್ತ ಭಾಷ್ಯಮ್ ಸ್ಕ್ಯ-ಮ-ಆ.ಕಾ). 'ಭಾ' ಧಾತು ಗತಿ ಅರ್ಥದಲ್ಲಿದೆ. ಆದುದರಿಂದ ಯಾವನು ತನ್ನ ಕಿರಣಗಳಿಂದ ಗತಿಯುಳ್ಳ ವನಾಗಿರುವನೋ–ಪ್ರವೇಶ ಮಾಡಬಲ್ಲನೋ ಅಥವಾ ಯಾವನು ಸಂಸಾರ

ವನ್ನು ಸುಟ್ಟುಹಾಕುವನೋ ಆತನು ಭರ್ಗನು. (ಮೈತ್ರ್ಯುಪನಿಷತ್ ೯-೭) 'ಭರ್ಗ' ಎಂದರೆ ತೇಜ, ಪ್ರಕಾಶ. ಪ್ರಕಾಶವೆಂದರೆ ಜ್ಞಾನ. ಯಾವುದು ನಿರುಪದ್ರವ-ನಿಷ್ಪ್ರಾಣ-ನಿರ್ಗುಣ-ಶುದ್ಧ-ಸಕಲ ದೋಷರಹಿತ-ಪರಿಪಕ್ವ-ಪರಮಾರ್ಥ ವಿಜ್ಞಾನ ಸ್ವರೂಪವಾಗಿದೆಯೋ ಅದುವೇ ಭರ್ಗ (ನಿರುಕ್ತೇತಿಹಾಸಾರ್ಥಃ). 'ಭ'ಕಾರವು ಸಮಸ್ತ ಲೋಕಗಳನ್ನು ಪ್ರಕಾಶ ಗೊಳಿಸುತ್ತದೆ; 'ಗ'ಕಾರವು ಬಾರಿಬಾರಿಗೂ ಸೃಷ್ಟಿಯನ್ನು ಲಯಗೊಳಿಸು ತ್ತದೆ. ಆದ್ದರಿಂದಲೇ ಭರ್ಗನೆಂದು ಕರೆಯಲ್ಪಡುತ್ತದೆ. '(ವೃ. ಯೋ, ಯಾಜ್ಞ ಅ. ೯ ಮೈತ್ರ್ಯುಪನಿಷತ್). ಸೂರ್ಯಮಂಡಲ, ಪುರುಷ (ಈಶ್ವರ) ಮತ್ತು ಕಿರಣಗಳು ಎಂಬೀ ಮೂರೂ ಭರ್ಗದ ನಾಮಗಳು (ಶುಕ್ಲ ಯಜುರ್ವೇದ ವಾಜಸನೇಯ ಸಂ.) ಗಾಯತ್ರಿಯೇ ಭರ್ಗವು; ಭರ್ಗವೇ ಗಾಯತ್ರೀ (ಗೋಪಥ ಬ್ರಾ. ೧೦. ೫-೧೫). ಇದೇ ಬ್ರಹ್ಮ, ಇದೇ ಅಮೃತ, (ಮೈತ್ರ್ಯುಪನಿಷತ್ತು-೬-೩೫). ನಿಶ್ಚಯವಾಗಿಯೂ ಭರ್ಗವು ಬ್ರಹ್ಮತೇಜಸ್ಸು; ಅಂತೆಯೇ ಗಾಯತ್ರೀ ತೇಜಃಸ್ವರೂಪಳು (ಐತರೇಯ ಬ್ರಾ. ಅ. ೧,೩೧, ಬ್ರಾಹ್ಮಣ). ನಿರುಕ್ತವಲ್ಲಿ ಹೀಗೆ ಹೇಳಿದೆ— ಭರ್ಗವು ತೇಜಸ್ಸಾಗಿದೆ, ಪ್ರಕಾಶವಾಗಿದೆ ಮತ್ತು ಪ್ರಕಾಶಜ್ಞಾನ ಸ್ವರೂಪ ವಾಗಿದೆ. ಇದು ಉಪದ್ರವರಹಿತ ನಿರ್ಗುಣ, ಶುದ್ಧ, ಸಕಲ ದೋಷರಹಿತ ಸ್ವರೂಪವಾಗಿದೆ. ಪ್ರಕಾಶವನ್ನು ಕೊಟ್ಟು, ಲೋಕದ ಒಳಹೊರಗಿನ ಕತ್ತಲೆಯನ್ನು ನಾಶಮಾಡುವಂತಹುದು; ಮಳೆಯನ್ನು ಸುರಿಸಿ ಸಕಲ ಪ್ರಾಣಿಗಳ ಭರಣಕ್ಕೆ, ಕಾಪಾಡುವಿಕೆಗೆ ಕಾರಣವಾದುದು 'ಭರ್ಗ.' ಆದಿ ತ್ಯಾಂತರ್ಗತ ತೇಜಸ್ಸು ಕಿರಣಗಳಿಂದ ಗತಿಯುಳ್ಳದ್ದು, ಲೋಕವನ್ನು ಬೆಳ ಗುವುದು ಇತ್ಯಾದಿ ಅರ್ಥವೆಂದು ಮೈತ್ರಾಯಣಿ ಉಪನಿಷತ್ತು ತಿಳಿಸುತ್ತದೆ.

ಶ್ರೀಗಾಯತ್ರೀ ಮಂತ್ರದ ಒಂದೊಂದು ಶಬ್ದದ ರಹಸ್ಯವನ್ನು ತಿಳಿ ಯುತ್ತಾ, ತದನುಕೂಲವಾಗಿ ತನ್ನ ಆಚರಣೆಯನ್ನು ರೂಪಿಸಿಕೊಳ್ಳುತ್ತಾ 'ವರೇಣ್ಯಂ' ಎಂದು ಹೇಳಿ ತನ್ನ ಆತ್ಮವನ್ನು ಪರಮಾತ್ಮನಿಗೆ ಸಮರ್ಪಿಸಿದಾಗ ಭರ್ಗಶಕ್ತಿಯು ಪರಮಾತ್ಮನ ಅತಿ ಶ್ರೇಷ್ಠ, ಅತಿ ಶುದ್ಧ, ನಿರ್ಮಲ, ಪಾಪ ನಾಶಕ ತೇಜಸ್ಸನ್ನು ಧ್ಯಾನಿಸಲು ಪ್ರಾರಂಭಿಸುತ್ತಾನೆ; ರೋಗಿಯು ಉತ್ತಮ ವೈದ್ಯನ ಬಳಿಗೆ ತಲುಪಿದಂತೆ ತಿಳಿಯುತ್ತಾನೆ. ಅವನು ವೈದ್ಯನು ಹೇಳಿದಂತೆ ಅನುಪಾನ ಹಾಗೂ ಪಥ್ಯದಿಂದ, ಗಾಯತ್ರೀ ಮಂತ್ರನೆಂಬ ಔಷಧವನ್ನು ಪ್ರಯೋಗಿಸಿ, ರೋಗ ನಿವಾರಿಸಿಕೊಂಡು ಪೂರ್ಣ ಆರೋಗ್ಯವಂತನಾಗು

ತ್ತಾನೆ. ಈ ಭರ್ಗನಾಮಕ ಪರಮಾತ್ಮನೇ ಅವಿನಾಶೀ ವೈದ್ಯ. ಅವನ ಬಳಿಯೇ ದುಃಖ, ಪಾಪ, ರೋಗ, ಶೋಕ, ಚಿಂತೆ ಇತ್ಯಾದಿಗಳನ್ನು ನಾಶ ಮಾಡುವ ಪರಮಔಷಧವಿರುವುದು. ಅವನಿಗೇ ಅವುಗಳನ್ನು ನಿವಾರಿಸುವ ಸಾಮರ್ಥ್ಯವಿರುವುದು.

ಸರ್ವಪಾಪ–ತಾಪಗಳ ಕಾರಣವಾದ ಹೊಲಸು ಯೋಚನೆಗಳನ್ನು ಹೊತ್ತಿಕ್ಕಿ ಬೂದಿಮಾಡುವ ದೈವಿಕ ವರ್ಚಸ್ಸೇ ಈ 'ಭರ್ಗ'. ಈ 'ಭರ್ಗ' ವನ್ನು, ಈ ಶುದ್ಧಸ್ವರೂಪವನ್ನು ನಾವು ನಮ್ಮ ಬುದ್ಧಿಗೆ ಸೇರಿಸಿಕೊಳ್ಳಬೇಕು ; ಬಾಳಿನಲ್ಲಿ ಇಳಿಸಿಕೊಳ್ಳಬೇಕು ; ಧಾರಣೆಮಾಡಬೇಕು ; ಅಥವಾ ಧ್ಯಾನಿಸಬೇಕು. ಯಾವ ತೇಜಸ್ಸು ನಿರಂತರವಾಗಿ ನಮ್ಮ ಬುದ್ಧಿವೃತ್ತಿಗಳನ್ನು ಧರ್ಮ–ಅರ್ಥ–ಕಾಮ–ಮೋಕ್ಷಗಳಲ್ಲಿ ಪ್ರೇರಿಸುತ್ತದೆಯೋ ಆ ತೇಜಸ್ಸನ್ನು ಧ್ಯಾನಮಾಡಬೇಕು. ಆ ತೇಜಸ್ಸೇ ಎಲ್ಲವನ್ನೂ ರಚನೆ ಮಾಡುತ್ತದೆ ; ಅದೇ ಬೆಳಗುತ್ತದೆ ; ಅದೇ ಜ್ವಲಿಸುತ್ತದೆ ; ಅದೇ ಕಾಲಾಗ್ನಿರೂಪವನ್ನು ತಳೆದು, ಏಳು ಜ್ವಾಲೆಗಳಿಂದ ಕೂಡಿ, ಏಳು ರಶ್ಮಿಗಳಿಂದ ಜಗತ್ತನ್ನು ನಾಶಮಾಡುತ್ತದೆ. ಹಾಗೆ ಬೆಳಗುವುದರಿಂದಲೇ ಅದು 'ಭರ್ಗ' ಎನಿಸಿಕೊಳ್ಳುವುದು. ಪರಮಾತ್ಮನ ಪ್ರತಿಬಿಂಬನಾದ ಜೀವಚೈತನ್ಯವೇ ಅಜ್ಞಾನಕಾರ್ಯಪ್ರಕಾಶಕ ಮತ್ತು ಅಜ್ಞಾನಕಾರ್ಯನಾಶಕ ತೇಜೋರೂಪಿಯಾಗಿರುವವನು. ಇಲ್ಲಿ ಒಂದೇ ತೇಜೋಶಕ್ತಿಯು ಅವಿದ್ಯಾಕಾರ್ಯ ಪ್ರಕಾಶವಾಗಿಯೂ ಮತ್ತು ತತ್ಕಾರ್ಯದ ಪ್ರಕಾಶಕವಾಗಿಯೂ ಇದೆ. ನಾವು ಸದಾ ಕೆಟ್ಟ ಸಂಗತಿಗಳಿಂದ–ದುರ್ಬಲತೆಗಳಿಂದ–ಕುಪ್ರವೃತ್ತಿಗಳಿಂದ ಜಾಗರೂಕವಾಗಿ ದೂರವಿರಬೇಕು. ಅವುಗಳನ್ನು ನಷ್ಟಗೊಳಿಸಬೇಕು ಎಂಬುದೇ ಇದರ ಅರ್ಥ. ಕೆಟ್ಟ ನಡತೆಗಳನ್ನು ಸುಟ್ಟು, ಅವಿದ್ಯಾ ದೋಷವನ್ನು ನಾಶಮಾಡಿ, ಜ್ಞಾನಸ್ವರೂಪವನ್ನು ಪಡೆಯಬೇಕೆಂಬುದೇ ಇದರ ಸಂಕೇತ. ದೇವತೆಗಳ ಅಂಶವಾಗಿ ನಮ್ಮಲ್ಲಿರುವ ಪ್ರಾಣಗಳ ಮತ್ತು ಇಂದ್ರಿಯಗಳ ಸಹಾಯವನ್ನು, ರಾಕ್ಷಸಸ್ವರೂಪವಾದ ಅಜ್ಞಾನವನ್ನು, ನಿಗ್ರಹಿಸುವುದಕ್ಕೋಸ್ಕರ ಹೊಂದಬೇಕೆಂಬುದೇ ಇದರ ಗುರಿ. 'ವರೇಣ್ಯಂ' ಪದದಿಂದ ಉಕ್ತವಾಗುವ ಶಕ್ತಿಯು ಅವಶ್ಯಕತೆ ಎಷ್ಟಿದೆಯೋ ಅಷ್ಟೇ ಈ ಶಕ್ತಿಯದೂ ಇದೆ. ನಾವು ಶ್ರೇಷ್ಠತೆಯನ್ನೇನೋ ನೋಡುತ್ತಲೇ ಇರಬೇಕು. ಆದರೆ ಕೆಟ್ಟ ಸಂಗತಿಗಳ ಕಡೆಗೆ ಕಣ್ಣುಮುಚ್ಚಿ ಕುಳಿತುಕೊಳ್ಳಬಾರದು. ನಾವು ನಮ್ಮಲ್ಲಿ ನಿತ್ಯವು ತಲೆ ಎತ್ತುವ ದೋಷ–ದುರ್ಗುಣಗಳನ್ನು ಚೆನ್ನಾಗಿ

ನಿರೀಕ್ಷಣೆ ಮಾಡಿ ಹೊರಹಾಕದಿದ್ದರೆ ಅವು ನಮ್ಮ ಶ್ರೇಷ್ಠತ್ವದ ಮೇಲೆ ಆಕ್ರಮಣಮಾಡಿ ಅದನ್ನು ಸೋಲಿಸುವ ಪ್ರಯತ್ನ ಮಾಡುವುವು. ಒಳ್ಳೆಯ ಸಂಗತಿಗಳಿಗಿಂತ ಕೆಟ್ಟ ಸಂಗತಿಗಳ ಆಕರ್ಷಣೆ ತುಂಬಾ ಹೆಚ್ಚಾಗಿರುತ್ತದೆ. ನಿರ್ಬಲರಾದವರು ಅದರ ಪ್ರಲೋಭನೆಗಳಲ್ಲಿ ಸುಲಭವಾಗಿ ಜಾರಿಬೀಳುತ್ತಾರೆ ಮತ್ತು ಅವುಗಳ ಹಿಡಿತಕ್ಕೆ ಸಿಕ್ಕಿಬಿದ್ದು ದುಃಖವನ್ನನುಭವಿಸುತ್ತಾರೆಂಬುದನ್ನು ನಾವು ಪ್ರಾಯಶಃ ನೋಡುತ್ತೇವೆ. ಆದ್ದರಿಂದ ನಮ್ಮ ದೋಷಗಳನ್ನು ನಾಶಮಾಡಿಕೊಳ್ಳುವುದು ಅವಶ್ಯಕ. ನಮ್ಮ ದೌರ್ಬಲ್ಯಗಳಿಂದ, ಹಾನಿಗಳಿಂದ ರಕ್ಷಿಸಿಕೊಳ್ಳಬೇಕೆಂಬುದು ಈ ಶಬ್ದದ ಸಂದೇಶ. ಮನಸ್ಸು ಮಲಿನವಾಗಿದ್ದರೆ, ಮಾತು ನಿರ್ಮಲವೇ ಆಗಿರುವುದರಿಂದ ನೈಕೂಡ ಮಲಿನವಾದ ಕಾರ್ಯಗಳಲ್ಲಿ ತೊಡಗಲಾರದು. ನಾವು ನಮ್ಮ ಶಾರೀರಕ, ಬೌದ್ಧಿಕ, ಆರ್ಥಿಕ, ಚಾರಿತ್ರಿಕ ಹಾಗೂ ಸಂಘಟನಾತ್ಮಕ ಬಲವನ್ನು ವೃದ್ಧಿಗೊಳಿಸಿಕೊಂಡು, ನಮ್ಮ ದೌರ್ಬಲ್ಯಗಳಿಂದ, ಹಾಗೂ ಹಾನಿಗಳಿಂದ ನಮ್ಮನ್ನು ರಕ್ಷಿಸಿಕೊಳ್ಳಬೇಕು. ಈ ಸೂಕ್ಷ್ಮ ಲೋಕದಲ್ಲಿ ಪ್ರತಿಬಿಂಬಿಸುವ ಸೌರ ಬ್ರಹ್ಮಾಂಡದ ಈಶ್ವರನ ಪ್ರಜ್ಞೆಯನ್ನು ಸಂಧಿಸಲು ನಮ್ಮ ಪ್ರಜ್ಞೆಯ ಮಟ್ಟವನ್ನು ಕ್ರಮವಾಗಿ ಏರಿಸುವುದು ಆತ್ಮಸಾಕ್ಷಾತ್ಕಾರದ ಪ್ರಕ್ರಿಯೆ. ನಮ್ಮ ಪ್ರಜ್ಞೆಯ ಮಟ್ಟ ಏರಿದಂತೆಲ್ಲಾ ಸತ್ಯ ಹೆಚ್ಚುಹೆಚ್ಚಾಗಿ ಪ್ರಕಾಶಮಾನವಾಗಿ ಗೋಚರಿಸುತ್ತದೆ. ಅಷ್ಟೇ ಅಲ್ಲ; ನಮಗೆ ಗೋಚರಿಸುವ ಆ ಸತ್ಯದ ಜೊತೆಗೆ ನಾವು ಹೆಚ್ಚುಹೆಚ್ಚಾಗಿ ಬೆರೆಯುತ್ತೇವೆ. ಸರ್ವವ್ಯಾಪಕವಾದ ಈಶ್ವರನಲ್ಲಿ ನಮ್ಮ ಪ್ರಜ್ಞೆ ಹಿಗ್ಗುತ್ತಿರುವಂತೆಯೂ (expand–ವಿಕಸನ), ಆ ಸತ್ಯವು ನಮ್ಮೊಳಗೆ ಇಳಿಯುವುದು ಮತ್ತು ಅಂಶವು ಪೂರ್ಣವಾಗಿ ವಿಕಾಸ ಹೊಂದುವುದು—ಈ ದ್ವಂದ್ವ ಕ್ರಿಯೆಗಳು ಏಕಕಾಲದಲ್ಲಿ ನಡೆಯುತ್ತವೆ. ಇವೆರಡನ್ನೂ ಪ್ರತ್ಯೇಕಿಸಲು ಸಾಧ್ಯವಿಲ್ಲ.

ತನ್ನಲ್ಲೇ ಇರುವ ಈ ಈಶ್ವರನನ್ನು ಪತ್ತೆಹಚ್ಚುವ ಕಾರ್ಯದಲ್ಲಿ ತೊಡಗಿರುವ ಸಾಧಕನು, ಸೂರ್ಯನಲ್ಲಿ ಗೂಢವಾಗಿರುವ ಈಶ್ವರನನ್ನು ಆರಾಧಿಸಿ, ಆಧ್ಯಾತ್ಮಿಕ ತೇಜಸ್ಸಿನ ಅಪ್ರತಿಮ ಮೂಲವಾದ ಅವನಿಂದ ಸಹಾಯ ಪಡೆಯಬಹುದು. ಇದರಿಂದ ಸಾಧಕನ ಆತ್ಮಾನ್ವೇಷಣೆಯ ಕಾರ್ಯ ಹಗುರವಾಗುತ್ತದೆ. ಆದ್ದರಿಂದಲೇ ಸವಿತಾರಾಧನೆಗೆ ಪ್ರಾಧಾನ್ಯತೆಯನ್ನು ಇಲ್ಲಿ ಕೊಡಲಾಗಿದೆ.

ಈ ಬಾಹ್ಯ ಸೂರ್ಯನು, ಸೌರಬ್ರಹ್ಮಾಂಡವನ್ನೆಲ್ಲಾ ಪದರಪದರವಾಗಿ

ಊಹಾತೀತ ತೇಜಸ್ಸಿನಿಂದ ಆವರಿಸಿರುವ ಮಹಾಪ್ರಬಲವಾದ ಅತ್ಯದ್ಭುತ ಪ್ರಜ್ಞೆಯ ಬರಿಯ ಸ್ಥೂಲರೂಪ ಮಾತ್ರ. ಯಾವ ಮಾನವನು ಈ ಅತ್ಯದ್ಭುತ ಪ್ರಜ್ಞೆಯ ದರ್ಶನಭಾಗ್ಯವನ್ನು ಪಡೆಯುತ್ತಾನೆಯೋ ಅವನೂ ಸಹ ಆ ಅದ್ಭುತಪ್ರಜ್ಞೆಯ ಒಂದು ಭಾಗವಾಗುತ್ತಾನೆ, ಅಲ್ಲದೆ ಪರಿಮಿತಿ ಗೊಳಪಟ್ಟ ತನ್ನ ಪ್ರಜ್ಞೆಯು ಆ ಮಹಾಪ್ರಜ್ಞೆಯ ಒಂದು ವ್ಯಕ್ತ ಅಂಶ, ಒಂದು ಮುಖ, ಆಧ್ಯಾತ್ಮಿಕ ಸೂರ್ಯನ ಒಂದು ಕಿರಣ ಎಂಬುದನ್ನು ಕಂಡು ಕೊಳ್ಳುತ್ತಾನೆ. ವಾಸ್ತವವಾಗಿ ಬಾಹ್ಯಸೂರ್ಯನ ಹಿಂದೆ ಗುಪ್ತವಾಗಿರುವ ಆಧ್ಯಾತ್ಮಿಕ ಸೂರ್ಯ ಮತ್ತು ಈ ಮಾನವ ಇಬ್ಬರೂ ಒಂದೇ. ಇದೇ ರಹಸ್ಯ ಗಳಲ್ಲಿ ರಹಸ್ಯವಾದುದು. ತನ್ನನ್ನು ತಾನು ಅರಿತಿಲ್ಲದ, ತನ್ನ ಗುರಿಯನ್ನು ಅರಿತಿಲ್ಲದ, ಮಾಯಾಬಂಧಿತ ಮಾನವನಿಂದ ಈ ರಹಸ್ಯವು ಭೇದಿಸಲ್ಪಡ ಬೇಕಾಗಿದೆ. ಈ ಆಧ್ಯಾತ್ಮಿಕ ಸೂರ್ಯನೇ 'ಸವಿತಾ.' ಘಟ್ಟಘಟ್ಟವಾಗಿ ಇವನನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವುದೇ ಗಾಯತ್ರೀ ಮಂತ್ರದ ಉದ್ದೇಶ. ಸಾಧಕನ ಆಧ್ಯಾತ್ಮಿಕ ವಿಕಾಸ, ಅವನ ಪ್ರಜ್ಞೆ ಇದೇ ರೀತಿ ನಡೆಯು ತ್ತದೆ, ಹಂತಹಂತವಾಗಿ ಊರ್ಧ್ವಲೋಕಗಳಿಗೆ ಏರುತ್ತಾ ಹೋದಂತೆ ಪರಮಾತ್ಮನ ಪ್ರಜ್ಞೆಯೊಡನೆ ಅದು ಹೆಚ್ಚುಹೆಚ್ಚಾಗಿ ಸೇರಿಕೊಳ್ಳುತ್ತದೆ. ಈ ಭರ್ಗ, ಈ ತೇಜಸ್ಸು, ಸಾಧಕನನ್ನು ಅಪರಿಮಿತವಾದ ಜ್ಞಾನಕ್ಕೆ ಕರೆ ದೊಯ್ಯುತ್ತದೆ. ಅಷ್ಟೇ ಅಲ್ಲ; ಮಹಾಮಾಯೆಯಿಂದ ಬಿಡುಗಡೆ ಹೊಂದಲು ದಾರಿದೀಪವಾಗಿದೆ.

'ಸತ್' ಮತ್ತು 'ಅಸತ್' ಇವೆರಡು ಪ್ರಧಾನ ತತ್ತ್ವಗಳು. ಒಂದೆಡೆ ದೈವೀ ಶಕ್ತಿ, ಇನ್ನೊಂದೆಡೆ ಅಸುರೀಶಕ್ತಿ. ಹೀಗೆ ಇವೆರಡೂ ಈ ಪ್ರಪಂಚದಲ್ಲಿ ಕೆಲಸ ಮಾಡುತ್ತಿರುತ್ತವೆ. ಈ ದೇವಾಸುರರ ಸಂಗ್ರಾಮವು ಸರ್ವಕಾಲವೂ ನಡೆಯುತ್ತಲೇ ಇರುತ್ತದೆ. ಇವರಲ್ಲಿ ದೇವ ಪಕ್ಷದ ಸಮರ್ಥನೆಗೆ–ಸುರಕ್ಷತೆಗೆ, ಅಸುರೀಪಕ್ಷವನ್ನು ವಿರೋಧಿಸುವುದೂ, ಅದನ್ನು ನಷ್ಟಗೊಳಿಸುವುದೂ, ಅದರಿಂದ ನಮ್ಮನ್ನು ರಕ್ಷಿಸಿಕೊಳ್ಳುವುದೂ ಅಗತ್ಯವಾಗಿವೆ. ಕೆಟ್ಟದ್ದನ್ನು ವಿರೋಧಿಸುವುದು ಒಳ್ಳೆಯದನ್ನು ಮಾಡಿದುದಕ್ಕೆ ಸಮಾನ. ನಮ್ಮ ಆರ್ಷ ಸಿದ್ಧಾಂತವು ಪುಣ್ಯಸಂಪಾದನೆಯ ಜೊತೆಯಲ್ಲಿಯೇ ಪಾಪನಾಶಕ್ಕೂ ಅಷ್ಟೇ ಮಹತ್ತ್ವ ಕೊಟ್ಟು, ನಮ್ಮನ್ನು ಆ ದಿಕ್ಕಿನಲ್ಲಿ ಅಡಿಯಿಡಲು ಪ್ರೋತ್ಸಾಹಿ ಸುತ್ತದೆ.

ಗಾಯತ್ರಿಯಲ್ಲಿ, ಆ ಈಶ್ವರನ ತೇಜಸ್ಸಿನ ಶ್ರೇಷ್ಠ ಅಂಶವನ್ನು ನಮ್ಮಲ್ಲಿ

ಧಾರಣೆ ಮಾಡಿಕೊಂಡು, ಕೆಟ್ಟ ಸಂಗತಿಗಳಿಂದ–ಪಾಪಗಳಿಂದ–ದುರ್ಬಲತೆ ಗಳಿಂದ ದೂರವಿದ್ದು, ಅವುಗಳನ್ನು ನಷ್ಟಗೊಳಿಸಲು ಯಾವಾಗಲೂ ಧರ್ಮ ಯುದ್ಧ ಮಾಡುತ್ತಿರಬೇಕೆಂಬ ಆದೇಶವು ಅಡಗಿದೆ. ಈ ಮಾರ್ಗವು ಸಾಧಕ ನನ್ನು ಸಂಸಾರ ಬಂಧನದಿಂದ ಬಿಡಿಸಿ, ಆತ್ಮನ ಒಳಗೆ ಹುದುಗಿರುವ ಸತ್ಯದ (ಈಶ್ವರನ) ಲೋಕಕ್ಕೆ ಅವನನ್ನು ಕರೆದೊಯ್ಯುತ್ತದೆ. ಇದೇ 'ಭರ್ಗ' ಶಬ್ದದ ಸಂದೇಶ.

ಭಾಸಕತ್ವವು (ಪ್ರಕಾಶಕತ್ವವು) ಮುಖ್ಯವಾಗಿ ಆತ್ಮಚೈತನ್ಯಕ್ಕೆ ಸಂಬಂಧಿ ಸುತ್ತದೆ. ಆ ಆತ್ಮನನ್ನು ಅವಲಂಬಿಸಿಯೇ ಉಳಿದುದೆಲ್ಲವೂ ಪ್ರಕಾಶಿಸು ತ್ತವೆ (ವೇದ). ಈ ಸರ್ವರಕ್ಷಕವೂ, ಸದ್ರೂಪವೂ, ಚಿದ್ರೂಪವೂ, ಆನಂದ ರೂಪವೂ, ಸ್ವೀಕಾರಯೋಗ್ಯವೂ ಆದ ಭರ್ಗಸ್ಸನ್ನು ನಮ್ಮ ಬಾಳಿನಲ್ಲಿ ಇಳಿಸಿಕೊಳ್ಳಬೇಕು ; ಧಾರಣೆ ಮಾಡಬೇಕು ; ಧ್ಯಾನ ಮಾಡಬೇಕು.

**ದೇವಸ್ಯ :** 'ದೇವ' ಶಬ್ದದ ಮಹಿಮೆ ಮತ್ತೂ ಮಹತ್ತರವಾದದ್ದು. 'ದೇವ' ಎಂದರೆ ಸ್ವಪ್ರಕಾಶದಿಂದ ಕೂಡಿರುವುದು. ಇದು 'ದಿವ' ಎಂಬ ಧಾತುವಿನಿಂದ ಹುಟ್ಟಿದೆ. 'ದಿವ' ಎಂದರೆ ಕ್ರೀಡಿಸು, ವ್ಯವಹರಿಸು, ಸ್ತುತಿಸು, ವಂದಿಸು, ಸಂತೋಷಿಸು, ಜಯಿಸು, ಕನಸುಗಾಣು, ಬೆಳಗು, ನಡೆಸು ಮುಂತಾದ ಅರ್ಥಗಳು. ದೇವಶಬ್ದದ ಷಷ್ಠೀರೂಪವೇ 'ದೇವಸ್ಯ.' ನಿತ್ಯಾ ನಂದದಲ್ಲಿ ಮಗ್ನನಾದ, ಸ್ವಪ್ರಕಾಶದಿಂದ ಬೆಳಗುವ, ಇಲ್ಲವೇ ಆತ್ಮಾನಂದ ದಿಂದ ಕ್ರೀಡಿಸುವ, ತಾನು ಪ್ರಕಾಶದಿಂದ ಬೆಳಗುವುದಲ್ಲದೆ ಇತರ ವಸ್ತು ಗಳನ್ನೂ ತನ್ನ ಪ್ರಭೆಯಿಂದ ಬೆಳಗಿಸಬಲ್ಲ, ಸಮಸ್ತ ಜಗತ್ತನ್ನು ತನ್ನ ಕಾಂತಿಯಿಂದ ಕಂಗೊಳಿಸುವಂತೆ ಮಾಡುವುದೇ 'ದೇವಸ್ಯ.' ದಿವ್ಯವಾದು ದನ್ನು (ಜ್ಞಾನರೂಪವನ್ನು), ಸಂತೋಷಪ್ರದವಾದುದನ್ನು, ಧರ್ಮಾ ಧರ್ಮ ಸ್ವರೂಪವನ್ನು ತಿಳಿದಿರುವುದನ್ನು, ತನ್ನ ಮಹಿಮೆಯಿಂದ ಪ್ರಕಾಶ ಮಾನವಾದುದನ್ನು 'ದೇವ' ಎನ್ನುವರು ಎಂದು ಸಂಧ್ಯಾಭಾಷ್ಯದಲ್ಲಿ ಹೇಳಿದೆ. ದೇವ ಎಂದರೆ ದಿವ್ಯತೆ ; ಧ್ಯಾನ ಮಾಡುವವರ ಚಿತ್ತಭಿತ್ತಿಯಲ್ಲಿ ಕ್ರೀಡಿಸುವವನನ್ನು ದೇವ ಎನ್ನುವರು. ಜೀವ ಚೈತನ್ಯನೂ, ಪ್ರಸನ್ನತೆಯ ಸ್ವಭಾವದವನೂ, ತೇಜಸ್ವಿಯೂ ಆಗುವ ಸ್ಥಿತಿಯನ್ನು ಪ್ರಕಾಶಿಸುತ್ತ ಇರುತ್ತಾನಾದ್ದರಿಂದ 'ದೇವಸ್ಯ' ಎಂದು ಕರೆಯಲ್ಪಡುವನು. ಸೃಷ್ಟಿ ಮುಂತಾದುವುಗಳಿಂದ ಕ್ರೀಡಿಸುವವನು ಎಂದೂ ಅರ್ಥ. ಇವನು ದಿವಿಯಲ್ಲಿ ಬೆಳಗುವುದರಿಂದ, ಕ್ರೀಡಿಸುವುದರಿಂದ, ಬೆಳಗಿಸುವುದರಿಂದ ಮತ್ತೂ ಪ್ರಜ್ವಲಿ

ಸುವುದರಿಂದ ಎಲ್ಲಾ ದೇವತೆಗಳೂ ಇವನನ್ನು 'ದೇವ' ಎಂದು ಹೊಗಳು ತ್ತಾರೆ. ಆತ್ಮನಲ್ಲಿ ಪ್ರಕಾಶವನ್ನುಂಟುಮಾಡುವವನೂ ಮತ್ತು ಎಲ್ಲಾ ಸುಖ ದಾತನೂ ಹಾಗೂ ಪೂರ್ಣ ಆನಂದದಾತನೂ, ವರೇಣ್ಯನೂ, ಭಗವಾನನೂ ಆದ ಪರಮಾತ್ಮನೇ ಎಲ್ಲಾ ದೇವತೆಗಳ ದೇವನು. ವಿದ್ವಾಂಸರ ವಿದ್ವಾಂಸನೂ, ದಾನಿಗಳ ದಾನಿಯೂ ಆಗಿದ್ದಾನೆ. ಯಾವನು ಚರಾಚರ ಜಗತ್ತಿನಲ್ಲಿ ಪ್ರಕಾಶವನ್ನುಂಟುಮಾಡುವನೋ ಅವನೇ ದೇವ ಅಥವಾ ಪ್ರಕಾಶ ಸ್ವರೂಪ ನಾದ ಪರಮಾತ್ಮ. ಪ್ರಕಾಶನಾನನು ಅಥವಾ ದೇವತೆಗಳೊಡಗೂಡಿ ಕ್ರೀಡಾದಿ ಗುಣವಿಶಿಷ್ಟನು ಎಂದರ್ಥವೂ ಈ 'ದೇವಸ್ಯ' ಪದಕ್ಕೆ ಬರುತ್ತದೆ. ಕ್ರೀಡಾ, ಗೆಲ್ಲುವ ಇಚ್ಛೆ, ವ್ಯವಹಾರ, ಕಾಂತಿ, ಸ್ತುತಿ, ಮೋದ, ಮದ, ಸ್ವಪ್ನ, ದ್ಯುತಿ, ಗತಿ ಇತ್ಯಾದಿ ಅರ್ಥಗಳಲ್ಲಿ 'ಪಚಾದ್ಯಚ' ಈ ಸೂತ್ರ ದಿಂದ 'ಅಚ' ಪ್ರತ್ಯಯವಾಗಿ 'ದೇವ'ವಾಗುತ್ತದೆ. (ಶ್ವೇತಾಶ್ವೇತರ ಉಪನಿಷತ್) ಇವೆಲ್ಲವುಗಳ ಅರ್ಥದಲ್ಲೂ 'ದೇವ' ಎಂದರೆ ಸರ್ವೋತ್ತಮನಾದ ಪರಮಾತ್ಮನೆಂದೇ ತಿಳಿಯಬೇಕಾದುದು. ಯಾವುದು ಚರಾಚರ ಜಗತ್ತನ್ನು ಪ್ರಕಾಶಗೊಳಿಸುತ್ತದೆಯೋ ಅಥವಾ ಪ್ರಕಾಶರೂಪವಾಗಿಸಿದೆಯೋ ಅದು ದೇವ.' 'ದೇವ' ಶಬ್ದವು 'ದಿವ್ಯತೇ' ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. ಈಶ್ವರನ ಶಕ್ತಿಯನ್ನು 'ದೇವ' ಎಂದೆನ್ನುತ್ತಾರೆ. ನಿರುಕ್ತಿಯಲ್ಲಿ ದೇವ ಶಬ್ದದ ಅರ್ಥ ಹೀಗಿದೆ—ಕೊಡುವವನಾದ್ದರಿಂದ ದೇವ, ಪ್ರಕಾಶಪಥದಲ್ಲಿರು ವವನಾದ್ದರಿಂದ (ದೀಪನ, ದ್ಯುಸ್ಥಾನ) ದೇವ, ಪ್ರಕಾಶಗೊಳಿಸುವವನಾದ್ದ ರಿಂದ (ದ್ಯೋತಕ) ದೇವನೆನಿಸುತ್ತಾನೆ. ಅವನೇ ಭರ್ಗಶಕ್ತಿಯುಳ್ಳವನೂ, ಸವಿತೃವೂ, ವರೇಣ್ಯನೂ ಆಗಿದ್ದಾನೆ.

ದೇವತೆಗಳು ದಿವ್ಯರಾಗಿರುತ್ತಾರೆ. ಯಾರ ಭಾವನೆಗಳು, ಇಚ್ಛೆಗಳು, ಆಕಾಂಕ್ಷೆಗಳು, ದಿವ್ಯವಾಗಿರುತ್ತವೆಯೋ ಅವರು ದೇವತೆಗಳೇ ಸರಿ. ದೇವತೆ ಗಳ ಮುಖ್ಯ ಲಕ್ಷಣಗಳು ಈ ರೀತಿ ಇವೆ. ಅವರು ಜ್ಞಾನಿಗಳು, ಪ್ರಕಾಶ ವುಳ್ಳವರು ಮತ್ತು ಧ್ಯಾನಿಸುವವರ ಮನಸ್ಸಿನಲ್ಲಿ ಕ್ರೀಡಿಸುವವರು. ಶ್ರೀಗಾಯತ್ರೀ ದೇವಿಗೆ ಈ ಎಲ್ಲಾ ಲಕ್ಷಣಗಳೂ ಇವೆ. ಆದ್ದರಿಂದಲೇ ಅವಳು ಬ್ರಹ್ಮನಿಂದ ಕೂಡ ಪೂಜಿಸಲ್ಪಡುವ ಅತಿ ಶ್ರೇಷ್ಠ ದೇವತೆ. ದೇವತೆಗಳ ಜೀವನ ಜ್ಯೋತಿಯು ಈ ಲೋಕಕ್ಕಿಂತ ಮೇಲ್ಮಟ್ಟದಲ್ಲಿರುವ ಕಾರಣ ಅದು ಅಲೌಕಿಕವೆಂದು ಕರೆಯಲ್ಪಡುತ್ತವೆ. ಈ ಕಾರಣದಿಂದಲೇ ದೇವಲೋಕವು ಮನುಷ್ಯ ಲೋಕಕ್ಕಿಂತ ಮೇಲ್ಮಟ್ಟದ್ದೆಂದು ಪರಿಗಣಿಸಲ್ಪಟ್ಟಿದೆ.

ನಮ್ಮ ಭಾವನೆಗಳು, ಇಚ್ಛೆಗಳು, ಆಕಾಂಕ್ಷೆಗಳು ದಿವ್ಯವಾಗಿರಬೇಕೆಂಬ ಗುರಿ ಹೊಂದಿರಬೇಕೆಂದು ಪರಮಾತ್ಮನ ದೇವಸ್ವರೂಪವು ಸ್ಮರಣೆ ಮಾಡಲ್ಪಟ್ಟಿದೆ. ಸಾಧಕನು ದಿವ್ಯನಾಗಲೀ ಆತನ ಅಂತಃಕರಣವು ದಿವ್ಯ ತತ್ತ್ವಗಳಿಂದ–ದಿವ್ಯಸಿದ್ಧಾಂತಗಳಿಂದ–ದಿವ್ಯವಿಶ್ವಾಸಗಳಿಂದ ಉತ್ತಮ ಆಚಾರ-ವಿಚಾರಗಳಿಂದ ತುಂಬಿಹೋಗಲಿ ; ಮರಣಾನಂತರ ಯಾವ ದಿವ್ಯಲೋಕ ಪ್ರಾಪ್ತಿಗಾಗಿ ಜನರು ಪರಿತಪಿಸುವರೋ ಆ ದಿವ್ಯಲೋಕವಾಸವು ಇಹಲೋಕದಲ್ಲಿಯೇ ಅವರಿಗೆ ಸಿಗಲಿ ಎಂಬ ಉದ್ದೇಶದಿಂದ ಗಾಯತ್ರೀ ಮಂತ್ರದಲ್ಲಿ ಪರಮಾತ್ಮನ ದೇವಸ್ವರೂಪದ ಸ್ಮರಣೆ ಮಾಡಲ್ಪಟ್ಟಿದೆ.

ಇಂತಹ ದೇವನನ್ನು ಧ್ಯಾನಿಸುವುದರಿಂದ ಕಾರ್ಯಸಾಫಲ್ಯ, ಜಯ, ತೇಜಸ್ಸು, ಜ್ಞಾನ, ಆನಂದ, ಕ್ರಿಯಾಶೀಲತೆ ಇತ್ಯಾದಿಗಳನ್ನು ಪರಮಾತ್ಮನು ಸಾಧಕನ ಯೋಗ್ಯತಾನುಸಾರ ದಯಪಾಲಿಸುತ್ತಾನೆ.

**ಧೀಮಹಿ :** ಸವಿತಾ, ವರೇಣ್ಯ, ಭರ್ಗಃ ಮತ್ತು ದೇವಸ್ಯ ಈ ನಾಲ್ಕು ಶಬ್ದಗಳ ನಂತರ 'ಧೀಮಹಿ' ಎಂಬ ಶಬ್ದ ಬರುತ್ತದೆ. ಧ್ಯಾನ ಮಾಡುವುದು ಗಾಯತ್ರೀ ಜಪದ ಪ್ರಧಾನ ಕ್ರಿಯೆ. 'ಧೀಮಹಿ' ಎಂಬುದರ ಅರ್ಥ— ಸ್ಥಾಪಿಸು, ನೆಲೆಗೊಳಿಸು, ಧರಿಸು, ಆಲೋಚಿಸು, ಚಿಂತನಮಾಡು, ಧ್ಯಾನಿಸು. ನೆನಸು, ಇಡು, ಬುದ್ಧಿಯಿಂದ ವಿವೇಚಿಸು— ಹೀಗೆ ಹಲವಾರು ಅರ್ಥಗಳಿವೆ. 'ಧ್ಯೈ-ಚಿಂತಯಾಂ' ಎಂಬ ಧಾತುವಿನಿಂದ ರೂಪಿತವಾದ ಸಕರ್ಮಕ ಕ್ರಿಯಾವಾಚಕ ಶಬ್ದವಿದು. ಇದೊಂದು ಕರ್ಮಾಪೇಕ್ಷಕ್ರಿಯೆ. ಇದು ಆ ಭರ್ಗಸ್ಸನ್ನೇ ತನ್ನ ಕರ್ಮವಾಗಿಟ್ಟುಕೊಂಡಿದೆ. ಆ ವರ್ಚಸ್ಸನ್ನು ತನ್ನ ಆತ್ಮದಲ್ಲಿ ತುಂಬಿಕೊಳ್ಳುತ್ತಾ, ಅದನ್ನು ಸಂಪೂರ್ಣ ಜೀವನಕ್ಕೆ ಅನ್ವಯಿಸಿಕೊಂಡು, ಪೂರ್ಣತಃ ಆತ್ಮವಿಕಾಸ ಮಾಡಿಕೊಳ್ಳಬೇಕು. ಇದು ಉತ್ತಮ ಪುರುಷ ಬಹುವಚನದಲ್ಲಿ ಉಪಯೋಗಿಸಲ್ಪಟ್ಟಿದೆ—ವೈದಿಕ ವಾಙ್ಮಯ ವಿನಹ ಇತರ ಕಡೆಗಳಲ್ಲಿ 'ಧ್ಯಾಯೋಮಹಿ' ಎಂಬ ರೂಪವನ್ನು ಪ್ರಯೋಗಿಸುತ್ತಾರೆ. 'ಧೀಮಹಿ' ಪದಕ್ಕೆ 'ನಾವು ಧ್ಯಾನಿಸುತ್ತೇವೆ' ಎಂದೂ 'ನಾವು ಧ್ಯಾನಿಸುವಂತಾಗಲಿ' ಎಂದೂ ಆಗುವುದು. ಇದೊಂದು ಸಂಕಲ್ಪ; ಅವಿಚ್ಛಿನ್ನ ಹಾಗೂ ನಿರಂತರ ಸಂಕಲ್ಪ. 'ನಾವು ಧ್ಯಾನಿಸುತ್ತೇವೆ' ಎಂದಾಗ ಈ ವಾಕ್ಯವು ಒಂದು ಸಂಕಲ್ಪ ಅಥವಾ ನಿರ್ಧಾರದ ಪ್ರತಿಪಾದನೆಯಾಗುತ್ತದೆ. 'ನಾವು ಧ್ಯಾನಿಸುವಂತಾಗಲಿ' ಎಂದಾಗ ಅದು ಪ್ರಾರ್ಥನೆಯಾಗು

ತ್ತದೆ. ಇಲ್ಲಿ ಮೊದಲನೇ ಅರ್ಥವೇ ಹೆಚ್ಚು ಸಮಂಜಸವಾಗಿ ತೋರುತ್ತದೆ.

ಈ ಪದವು ಬಹುವಚನದಲ್ಲಿದೆ. ಕಾರಣ—ಶ್ರೀಗಾಯತ್ರೀ ಮಂತ್ರವು ಪ್ರಾರ್ಥನೆಯ ರೂಪದಲ್ಲಿರುವುದರಿಂದ, ಅದರಲ್ಲಿರುವ ತತ್ತ್ವದ ಪ್ರಕಾರ ಅದು ಎಲ್ಲಾ ಮಾನವರ ಪರವಾಗಿಯೇ ಇರಬೇಕಾಗುತ್ತದೆ. ಪ್ರಾರ್ಥನೆಯ ವರವಾಗಿ ಹರಿದುಬರುವ ಆಧ್ಯಾತ್ಮಿಕ ಶಕ್ತಿಗಳು ಸಾಮೂಹಿಕವಾಗಿ ಮಾನವ ಜನಾಂಗಕ್ಕೆಲ್ಲಾ ಪ್ರಯೋಜನಕಾರಿಯಾಗಿರಬೇಕು. ಇಲ್ಲಿ ಲವಲೇಶದಷ್ಟು ಕೂಡ ಸ್ವಾರ್ಥೋದ್ದೇಶ ಇಲ್ಲವಾದ್ದರಿಂದ ಈ ಮಂತ್ರಕ್ಕೆ ಅದ್ಭುತವಾದ ಆಧ್ಯಾತ್ಮಿಕ ಶಕ್ತಿಯಿದೆ. ಪ್ರಾರ್ಥನೆ ಅಥವಾ ಪೂಜೆ ಸ್ವಾರ್ಥಭಾವನೆಯಿಂದ ಎಷ್ಟರಮಟ್ಟಿಗೆ ದೂರವಾಗಿರುತ್ತದೆಯೋ, ಅಷ್ಟರಮಟ್ಟಿಗೆ ಅದರ ಸಾಮರ್ಥ್ಯ ಹೆಚ್ಚುತ್ತದೆ. ನಮ್ಮ ಸಂಕಲ್ಪಗಳ ಬುಡದಲ್ಲಿ ಅಹಂಕಾರವಿದ್ದಲ್ಲಿ ಆಧ್ಯಾತ್ಮಿಕ ಶಕ್ತಿಗಳು ಕೆಲಸ ಮಾಡುವುದಿಲ್ಲ.

ಧ್ಯಾನಕ್ಕೆ ವಿಷಯ ಬೇಕು. ನಿರ್ಗುಣವಸ್ತು ವಿಷಯವಾಗಲಾರದು. ಆದ್ದರಿಂದ ಸಗುಣೋಪಾಸನೆಯೇ ಧ್ಯಾನ. ಆ ವಸ್ತು ಗುಣ ಸಂಪೂರ್ಣತೆ ಯನ್ನು ಪಡೆದಿರಬೇಕು.

ಧ್ಯಾನಮಾಡುವವರಿಗೆ ಧ್ಯೇಯ ವಸ್ತುವಿನ ಅಭಿನ್ನ ಸಂಬಂಧವಾಗು ವುದು ಧ್ಯಾನವೆಂದು ಹೇಳಲ್ಪಡುವುದು. ಯಾವ ವಸ್ತುವನ್ನು ಕುರಿತು ನಾವು ಧ್ಯಾನ ಮಾಡುತ್ತೇವೆಯೋ ಅದರಲ್ಲಿ ಮನಸ್ಸು ನೆಟ್ಟುಹೋಗುತ್ತದೆ. ಹಾಗೆ ಮನಸ್ಸು ನೆಟ್ಟುಹೋಗುವುದರಿಂದ ಅದರ ವಿಚಾರವಾಗಿ ರುಚಿ ಉತ್ಪನ್ನವಾಗುತ್ತದೆ. ಈ ಆಕಾಂಕ್ಷೆಯಿಂದ ಪ್ರಯತ್ನ ಪ್ರಾರಂಭವಾಗುತ್ತದೆ. ಈ ಪ್ರಯತ್ನವು ಅಭೀಷ್ಟವಸ್ತುವಿನ ಪ್ರಾಪ್ತಿಯನ್ನುಂಟುಮಾಡುತ್ತದೆ. ಧ್ಯಾನವೇ ಬೀಜ; ಸಫಲತೆಯೇ ಅದರ ಫಲ. ಯಾವುದೇ ಕೆಲಸವಾಗಲಿ ಅದು ಮೊದಲು ಕಲ್ಪನೆಯಲ್ಲಿ ತೋರುವುದು; ಮುಂದೆ ಯೋಜನೆಯ ರೂಪವನ್ನು ತಾಳುವುದು; ಅನಂತರ ಕ್ರಿಯಾತ್ಮಕ ರೂಪ ಪಡೆಯುವುದು. ಧ್ಯಾನದಲ್ಲಿ ಈ ಮನೋವೈಜ್ಞಾನಿಕ ಪ್ರತಿಕ್ರಿಯೆ ಕೆಲಸ ಮಾಡುವುದು. ಗಾಯತ್ರೀ ಮಂತ್ರದಲ್ಲಿ ಧ್ಯೇಯ ವಿಷಯ ಪರಮಾತ್ಮನ ತೇಜೋರೂಪ. 'ಧೀಮಹಿ' ಶಬ್ದದಿಂದ ಆ ತೇಜೋಬಿಂದುವನ್ನು ಧ್ಯಾನಮಾಡಬೇಕೆಂಬ ಸಂಕೇತವಿದೆ. ನಾವು ಹೊರಗೆ ನೋಡುವ ತೇಜಸ್ಸು ಸವಿತೃ ಸ್ವರೂಪನಾದ ಸೂರ್ಯನದು. ಆ ಸೂರ್ಯನ ರೂಪವು ನಮ್ಮಲ್ಲಿಯೂ ಇರುವುದರಿಂದ ನಮಗೆ ಅಂತರ್ಮುಖದಲ್ಲಿ ಗೋಚರವಾಗುವುದು ಸೂರ್ಯನ ತೇಜಸ್ಸೇ ಆಗಿದೆ.

ಆ ತೇಜಸ್ಸನ್ನನುಸರಿಸಿ ಧ್ಯಾನಿಸುತ್ತ ಆ ಈಶ್ವರನೇ ನಾನೆಂಬ ಶುದ್ಧ ಜ್ಞಾನವು ಅಂತರ್ಮುಖದಲ್ಲಿ ಬಿಂಬರೂಪವಾದ ಸೂರ್ಯತೇಜಸ್ಸನ್ನು ಧ್ಯಾನಮಾಡು ವುದರ ಮೂಲಕ ಅವಿದ್ಯಾ ಬಂಧನವು ಪರಿಹಾರವಾಗಿ ಪ್ರತಿಬಿಂಬ ಚೈತನ್ಯ ವನ್ನು ಹೊಂದುವುದೇ ಇದರ ಸೂಚನೆ. ಪರಮಾತ್ಮನ ಪ್ರಕಾಶವು ಹರಡಿ ಹೋಗಿರುವ ಚಿತ್ತದ ವೃತ್ತಿಗಳು ಒಂದೆಡೆ ಕೇಂದ್ರೀಕೃತವಾಗುವಂತೆ ಮಾಡು ವುದು. ಇದೇ ಧ್ಯಾನದಿಂದ ಆಗುವ ಎಲ್ಲಕ್ಕೂ ದೊಡ್ಡ ಲಾಭ. ಈ ಅಭ್ಯಾಸವೇ ಯೋಗ ಸಾಧನ. ಯಾವುದಾದರೊಂದು ತಥ್ಯದ ಬಗ್ಗೆ ಚಿತ್ತವೃತ್ತಿಗಳನ್ನು ಏಕಾಗ್ರಗೊಳಿಸುವುದೇ ಧ್ಯಾನ. 'ತತ್-ಧೀಮಹಿ'-ಅವನನ್ನು ನಮ್ಮಲ್ಲಿ ಧರಿಸಿಕೊಳ್ಳೋಣ, ಧ್ಯಾನಿಸೋಣ, ಚಿಂತನೆ ಮಾಡೋಣ, ನಿಧಿಧ್ಯಾಸನ ಮಾಡೋಣ ಎಂದರ್ಥವಾಗುತ್ತದೆ. ಸಾಂಖ್ಯಸೂತ್ರ(ಅ-೩-೩೦)ದಲ್ಲಿ ಹೀಗೆ ಹೇಳಿದೆ—ಯಾವುದೇ ವಸ್ತುವಿನ ಅನುರಾಗದಿಂದ ಕೂಡಿದುದರ ಹೆಸರು ಧ್ಯಾನವೆಂದಾಗುವುದು. ಮನಸ್ಸು ನಿರ್ವಿಷಯಕವಾಗಿರುವುದೇ ಧ್ಯಾನ. ಯೋಗ ಶಾಸ್ತ್ರದಲ್ಲಿ-ವ್ಯಕ್ತಿಯು ಅದರಲ್ಲಿ (ಯಾವುದರಲ್ಲಿ ಧಾರಣೆ ಮಾಡಲಾಗಿದೆಯೋ ಅದು) ಒಂದೇ ರೀತಿ ಇರುವುದೇ ಧ್ಯಾನ ಎಂದು ಹೇಳಿದೆ. ಚಿತ್ತವೃತ್ತಿಗಳ ನಿರೋಧವೇ ಯೋಗವೆಂದು ಪತಂಜಲಿಗಳು ಹೇಳಿ ದ್ದಾರೆ. ಧ್ಯಾನದ ಮೂಲಕ ಈ ಸಾಧನೆಯಾಗುತ್ತದೆ ; ಏಕಾಗ್ರತೆ ಬರು ತ್ತದೆ ; ಚಿತ್ತವು ಸ್ಥಿರವಾಗುತ್ತದೆ ಮತ್ತು ಮನಸ್ಸಿನ ಮೇಲೆ ನಿಯಂತ್ರಣವು ಸ್ಥಾಪಿಸಲ್ಪಡುತ್ತದೆ. ಯೋಗದ ಮೂಲಕ ಚಿತ್ತವೃತ್ತಿಗಳನ್ನು ನಿರೋಧಿಸು ವುದರ ಹೆಸರು 'ಧೀಮಹಿ.' ಆ ಯೋಗಸ್ಥಿತಿಗೆ ತಲಪುವ ಆದೇಶವನ್ನೂ ಕೊಡುತ್ತದೆ ; ಜೊತೆಗೆ ಸಾಧನೆಯನ್ನೂ ತಿಳಿಸುತ್ತದೆ.

ಧ್ಯಾನದಿಂದಾಗುವ ಎರಡನೆಯ ಲಾಭವು ಯಾವುದೆಂದರೆ—ನಾವು ಯಾವ ವಸ್ತುವನ್ನು ಕುರಿತು ಧ್ಯಾನ ಮಾಡುತ್ತೇವೆಯೋ ಅದು ಕ್ರಮ ಕ್ರಮವಾಗಿ ಮನಸ್ಸಿನ ರುಚಿಯು ಪ್ರಧಾನವಿಷಯವಾಗುತ್ತದೆ. ನೋಡಿದ—ಕೇಳಿದ ವಿಷಯಗಳನ್ನು ಪದೇಪದೇ ಚಿಂತನ ಮಾಡುವುದು ಚಿತ್ತದ ಸ್ವಭಾವ. ಹೀಗಿರುವಾಗ ಯಾವ ವಿಷಯದ ಚಿಂತನೆಯಾಗುವುದೋ ಆ ವಿಷಯದತ್ತ ಚಿತ್ತದ ಎಳೆತ ಉಂಟಾಗುತ್ತದೆ. ಯಾರು ಧರ್ಮದ-ಈಶ್ವರನ ಚಿಂತನ ಮಾಡುತ್ತಾರೋ ಅವರು ಕಾಲಾನಂತರ ಸಾಧು ಪ್ರವೃತ್ತಿಯುವ ರಾಗುತ್ತಾರೆ. ಗಾಯತ್ರೀ ಮಂತ್ರದ ಪೂರ್ವಾರ್ಧದಲ್ಲಿ ಆ ಸವಿತೃ, ವರೇಣ್ಯ, ಭರ್ಗ ಮತ್ತು ದಿವ್ಯಶಕ್ತಿಗಳ ಸ್ವರೂಪನಾದ ಪರಮಾತ್ಮನ ಧ್ಯಾನ ಮಾಡುವ

ಆದೇಶವಿದೆ. ಈಶ್ವರನ ಈ ಶಕ್ತಿಗಳನ್ನು ವಿಶೇಷರೂಪದಿಂದ ನಮ್ಮೆಡೆಗೆ ಆಕರ್ಷಿಸುವುದೇ ಇದರ ಉದ್ದೇಶ. ಈ ಶಕ್ತಿಗಳನ್ನು ಧ್ಯಾನ ಮಾಡುವುದ ರಿಂದ ನಾವು ನಮ್ಮಲ್ಲಿ ತೇಜಸ್ಸು, ಶ್ರೇಷ್ಠತೆ, ದಯೆ ಮತ್ತು ದಿವ್ಯತೆ ಗಳನ್ನು ಅಧಿಕಾಧಿಕವಾಗಿ ಧಾರಣೆ ಮಾಡುತ್ತಾ ಹೋಗಿ ಕಡೆಗೆ 'ಸತ್ಯ-ಶಿವ-ಸುಂದರ'ವಾದ ಶಕ್ತಿಯಿಂದ ನಮ್ಮನ್ನು ಓತಪ್ರೋತಗೊಳಿಸಿಕೊಳ್ಳು ತ್ತೇವೆ. ಮನಸ್ಸನ್ನು ನಾವು ಯಾವ ಕಾರ್ಯದಲ್ಲಿ ತೊಡಗುವಂತೆ ಮಾಡುತ್ತೇವೆಯೋ ಅದೇ ಕಡೆಗೆ ಶರೀರದ ಇತರ ಭಾಗಗಳಿಗೂ ಮುಂದು ವರಿಯುತ್ತವೆ. ಯಾವ ತಥ್ಯಗಳನ್ನು ಕುರಿತು ನಾವು ಧ್ಯಾನ ಮಾಡು ತ್ತೇವೆಯೋ ಅವುಗಳು ನಮ್ಮಲ್ಲಿ ಪ್ರಕಟಗೊಳ್ಳುತ್ತವೆ.

'ಧೀಮಹಿ' ಶಬ್ದದಿಂದ ತೇಜೋಬಿಂದುವನ್ನು ಧ್ಯಾನಮಾಡಬೇಕೆಂಬ ಸಂಕೇತವಿದೆ. ಭಾರದ್ವಾಜಗೃಹ್ಯ ಪರಿಶಿಷ್ಟದಲ್ಲಿ ನಿಗಮ, ನಿರುಕ್ತ, ವಿಧಾನ ರೂಪಿ ನೇತ್ರಗಳಿಂದ ಆ ಸ್ವರೂಪದ ಚಿಂತನ ಮಾಡುತ್ತೇನೆ ;ಧ್ಯಾನ ಮಾಡು ತ್ತೇನೆ ಎಂದು ಹೇಳಲಾಗಿದೆ. ನಾವು ಹೊರಗೆ ನೋಡುವ ಸೂರ್ಯನ ತೇಜಸ್ಸು ನಮ್ಮಲ್ಲಿ ಯೂ ಇರುವುದರಿಂದ ಆ ತೇಜಸ್ಸನ್ನನುಸರಿಸಿ ಧ್ಯಾನಿಸು ವುದು ಆ ಈಶ್ವರನನ್ನೇ.

ಪರಮಾತ್ಮನ ದಿವ್ಯಸ್ವರೂಪವನ್ನು ಧರಿಸಿಕೊಳ್ಳೋಣ, ಧಾರಣೆ ಮಾಡೋಣ ಎಂಬುದು ಇದರ ತತ್ತ್ವ. 'ತಾನೇ ಬ್ರಹ್ಮ'ನೆಂದು ತಿಳಿಯುವ ಸಾಕ್ಷಾತ್ಕಾರವೇ ಇದರ ಗುರಿ. ತೇಜೋರೂಪವಾದ, ತೇಜೋಬಿಂದುವನ್ನು ಧರಿಸಿ ಜೀವಚೈತನ್ಯನು ಧ್ಯಾನದ ತಾದಾತ್ಮ್ಯದಿಂದ ಬುದ್ಧಿ ಪ್ರವೃತ್ತಿ ಯೊಡನೆ ಇರುವನೆಂಬುದು ಇದರ ಭಾವವು.

'ಧ್ಯಾನಿಸೋಣ'-ಎಂಬುದು ಜ್ಞಾನದ, 'ಧರಿಸೋಣ'-ಎಂಬುದು ಕರ್ಮದ, 'ನೆಲೆಗೊಳಿಸೋಣ'-ಎಂಬುದು ಉಪಾಸನೆಯು ಸೂಚಕವಾಗಿದೆ. ಧ್ಯಾನಿಸಿ-ತಿಳಿಯಬೇಕು, ಧರಿಸಿ-ಪಡೆಯಬೇಕು, ನೆಲೆಗೊಳಿಸಿ-ರೂಢಿಸಿ ಕೊಳ್ಳಬೇಕು. ಪರಬ್ರಹ್ಮದ, ಪಾಪ, ತಾಪ ನಿವಾರಕವಾದ, ದೈವಿಕ ವರ್ಚಸ್ಸಿನ ಧ್ಯಾನ ಮಾಡುತ್ತಾ, ಆ ವರ್ಚಸ್ಸನ್ನು ತನ್ನ ಆತ್ಮದಲ್ಲಿ ತುಂಬಿ ಕೊಳ್ಳುತ್ತಾ, ಅದನ್ನು ಸಂಪೂರ್ಣ ಜೀವನಕ್ಕೆ ಅನ್ವಯಿಸಿಕೊಂಡು ಪೂರ್ಣತಃ ಆತ್ಮವಿಕಾಸ ಮಾಡಿಕೊಳ್ಳಬೇಕು. ಪರಮಾತ್ಮನ ದಿವ್ಯಸ್ವರೂಪ

ವನ್ನು ಧರಿಸಿಕೊಳ್ಳೋಣ, ಧಾರಣೆ ಮಾಡೋಣ—ಎಂಬುದು ಇದರ ತತ್ತ್ವ.

'ನಮ್ಮ ಬುದ್ಧಿಗಳಿಗೂ ಕರ್ಮಗಳಿಗೂ ಪ್ರೇರಣೆಯೀಯುವವನನ್ನು ಧ್ಯಾನಿಸೋಣ—ಇದು ಭಕ್ತಿಯೋಗ. ತಮ್ಮಲ್ಲಿ ಆತನನ್ನು ನಿರಂತರ ಧರಿಸಿ ಕೊಂಡಿರುವವರಿಗೆ ಈ ಪ್ರೇರಣೆಯಾಗುತ್ತದೆ. ಇದು ಕರ್ಮಯೋಗ. ಈ ರೀತಿ 'ಧೀಮಹಿ' ಎಂಬಲ್ಲಿ ಕರ್ಮಯೋಗದ ಮತ್ತು 'ದಿಯೋ....ಯಾತ್' ಎಂಬಲ್ಲಿ ಸಮರ್ಪಣಾತ್ಮಕ ಭಕ್ತಿಯೋಗದ ಅದ್ಭುತ ಸಮನ್ವಯವಿದೆ. ಆ ನಿರಂತರ ಏಕಾಗ್ರಚಿತ್ತದ ಧ್ಯಾನವು ಪೂರ್ಣ ಪರಿಪಕ್ವವಾದಾಗ ಅದನ್ನು ಸಮಾಧಿಸ್ಥಿತಿ ಎನ್ನುತ್ತಾರೆ. ಈ 'ಧೀಮಹಿ' ಶಬ್ದದಿಂದ ಸಾಧಕನು ಅಷ್ಟಾಂಗ ಯೋಗದ ಏಳನೇ ಮೆಟ್ಟಲನ್ನು ತಲುಪಲು ಪೂರ್ಣಸಿದ್ಧತೆಯಾಗಿದೆ. ಇದು ಆ ನಿರೋಧಿಸುವ ಸ್ಥಿತಿ ತಲುಪುವ ಆದೇಶವನ್ನೂ ಕೊಡುತ್ತದೆ, ಜೊತೆಗೆ ಸಾಧನೆಯನ್ನು ತಿಳಿಸುತ್ತದೆ. ಈ ಧ್ಯಾನವು ಮನ-ಬುದ್ಧಿ-ಚಿತ್ತಗಳನ್ನು ನಿರ್ಮಲಗೊಳಿಸುವ ಒಂದು ಅಮೋಘ ಸಾಧನ.

'ಧೀಮಹಿ' ಎಂಬ ವೈದಿಕ ಶಬ್ದಪ್ರಯೋಗದಿಂದ ಶ್ರೀಗಾಯತ್ರೀ ಪ್ರತಿಪಾದ್ಯ ನಾರಾಯಣನು ಸಾಕ್ಷಾತ್ ಪರಬ್ರಹ್ಮನೇ-ಸೂರ್ಯನಲ್ಲ. ಏಕೆಂದರೆ ಪರಮಾತ್ಮನ ಚಕ್ಷಸ್ಸಿನಿಂದ ಸೂರ್ಯನು ಜನಿಸಿದನೆಂಬುದು ವೇದವಾಕ್ಯ.

'ಧೀಮಹಿ' ಶಬ್ದದ ಆದೇಶವೇನೆಂದರೆ, ನಾವು ನಮ್ಮ ಧ್ಯಾನಕ್ಷೇತ್ರದಲ್ಲಿ ಆತ್ಮಕಲ್ಯಾಣಕ್ಕೆ ಶ್ರೇಯಸ್ಕರವಾದ ವಿಚಾರಗಳನ್ನು ಪ್ರತಿಷ್ಠೆಗೊಳಿಸಬೇಕು. ಧ್ಯಾನ, ವಿಚಾರ, ಭಾಗ್ಯ, ಸಂಕಲ್ಪ, ಸ್ಮೃತಿ, ಕಲ್ಪನಾ, ಇಚ್ಛಾ, ಆಕಾಂಕ್ಷಾ ಇವುಗಳ ಅಂತರ್ಭೂಮಿಯಲ್ಲಿ ಯಾವ ರೀತಿಯ ಆದರ್ಶ ಸ್ಥಾಪಿಸಲ್ಪಡು ತ್ತದೆಯೋ, ಯಾವ ದಿಕ್ಕಿನಲ್ಲಿ ಅವುಗಳ ಗತಿ ವಿಧಿಯುಂಟೋ, ಅವುಗಳ ಆಧಾರದ ಮೇಲೆ ಜೀವನದ ಕಾರ್ಯ ಪ್ರಣಾಲಿ ತಯಾರಾಗುವುದು ಮತ್ತು ಅದೇ ರೀತಿಯ ಪರಿಣಾಮಗಳು ಪ್ರಾಪ್ತಿಯಾಗುವುವು. ಇದಕ್ಕೋಸ್ಕರ ಎಲ್ಲದಕ್ಕಿಂತ ಹೆಚ್ಚು ಜಾಗರೂಕತೆ, ಹೆಚ್ಚು ಪವಿತ್ರತೆ ಇರಬೇಕಾದುದು ಧ್ಯಾನಕ್ಷೇತ್ರದಲ್ಲಿಯೇ. ನಮ್ಮ ಮಸ್ತಿಷ್ಕದಲ್ಲಿ, ಮನಸ್ಸಿನಲ್ಲಿ ತತ್ (ಈಶ್ವರೀಯ), ಸವಿತುಃ (ತೇಜಸ್ವೀ), ವರೇಣ್ಯಂ (ಶ್ರೇಷ್ಠ), ಭರ್ಗಃ (ಶಕ್ತಿಶಾಲಿ), ದೇವಸ್ಯ (ದಿವ್ಯದ), ಧೀಮಹಿ (ಧಾರಣೆಯಾಗಬೇಕು). ಆಗಲೇ ನಾವು ಗಾಯತ್ರಿಯಲ್ಲಿ ಹೇಳಲಾದ ಲಕ್ಷ್ಯವನ್ನು ಹೊಂದಬಲ್ಲೆವು.

'ಧಿಯೋ ಯೋ ನಃ' ಇಲ್ಲಿ 'ಧಿಯಃ ಯಃ' ಮತ್ತು 'ನಃ' ಎಂಬ

ಮೂರು ಪದಗಳಿವೆ. ಇವುಗಳನ್ನು ಪ್ರತ್ಯೇಕವಾಗಿ ವಿಮರ್ಶಿಸೋಣ. ಗಾಯತ್ರಿಯು ಎಷ್ಟು ಭವ್ಯವೋ, ಉದ್ದಿಶ್ಯವೂ ಅಷ್ಟೆ ಭವ್ಯವೆಂಬುದು ನೆನಪಿರಲಿ.

**'ಧಿಯಃ'** : 'ಧಿಯಃ' ಎಂದರೆ ಬುದ್ಧಿಗಳನ್ನು ಎಂದರ್ಥ. 'ಧೀ' ಶಬ್ದದ ದ್ವಿತೀಯ ಬಹುವಚನ ರೂಪವಾಗಿ ಇಲ್ಲಿ ಉಪಯೋಗಿಸಲ್ಪಟ್ಟಿದೆ. 'ಬುದ್ಧಿಃ, ಮನೀಷಾ, ಧಿಷಣಾ, ಧೀಃ, ಪ್ರಜ್ಞಾ, ಶೇಮುಷೀ, ಮತಿಃ'—ಎಂಬುದು ಅಮರಕಾರನ ನಿಘಂಟು. ಸಾಯಣಾಚಾರ್ಯರು ವಾಕ್, ಕರ್ಮ್ ಮತ್ತು ಬುದ್ಧಿ'—ಈ ಮೂರರಲ್ಲಿಯೂ ಇದರ ಉಪಯೋಗವಿದೆ ಎಂದು ಹೇಳುತ್ತಾರೆ. ವಿದ್ವಾಂಸರ ಅಭಿಪ್ರಾಯದಂತೆ 'ಸದ್ಬುದ್ಧಿಗಳನ್ನು' ಎಂಬರ್ಥದಲ್ಲಿ ಈ ಶಬ್ದವು ಇಲ್ಲಿ ಉಪಯೋಗಿಸಲ್ಪಟ್ಟಿದೆ.

ನಮ್ಮ ಬುದ್ಧಿಯನ್ನೇ ಏಕೆ ಪ್ರೇರಣೆ ಮಾಡಬೇಕೆಂದರೆ, ಮನಸ್ಸು ಚಂಚಲವೂ, ಅಸ್ಥಿರವೂ, ಸಂಶಯಾತ್ಮಕವೂ ಆದದ್ದು. ಆದರೆ ಬುದ್ಧಿ ಸ್ಥಿರವಾದುದು, ನಿಶ್ಚಯಾತ್ಮಕವಾದುದು, ಹಾಗೂ ಸತ್ಯಾಸತ್ಯಗಳನ್ನು ಸ್ಪಷ್ಟವಾಗಿ ಅರಿಯುವಂತಹುದು. ಆದ್ದರಿಂದ ಮನಸ್ಸು, ಚಿತ್ತ, ಅಹಂಕಾರಗಳನ್ನು ಹತೋಟಿಯಲ್ಲಿಟ್ಟುಕೊಂಡು ನಿಗ್ರಹಿಸಿ ಆಳಬಲ್ಲ ಬುದ್ಧಿಗೆ ಪ್ರಚೋದನೆ ಬೇಕು ಎಂಬ ಪವಿತ್ರ ಪ್ರಾರ್ಥನೆ ಇಲ್ಲಿದೆ.

ಮನುಷ್ಯನಿಗೆ ಪ್ರಾಣಿಗಳಲ್ಲಿ ಇಲ್ಲದ ವಿಶೇಷವಾದ 'ಬುದ್ಧಿ' ಇದೆ. ಇದರ ಸಹಾಯದಿಂದ ಅವನು ಜಗತ್ತಿನ ವ್ಯವಹಾರಗಳನ್ನು ವಿಚಾರ ಮಾಡಿ ಸರಿಯಾದುದನ್ನು ಅರಿತುಕೊಳ್ಳಬಲ್ಲ. ಈ ಬುದ್ಧಿ ಪ್ರಾಣಿಗಳಿಗಿಲ್ಲ. ಜಗತ್ತಿನಲ್ಲಿ ಬುದ್ಧಿಯೇ ಸರ್ವ ಪ್ರಧಾನವಾದುದು. ಮನುಷ್ಯನಿಗೆ ಅವಶ್ಯಕವಾದ ಸದ್ಬುದ್ಧಿಗೆ 'ಧಿಯಃ' ಎಂದು ಕರೆಯುತ್ತಾರೆ. ಬುದ್ಧಿಯ ಸ್ತರಗಳೆಷ್ಟೋ ಇವೆ. ಬುದ್ಧಿವಂತಿಕೆ, ಚಾತುರ್ಯ, ತಿಳಿವಳಿಕೆ, ಚಾಣಾಕ್ಷತನ, ತೀಕ್ಷ್ಣಬುದ್ಧಿ, ದೂರದರ್ಶಿತ್ವ ಇತ್ಯಾದಿ ಶಬ್ದಗಳು ಬುದ್ಧಿವಿಶೇಷದ ಅರ್ಥದಲ್ಲಿ ಪ್ರಯೋಗಿಸಲ್ಪಡುತ್ತವೆ. ಸಾಧಾರಣವಾಗಿ ಮಸ್ತಿಷ್ಕದ ಬಲಕ್ಕೆ ಬುದ್ಧಿ ಎನ್ನುವುದುಂಟು. ಯಾರ ಮಸ್ತಿಷ್ಕವು ಹೆಚ್ಚು ಬಲಶಾಲಿಯೂ ಹೆಚ್ಚು ಸೂಕ್ಷ್ಮವೂ, ಹೆಚ್ಚು ಸ್ಫೂರ್ತಿಶಾಲಿಯೂ ಆಗಿರುವುದೋ ಅವರನ್ನು ಬುದ್ಧಿವಂತರೆಂದು ಕರೆಯುವುದು ವಾಡಿಕೆ. ಪಾಶ್ಚಿಮಾತ್ಯ ಮನಶ್ಶಾಸ್ತ್ರದಲ್ಲಿ 'ಬುದ್ಧಿ' ಎಂಬ ಈ ಶಕ್ತಿಯನ್ನು 'ಇನ್‌ಟ್ಯೂಷನ್' (Intuition ಒಳಗಿನಿಂದ ಬರುವ ತಿಳಿವಳಿಕೆ)

ಎಂದು ಕರೆದಿದೆ. ಮನಸ್ಸಿಗೆ ಸಕಲ ಸಂಗತಿಗಳೂ ಗೊತ್ತಿರಬಹುದು. ಆದರೆ ಈ 'ಬುದ್ಧಿ'ಯ ಬೆಳಕು ಮನಸ್ಸಿನ ಮೇಲೆ ಬೀಳದಿದ್ದರೆ ಆ ಸಂಗತಿಗಳ ಅಂತರಾರ್ಥ ಗೋಚರವಾಗುವುದಿಲ್ಲ. ಬುದ್ಧಿಶಕ್ತಿ ಅಸ್ಪಷ್ಟವಾಗಿದ್ದರೆ ಅಥವಾ ಮಂಕಾಗಿದ್ದರೆ ಆಂತರಿಕ ಅರಿವು ಸಾಧ್ಯವಿಲ್ಲ. ಮನಶ್ಶಕ್ತಿಗೂ, ಬುದ್ಧಿಶಕ್ತಿಗೂ ಇರುವ ವ್ಯತ್ಯಾಸವನ್ನು ಇಲ್ಲಿ ಗಮನಿಸಬೇಕು. ಒಳಗಿನಿಂದ ಬೆಳಕು ಬರಬೇಕಾದರೆ ಬುದ್ಧಿಶಕ್ತಿ ಆರೋಗ್ಯದಿಂದ ಕೆಲಸ ಮಾಡುತ್ತಿರಬೇಕು. ಇದಕ್ಕೆ ಮನಸ್ಸು ಸಹ ಸಾಕಾದಷ್ಟು ಪರಿಶುದ್ಧವಾಗಿರಬೇಕು.

'ಧಿಯಃ' ಶಬ್ದದ ಅರ್ಥ—ಬುದ್ಧಿಯೂ ಹೌದು, ಕರ್ಮವೂ ಹೌದು, ವಚನವೂ ಹೌದು. ಸಾಧಕನು 'ಧಿಯಃ' ಎಂದಾಗ ಅದರ ಅರ್ಥವು 'ನಮ್ಮ ಬುದ್ಧಿಗಳನ್ನು, ಕರ್ಮ ಹಾಗೂ ವಚನಗಳನ್ನು ತನ್ನ ಕಡೆಗೆ ಸಾಗುವಂತೆ ಪ್ರೇರಣೆಮಾಡು' ಎಂದಾಗುತ್ತದೆ. ಕರ್ಮವು ಸಾಧಕನನ್ನು ಪರಮಾತ್ಮನೆಡೆಗೆ ಕೊಂಡೊಯ್ಯುವಂತೆ, ವಚನವು ಅವನ ಗುಣಗಾನಮಾಡುವಂತೆ ಹಾಗೂ ಆತನ ಆಜ್ಞಾಪಾಲನೆ ಮಾಡುವಂತೆ ಆಗಬೇಕು. ಆದರೆ ಈ ಪರಿಭಾಷೆಯು ತುಂಬಾ ಸ್ಥೂಲವೂ, ಅಪೂರ್ಣವೂ ಆಗಿದೆ. ಎಷ್ಟೋ ವ್ಯಕ್ತಿಗಳು ಬಹಳ ಚಾಲಾಕಾಗಿಯೂ, ಧೂರ್ತರಾಗಿಯೂ, ಬಕಧ್ಯಾನಿಗಳಾಗಿಯೂ ಇರುತ್ತಾರೆ. ಪ್ರಪಂಚದಲ್ಲಿ ಎಷ್ಟೋ ಜನರು ಠಕ್ಕರೂ, ವಿಶ್ವಾಸಘಾತಕರೂ, ಸುಳ್ಳರೂ, ದುಷ್ಟ ಪ್ರಕೃತಿಯವರೂ ಇದ್ದಾರೆ. ಅವರು ಪ್ರಾಯಶಃ ತೀಕ್ಷ್ಣ ಬುದ್ಧಿಯವರಿರುತ್ತಾರೆ. ಏಕೆಂದರೆ ಅವರಿಗೆ ಚುರುಕುಬುದ್ಧಿ ಇರದಿದ್ದರೆ ತಮ್ಮ ಕಾರ್ಯವನ್ನು ಯಶಸ್ವಿಯಾಗಿ ನಡೆಸಲು ಶಕ್ತರಾಗಲಾರರು.

ಇಂತಹ (ಮೇಲೆ ವರ್ಣಿಸಿದ) ಬುದ್ಧಿಯು ವ್ಯರ್ಥವಾದುದು. ಇಂಥಾ ಬುದ್ಧಿ ಇರುವುದಕ್ಕಿಂತ ಇಲ್ಲದಿರುವುದೇ ಮೇಲು. ಶ್ರೀಗಾಯತ್ರಿಯಲ್ಲಿ ಇಂತಹ ಬುದ್ಧಿಗಾಗಿ ಪ್ರಾರ್ಥನೆ ಮಾಡಲಾಗಿಲ್ಲ. ಅದಕ್ಕೆ ಎಲ್ಲಕ್ಕಿಂತ ಹೆಚ್ಚಾಗಿ ಇರುವ ಆವಶ್ಯಕತೆಯೆಂದರೆ 'ಸದ್ಬುದ್ಧಿ'. ಇದನ್ನೇ 'ಧಿಯಃ' ಎಂದು ಕರೆಯುವುದು. ಇದರ ಅಭಾವದಲ್ಲಿ ಕುಬುದ್ಧಿಯು ಮನುಷ್ಯನನ್ನು ಹಿಂಬಾಲಿಸುತ್ತದೆ. ಈ ಕುಬುದ್ಧಿಯಿಂದ ನಮಗೆ ಬಿಡುಗಡೆಯಾಗಲಿ ಮತ್ತು ದಿವ್ಯ ಜೀವನಾನಂದವು ಪ್ರಾಪ್ತವಾಗಲಿ ಎಂಬುದೇ ಇಲ್ಲಿಯ ಪ್ರಾರ್ಥನೆಯ ಧ್ಯೇಯ. ಪರಮಾತ್ಮನ ಸಾನ್ನಿಧ್ಯವನ್ನು ಹೊಂದಲು, ಪರಮಾತ್ಮನ ದರ್ಶನ ಪ್ರಾಪ್ತವಾಗಲು (ಇದಕ್ಕೆ ಪ್ರೇರಣೆಯಾಗಲು) ಕೋರುವುದೇ ಇದರ ತತ್ತ್ವ. ಒಳ್ಳೆಯ ಗುಣಗಳೇ ಮಾನವನ ನಿಜವಾದ ಸಂಪತ್ತು. ಅಶಾಶ್ವತವಾದ ಭೌತಿಕ ಸಂಪತ್ತನ್ನು

ವಿಹಾರಿದ್ದು ದೈವಿಕಸಂಪತ್ತು, ದೈವೀಸಂಪತ್ತು. ಇದು ಒಂದು ವರ.

'ಧಿಯಃ' ಎಂದರೆ ಅಂತರ್ಮುಖವಾಗಿ ಪ್ರವಹಿಸುವ ಅಂತಃಕರಣ ವೃತ್ತಿಗಳು. 'ಧೀ' ಶಬ್ದ ರೂಪುಗೊಂಡಿರುವುದು 'ಧ್ಯೈ' ಎಂಬ ಧಾತುವಿನಿಂದ. ಯಾವುದರಿಂದ ಆಲೋಚಿಸುತ್ತೇವೋ, ಧ್ಯಾನಿಸುತ್ತೇವೋ ಮತ್ತು ವಿಮರ್ಶಿಸುತ್ತೇವೋ, ಮಾನಸಿಕವಾಗಿ ರೂಪಿಸಿಕೊಳ್ಳುತ್ತೇವೋ, ಮನನ ಮಾಡುತ್ತೇವೋ, ಊಹಿಸುತ್ತೇವೋ ಹಾಗೂ ಸ್ಮರಿಸುತ್ತೇವೋ ಅದು 'ಧೀಃ'. ಯೋಚಿಸುವ, ಹಾಗೂ ಊಹಿಸುವ ಸಾಧನವಾದಾಗ ಅದು 'ಬುದ್ಧಿ'; ಧ್ಯಾನಿಸುವ ಹಾಗೂ ಸ್ಮರಿಸುವ ಸಾಧನವಾದಾಗ ಅದು 'ಭಕ್ತಿ'. ಈ ಎರಡು ಕ್ರಿಯೆಗಳಿಗೂ ಕ್ರಿಯಾತ್ಮಕ ರೂಪವಿತ್ತಾಗ ಅದು 'ಯಜ್ಞ' ಎನಿಸುತ್ತದೆ. 'ಧೀ' ಶಬ್ದವು ಬುದ್ಧಿವಾಚಕ, ಕರ್ಮವಾಚಕ ಮತ್ತು ವಾಕ್‌ವಾಚಕವಾಗಿದೆ ಎಂದು ಸಾಯಣ ಉದ್ಧರದಲ್ಲಿ ಹೇಳಿದೆ. ಯಜ್ಞ ಸಾಯಣದಲ್ಲಿ 'ಧರ್ಮಾದಿ ವಿಷಯಕವಾದ ಬುದ್ಧಿಯನ್ನು 'ಧೀ' ಎನ್ನುತ್ತಾರೆ ಎಂದಿದೆ. ವಿಷ್ಣುಭಾಷ್ಯವು 'ಧಾರಣ' ಮಾಡುವಂತಹ ಬುದ್ಧಿಗಳ ಹೆಸರು 'ಧಿಯಃ' ಎನ್ನುತ್ತದೆ. ಅಥರ್ವವೇದದಲ್ಲಿ ಕರ್ಮಗಳನ್ನು 'ಬುದ್ಧಿ' ಎಂದು ಕರೆಯುತ್ತಾರೆ ಎಂದು ಹೇಳಿದೆ.

ಶ್ರೀಗಾಯತ್ರೀ ಮಂತ್ರದ ಪೂರ್ವಾರ್ಧದಲ್ಲಿ ಆ ಸವಿತೃ-ವರೇಣ್ಯ-ಭರ್ಗ-ದೇವನ ಧ್ಯಾನಮಾಡಲ್ಪಟ್ಟಿದೆ. ಆ ಧ್ಯಾನದ ಪ್ರಯೋಜನವೇನು ? ಏತಕ್ಕೋಸ್ಕರ ಮಾಡಬೇಕು ? ಎಂಬುದು ಉತ್ತರಾರ್ಧದಲ್ಲಿ ಸ್ಪಷ್ಟಗೊಳಿಸಲ್ಪಟ್ಟಿದೆ. ಆ ಪ್ರಯೋಜನವೆಂದರೆ 'ಧೀಯಃ'ಗಳ ಎಂದರೆ ಸದ್ಬುದ್ಧಿಗಳ ಪ್ರಾಪ್ತಿ. ಸದ್ಬುದ್ಧಿಗೆ ಸಮಾನವಾದ ಸಿದ್ಧಿ ಯಾವುದೂ ಇಲ್ಲ. ಸಂಪತ್ತು ಯಾವುದು ಇಲ್ಲ.

'ಧಿಯಃ' ಶಬ್ದವು ಬಹುವಚನದಲ್ಲಿರಲು ಕಾರಣವೆಂದರೆ—ಸಾಧಕನು ಸವಿತೃವನ್ನು ಪ್ರಾರ್ಥಿಸುವಾಗ 'ತಾನೂ ಎಲ್ಲಾ ಮಾನವರೂ ಒಂದೇ' ಎಂಬ ಭಾವನೆಯನ್ನು ಹೊಂದಿರುತ್ತಾನೆ. ಇಲ್ಲಿ ಸ್ವಾರ್ಥವಿಲ್ಲ. ಸಾಮೂಹಿಕ ಮಾನವ ಜನಾಂಗದ ಪ್ರಯೋಜನಕ್ಕಾಗಿ ಪ್ರಾರ್ಥಿಸುತ್ತಾನೆ. ಹಾಗಾಗಿ ಬಹುವಚನವನ್ನು ಉಪಯೋಗಿಸಲಾಗಿದೆ.

ನಮ್ಮ ಶ್ರದ್ಧೆ ವಿರೂಪವಾಗದಂತೆ, ಅಂಧ ವಿಶ್ವಾಸವಾಗದಂತೆ ನೋಡಿಕೊಳ್ಳಲು ನಮಗೆ ಮತ್ತೊಂದು ತತ್ತ್ವದ ಆಸರೆ ಬೇಕು. ಅದೇ ಗಾಯತ್ರಿಯ 'ಧೀಃ'. ಜ್ಞಾನಿಗಳ ಕಡೆಯಿಂದ ಲಭಿಸುವ ರಕ್ಷಣೆ ಜ್ಞಾನ. ಅದನ್ನು ಗ್ರಹಿಸಲು ಬುದ್ಧಿ ಬೇಕು. ಈ ಶ್ರದ್ಧಾ-ಬುದ್ಧಿಗಳ ಸಂಗಮ ನಮ್ಮ

ಸಂಪತ್ತು, ಅನುಪಮ ನಿಧಿ. ಈ ಮೇಧಾವಿಕಾಸ, ಈ ಬುದ್ಧಿ ಸಂವರ್ಧನೆ ಕೇವಲ ಭಗವಂತನಿಂದ ಸ್ಫೂರ್ತಿಪಡೆದು, ಪ್ರೇರಣೆಪಡೆದು ಸತ್ಪಥಗಾಮಿ ಯಾಗಿ ನಡೆದರೆ ಸಾಧ್ಯ.

'ಭಗವಂತ ! ನಮ್ಮ ಬುದ್ಧಿಗೆ ಉತ್ತಮ ಪ್ರಚೋದನೆಯನ್ನು ಕೊಡು' ಎಂಬುದೇ ಈ ಪ್ರಾರ್ಥನೆ. ನಮ್ಮ ಬುದ್ಧಿ ಮಂದವಾದರೆ ಅಥವಾ ಹುಚ್ಚಿದ್ದು ಕುಣಿದರೆ ನಮ್ಮ ಜೀವನವು ವಿಫಲವಾಗುವುದು. ಆದ್ದರಿಂದ ಅದನ್ನು ಸರಿಯಾದ ದಾರಿಯಲ್ಲಿ ಹರಿಬಿಡಬೇಕು. ಇದು ಅಗತ್ಯ. ಇದಕ್ಕೆ ಮನುಷ್ಯ ಪ್ರಯತ್ನ ಮತ್ತು ಭಗವಂತನ ಅನುಗ್ರಹ ಎರಡೂ ಬೇಕು.

'ಧೀ' ಶಕ್ತಿಗೂ 'ಬುದ್ಧಿ' ಶಕ್ತಿಗೂ ಅರ್ಥ ವ್ಯತ್ಯಾಸವಿದ್ದಂತೆ ತೋರು ತ್ತದೆ. ಬುದ್ಧಿಶಕ್ತಿಯಿಂದ ಒಳ್ಳೆಯದು ಅಥವಾ ಕೆಟ್ಟದ್ದು ಎರಡನ್ನೂ ಮಾಡಲು ಬರುತ್ತದೆ. ಆದರೆ 'ಧೀ' ಶಕ್ತಿಯಿಂದ ಸದ್ಬುದ್ಧಿಯ ಪ್ರೇರಣೆ ಮಾತ್ರವಲ್ಲ. ಅದು ಪರಮಾತ್ಮನ ಕಡೆಗೆ ಮಾತ್ರಾ ನಮ್ಮನ್ನು ಪ್ರೇರಿಸುವ ಶಕ್ತಿ. ಇಲ್ಲಿ ನಾವು ಬಯಸುವುದು ಈ ತರಹದ ಶಕ್ತಿಯನ್ನು. ಅಜ್ಞಾನ ನಾಶ, ನಾನು ಪರಮಾತ್ಮನೆಂಬ ನಿಜಜ್ಞಾನದ ಅರಿವು. ಇದಕ್ಕೆ ನಮ್ಮೊಳಗಿನ ಜ್ಞಾನದ ಪ್ರೇರಣೆ ಬೇಕಾಗಿದೆ.

'ಧೀಯಃ' ಎಂದರೆ ಅಂತರ್ಮುಖವಾಗಿ ಪ್ರವಹಿಸುವ ಅಂತಃಕರಣ ವೃತ್ತಿ ಗಳು. ಬುದ್ಧಿ ವೃತ್ತಿಗಳು (ಕಣ್ಣಿನ ಮೂಲಕ ಹೊಮ್ಮುವ ಬುದ್ಧಿ ವೃತ್ತಿ ಗಳು. ಇದು ಬಹುವಚನದಲ್ಲಿರುವುದರಿಂದ) ಎಲ್ಲಾ ಬುದ್ಧಿಗಳಿಗೂ ಪ್ರೇರಕ ಎಂಬುದು ತತ್ತ್ವ.

ಎಂತಹ ಪರಮಾತ್ಮನೆಂದರೆ ಮೇಲೆ ಹೇಳಿದಂತಹ ಗುಣಗಳುಳ್ಳ, ಸರ್ವೋತ್ತಮನಾದ ಪರಮಾತ್ಮ ಎಂಬುದನ್ನು ತಿಳಿಸಲು 'ಯಃ' ಎಂಬ ಶಬ್ದನನ್ನು ಪ್ರಯೋಗಿಸಿದೆ ; ಯಾರು ನಮ್ಮ ಬುದ್ಧಿಗಳನ್ನು ಪ್ರೇರಿಸು ತ್ತಾರೋ ಆ ಪರಮಾತ್ಮ. ನಮ್ಮ ಬುದ್ಧಿಗಳನ್ನು ಪ್ರೇರಣೆ ಮಾಡಲು ಅವನು ಯಾರು ? ಎಂದರೆ–ತತ್–ಸವಿತುಃ ವಿಶೇಷಣಗಳಿಂದ ಕೂಡಿರುವುದರಿಂದ.

**ಯಃ** 'ಯಃ'ದ ಅರ್ಥ ಯಾರು, ಯಾವನು, ಯಾವಾತನು (ಯಾವ ತೇಜಸ್ಸು) ಅಂತಹವನು ಎಂದು. ಈ ಪದವು ಯಾವಾತನೋ (ಎಂಬ ಅರ್ಥ ವನ್ನು ಕೊಡುತ್ತಾ) 'ಅಂತಹವನು' ಎಂಬ ಮುಂದಿನ ಇನ್ನೊಂದು ಪದ ವನ್ನಪೇಕ್ಷಿಸಿ ತನ್ನ ಅರ್ಥವನ್ನು ಸಮರ್ಥಿಸುತ್ತದೆ. 'ಯಃ' ಎಂದರೆ ಒಬ್ಬನೇ ಆದ ಚಿದಾತ್ಮನು. ಇದರಿಂದನಾನು (ಅಸ್ಮಿತ್) ಎಂಬ ಅನಿಸಿಕೆಗೆ ಗೋಚರ

ವಾದ ನಾನಾ ಪದಾರ್ಥಗಳಲ್ಲಿ ಶರೀರ, ಇಂದ್ರಿಯ ಮತ್ತು ಅಂತಃಕರಣಗಳಿಗೆ ಮಾತ್ರ ಭೇದ ಎಂದು ಸೂಚಿತವಾಗುತ್ತದೆ. ಆದ್ದರಿಂದ ಭೇದವನ್ನೇ ಅವಲಂಬಿಸಿ ಹುಟ್ಟಿರುವ ಚತುರ್ವರ್ಣಗಳು ಚತುರಾಶ್ರಮಗಳು ತ್ವಂತಾ (ನೀನು ಎಂಬ ಭಾವನೆ), ಅಹಂತಾ (ನಾನು ಎಂಬ ಅನಿಸಿಕೆ) ಮುಂತಾದುವು ಗಳನ್ನು ನಿಮಿತ್ತವನ್ನಾಗಿವುಳ್ಳ ಲೌಕಿಕ ಮತ್ತು ವೈದಿಕ ಕರ್ಮಗಳು, ಉಪಾಸನೆಗಳು ಇತ್ಯಾದಿ ಸಕಲ ವ್ಯವಹಾರಗಳೂ ಶರೀರ–ಇಂದ್ರಿಯ–ಅಂತಃಕರಣಗಳೇ ಆಲಂಬನ (ಆತ್ಮನಲ್ಲ) ಎಂದು ವಿವೇಚಿಸಿದಂತಾಗುತ್ತದೆ.

'ನಃ' ಎಂದು ಭಾಸ್ಯ–ಭಾಸಕ ರೂಪಗಳಾದ ಕ್ಷೇತ್ರ–ಕ್ಷೇತ್ರಜ್ಞ ಸಂಘಾತಗಳನ್ನು ನಿರ್ದೇಶಿಸಿ ಅವುಗಳ ಮಧ್ಯೆ ಭಾಸಕ ಕ್ಷೇತ್ರಜ್ಞರೂಪ ಯಾವುದಿದೆಯೋ ಅದನ್ನು ಏಕವಚನಾಂತವಾದ 'ಯಃ' ಎಂಬುದರಿಂದ ಹೇಳಿದ್ದಾರೆ. ಇದರಿಂದ ಸಾಕ್ಷಿಯಾದ ಕ್ಷೇತ್ರಜ್ಞನು (ಜಗತ್ತಿಗೆಲ್ಲಾ)ಒಬ್ಬನೇ, ಅವನೇ ಎಲ್ಲಕ್ಕೂ ಭಾಸಕ ಎಂಬು 'ಯಃ ಪ್ರಚೋದಯಾತ್' ಎಂಬುದ ರಿಂದ ಹೇಳಿದಂತಾಯಿತು. ಒಬ್ಬನೇ ರವಿಯು ಈ ಸಮಸ್ತ ಲೋಕವನ್ನು ಹೇಗೆ ಪ್ರಕಾಶಿಸುತ್ತಾನೋ ಹಾಗೆ ಎಲ್ಲಾ ಕ್ಷೇತ್ರಗಳನ್ನೂ ಒಬ್ಬನೇ ಕ್ಷೇತ್ರಜ್ಞನು ಪ್ರಕಾಶಪಡಿಸುತ್ತಾನೆ.

'ಯಃ ಎಂದರೆ ಸತ್ಯ–ಜ್ಞಾನ–ಆನಂದ ಲಕ್ಷಣವುಳ್ಳ, ಅವ್ಯಕ್ತವೂ, ಅಪರೂಪವೂ ಆದ ಪರಬ್ರಹ್ಮ. ಇದು ಯತ್ ಶಬ್ದಕ್ಕೆ ಸಂಬಂಧಿಸಿದ್ದು, ಎಲ್ಲಿ 'ಯತ್' ಶಬ್ದವು (ಯಾವನು, ಯಾವಳು, ಯಾವುದು ಎಂಬ ಮೂರು ಲಿಂಗಗಳಲ್ಲಿಯೂ ಈ ಶಬ್ದ ಪ್ರಯೋಗವಿದೆ) ಬರುತ್ತದೆಯೋ ಅಲ್ಲಿ 'ತತ್' ಶಬ್ದವನ್ನು ಸೂಚಿಸುವ ನಾಮಪದವಿದ್ದೇ ಇರಬೇಕು. ಗಾಯತ್ರಿಯಲ್ಲಿ ಕೆಲವು ಭಾಷ್ಯಕಾರರು 'ತತ್' ಪದಕ್ಕೂ ಮತ್ತೆ ಕೆಲವರು 'ಭರ್ಗ' ಎಂಬ ಪದಕ್ಕೂ ಸಂಬಂಧವನ್ನು ಕಲ್ಪಿಸಿ ಅರ್ಥಮಾಡಿರುತ್ತಾರೆ. ಪುಲ್ಲಿಂಗ ಪ್ರಯೋಗವಿದ್ದರೂ ನಪುಂಸಕಲಿಂಗ ವಾಚಕವಾದ ಪರಬ್ರಹ್ಮನನ್ನು ಸರ್ವಜಗದಂತರ್ಯಾಮಿಯನ್ನು ಈ ವರ್ಗವು ಪ್ರತಿಪಾದಿಸುತ್ತದೆ. ಇದು ಪರಮಾತ್ಮನಿಗೋಸ್ಕರ ಮಾಡಲ್ಪಟ್ಟ ಸಂಕೇತ. ಗಾಯತ್ರಿಯ ಪೂರ್ವಾರ್ಧದಲ್ಲಿ ಯಾವ ಸವಿತೃ–ವರೇಣ್ಯ–ಭರ್ಗ–ದೇವ–ಪರಮಾತ್ಮನ ವರ್ಣನೆ ಮಾಡ ಲ್ಪಟ್ಟಿದೆಯೋ ಆ ಗುಣಗಳಿಂದ ಕೂಡಿದ ಯಾವ ಪರಮಾತ್ಮನಿರುವನೋ ಅವನಿಗೆ ಈ ಉತ್ತರಾರ್ಧದಲ್ಲಿ ಪ್ರಾರ್ಥನೆ ಮಾಡಲ್ಪಟ್ಟಿದೆ. ಆ ಪೂರ್ವೋಕ್ತ ವಿಚಾರಗಳನ್ನೇ ಪುನರುಕ್ತಿ ಮಾಡಿ, ಹೇಳಿದ್ದನ್ನೇ ಹೇಳುವುದಕ್ಕೆ ಬದಲಾಗಿ

ಇಲ್ಲಿ 'ಯಃ' ಶಬ್ದವನ್ನು ಸಾಂಕೇತಿಕವಾಗಿ ಉಪಯೋಗಿಸಿ, ಆ ಶಕ್ತಿಗಳಿಂದೊಡಗೂಡಿದ ಪರಮಾತ್ಮನು ನಮಗೆ 'ಧಿಯಃ' ತತ್ತ್ವವನ್ನು ದಯಪಾಲಿಸಲಿ ಎಂದು ಕೇಳಿಕೊಳ್ಳಲಾಗಿದೆ. 'ಯಃ' ಎಂದರೆ ಸತ್ಯ–ಜ್ಞಾನ–ಆನಂದ (ಸಚ್ಚಿದಾನಂದ) ಲಕ್ಷಣವುಳ್ಳ, ಅವ್ಯಕ್ತವೂ, ಅಪರೂಪವೂ ಆದ ಆ ಪರಬ್ರಹ್ಮವು ಒಬ್ಬನೇ ಆದ ಜೀವಾತ್ಮನು ಎಂದು ಶ್ರೀ ವಿದ್ಯಾರಣ್ಯಸ್ವಾಮಿಗಳು ಹೇಳಿದ್ದಾರೆ. ನಿರ್ಣಯಕಲ್ಪದಲ್ಲಿ 'ಯಃ' ಎಂದರೆ ಪ್ರತ್ಯಕ್ಷ ಆತ್ಮರೂಪನು, ಈ ವಿಶುದ್ಧ ಆತ್ಮನನ್ನು ಪರಮಾತ್ಮಾ ಎನ್ನುತ್ತಾರೆ ಎಂದು ಹೇಳಲಾಗಿದೆ.

'ಯಃ' ಎಂದರೆ ಪರಮಾತ್ಮನ ವಾಸವು ನಮ್ಮ ಅಂತಃಕರಣದಲ್ಲಾಗಲಿ, ಆತನ ಧಾರಣೆಯಾಗಲಿ, ಆತನ ಕೃಪೆ ಹಾಗೂ ಶಕ್ತಿಗಳಿಂದ ಜೀವನ ನೌಕೆಯು ಪಾರವನ್ನು ತಲುಪಲಿ ಎಂಬುದೇ ಮಂತ್ರವಾಗಿದೆ.

**ನಃ** : 'ನಃ'ದ ಅರ್ಥ 'ನಮ್ಮ' 'ನಮ್ಮೆಲ್ಲರ' ಎಂದು. 'ನ ಅಸ್ಮದೀಯಾಃ' ಅಥವಾ 'ನ ಆಸ್ಮಾಕಂ' ಎಂದು ಇದರ ವ್ಯಾಖ್ಯಾನ. ಅಂದರೆ ನಮ್ಮ ಇಲ್ಲವೆ ನಮ್ಮ ಸಂಬಂಧಕ್ಕೊಳಗಾದ ಎಂಬ ಅರ್ಥವನ್ನು ವಿದ್ವಾಂಸರು ಮಾಡುತಾರೆ. ನಮ್ಮ(ಉಪಾಸಕರ) ಅಂತಃಕರಣಾದಿ ಉಪಾದಿ ಬೇಧದಿಂದ ಭಿನ್ನವಾದ ಜೀವಕೋಟಿಗಳಿಗೆ ಸೇರಿದ ನಮ್ಮಂಥವರ ಎಂದು ಅರ್ಥವನ್ನು ಮಾಡಬಹುದು. ಇಲ್ಲಿ ಬಹುವಚನವು ಪ್ರಯೋಗಿಸಲ್ಪಟ್ಟಿದೆ. ಈ ಬಹುವಚನ ಪ್ರಯೋಗದಿಂದ 'ನಾವು' ಎಂಬ ಸಮೂಹಕ್ಕೆ ಸಮೃದ್ಧಿಯ ಯಾಚನೆಯನ್ನು ಕೇವಲ ಒಬ್ಬಂಟಿಗನಾದ, ಸೀಮಿತಾರ್ಥದ, ವ್ಯಯಕ್ತಿಕವಾದ 'ನನಗೋಸ್ಕರ' ಮಾಡಿರದೆ ವಿಸ್ತೃತಾರ್ಥದ, ಸಮಷ್ಟಿಪ್ರಜ್ಞೆಯ 'ನಮಗೋಸ್ಕರ' ಮಾಡಲಾಗಿದೆ. ಇಡೀ ಲೋಕಕ್ಕೆ ಒಳ್ಳೆಯದಾಗಲೀ ಎಂಬ ಉದಾತ್ತ ಧ್ಯೇಯ ಇಲ್ಲಿ ಅಡಕವಾಗಿದೆ. ಏಕೆಂದರೆ ಸಮಸ್ತರ ಸದ್ಬುದ್ಧಿಯಂ ಮೇಲೆಯೇ ನಮ್ಮ ಕಲ್ಯಾಣವೂ ಆಶ್ರಯಿಗೊಂಡಿದೆ. ನಮ್ಮ ಸಂಕುಚಿತ ಭಾವನೆಯನ್ನು ಬಿಟ್ಟು ಜಗತ್ತಿನ ಜೀವಿಗಳ ಏಕತ್ವ ಕಾಣಬೇಕಾಗಿದೆ. ಏಕೆಂದರೆ ಮನುಷ್ಯ ಸಮಾಜ ಜೀವಿ. ಅವನು ಏಕನಲ್ಲ; ಅನೇಕ. ಅವನಿಗೆ ವಿಶಾಲ ದೃಷ್ಟಿ ಇರಬೇಕಾದುದರ ಸಂಕೇತವೇ ಇದು. ಅಲ್ಲದೆ ಭೇದ ಬುದ್ಧಿ ಇಲ್ಲದ ಭಗವಂತನಲ್ಲಿ ಒಂದಾಗಲು ನಮ್ಮ ಬುದ್ಧಿಯನ್ನು ಸಿದ್ಧಪಡಿಸುವುದೇ ಇದರ ತತ್ತ್ವ. ಇದು ದ್ವಿಜನಿಗಿರುವ ವಿಶಾಲ ಮನೋಭಾವವನ್ನು ತಿಳಿಸುತ್ತದೆ. ದ್ವಿಜನು ಸ್ವಾರ್ಥರಹಿತನಾಗಿ, ಜಾತಿ-ಮತ–ಪಂಥಗಳ ಭೇದವಿಲ್ಲದೆ

ಎಲ್ಲಾ ಜನರಿಗೂ ಸದ್ಬುದ್ಧಿಯನ್ನು ಪ್ರೇರಿಸಲು ಪ್ರಾರ್ಥಿಸುತ್ತಾನೆ. ನಮ್ಮೆಲ್ಲರಿಗೂ ಸುಬುದ್ಧಿ ಲಭಿಸಲಿ, ನಮ್ಮ ಒಳಗಿನ ಹಾಗೂ ಹೊರಗಿನ ಜಗತ್ತಿನಲ್ಲಿಯೂ ಸುಬುದ್ಧಿಯ ಪ್ರಕಾಶ ತುಂಬಲಿ ಎಂದು ಗಾಯತ್ರಿಯಲ್ಲಿ ಮೊರೆ ಇಡುತ್ತಾನೆ. ಮನುಷ್ಯನು ಅನೇಕ ಘಟನೆಗಳೊಡನೆ ಹೊಂದಿಕೊಂಡು ಆತನಾಗಿದ್ದಾನೆ. ಈ ವಿಶಾಲತೆ, ವಿಸ್ತೃತತೆಗಳೇ ಆತನ ಹಿರಿಮೆ. ಈ ವಸುಧೆಯನ್ನೇ ಕುಟುಂಬವೆಂದು ಪರಿಗಣಿಸುವವರೇ ಉದಾರ ಚರಿತರು. ಹೃದಯ, ಶ್ವಾಸಕೋಶಗಳು, ಹೊಟ್ಟೆ, ಕರುಳು, ಮಸ್ತಿಷ್ಕ (ತಲೆ) ಮೊದಲಾದ ಅಂಗಗಳಲ್ಲಿ ಯಾವ ಒಂದು ಅಂಗವು ತೊಂದರೆಗೊಳಗಾದರೂ, ಕೆಟ್ಟು ಹೋದರೂ, ಉಳಿದ ಅಂಗಗಳ, ದೇಹದ ಸ್ವಾಸ್ಥ್ಯವು ಅಪಾಯಕ್ಕೊಳಗಾಗುವುದು. ಈ ಆಂತರಿಕ ಸ್ಥಿತಿಯ ವಿಚಾರದಲ್ಲಿ ಯಾವ ಮಾತು ಸತ್ಯವೋ, ಅದು ಬಾಹ್ಯಜೀವನದ ಸಂಬಂಧದಲ್ಲಿಯೂ ಸತ್ಯವಾಗಿರುವುದು. ನಾವು ವಾಸಿಸುವ ಮೊಹಲ್ಲಾದಲ್ಲಿ ಕಾಲರಾ, ಪ್ಲೇಗು, ಸಿಡುಬು ಮುಂತಾದ ರೋಗಗಳು ಹಬ್ಬಿದರೆ, ಪಕ್ಕದ ಮನೆಗೆ ಬೆಂಕಿ ಹತ್ತಿ ಉರಿಯುತ್ತಿದ್ದರೆ, ನಮ್ಮ ಕುಟುಂಬದ, ನಮ್ಮ ಮನೆಯ ರಕ್ಷಣೆ ಅಷ್ಟು ಸುಸೂತ್ರವಾಗಿ ಸಾಗದು. ಅರಾಜಕತೆಗಳ, ದಂಗೆಗಳ, ಕಾಲದಲ್ಲಿ ನಮ್ಮ ಜೀವಿತ–ವಿತ್ತಗಳು ಸುರಕ್ಷಿತವಾಗಿರಲಾರವು. ಕೆಟ್ಟ ಜನರ ಮಧ್ಯೆ ವಾಸಿಸಿದರೆ ಸಾಧು ಪ್ರಕೃತಿಯವರ ಮನಸ್ಸಿನಲ್ಲಿಯೂ ವಿಕ್ಷೋಭ ಉಂಟಾಗದೆ ಇರುವುದಿಲ್ಲ. ಈ ಕಾರಣದಿಂದಲೇ ಇಲ್ಲಿ ಬಹುವಚನ ಪ್ರಯೋಗ ಮಾಡಿದೆ. ಅಂದರೆ ಜಗತ್ತಿನ ಜೀವರಿಗಾಗಿ ಮಾಡಲ್ಪಟ್ಟಿದೆ. ನಾವು ಸಾಮಾನ್ಯವಾಗಿ ಪ್ರಾರ್ಥಿಸುವಾಗ ನಮ್ಮ ಸ್ವಾರ್ಥದ ಅಥವಾ ನಮ್ಮ ಸಂಸಾರದ ಪರವಾಗಿ ಪ್ರಾರ್ಥಿಸುವುದು ಸಾಮಾನ್ಯ. ಆದರೆ ಇಲ್ಲಿ ನಾವು ಬೇಡುವುದು 'ಧೀ' ಶಕ್ತಿಯನ್ನು. ಎಂದರೆ ನಾವು ನಮ್ಮ ಸಂಕುಚಿತ ಭಾವನೆಯನ್ನು ಬಿಟ್ಟು ಜಗತ್ತಿನ ಎಲ್ಲಾ ಜೀವಿಗಳಲ್ಲೂ ಏಕತ್ವವನ್ನು ಕಾಣಬೇಕಾಗಿದೆ. ಆದ್ದರಿಂದಲೇ 'ಪರಮಾತ್ಮಾ! ನಮ್ಮೆಲ್ಲರಿಗೂ ಸದ್ಬುದ್ಧಿಯನ್ನು ಕರುಣಿಸು. ನಿನ್ನ ಕಡೆಗೆ ಎಲ್ಲರ ಬುದ್ಧಿಗಳೂ ಹರಿಯುವಂತೆ ಪ್ರಚೋದಿಸು' ಎಂದು ಪ್ರಾರ್ಥಿಸುವುದು. ಇದರಿಂದ ಆತ್ಮ ಶಕ್ತಿಯ ವಿಶಾಲತೆಯನ್ನು ಬೆಳೆಸಿಕೊಳ್ಳಲು ಸಾಧ್ಯ. ಅಲ್ಲದೆ ನಮ್ಮ ಬುದ್ಧಿಗಳನ್ನು ಯಾರು ಪ್ರೇರಿಸುತ್ತಾರೋ ಅವರ ಸ್ಥಾನವೇ ಇದೆಂಬುದನ್ನು ಪ್ರತಿಪಾದಿಸುವುದಾಗಿಯೂ ಇದೆ. ಈ ಸದ್ಬುದ್ಧಿಯ ಮಹತ್ವವನ್ನು 'ನಃ' ಶಬ್ದದಲ್ಲಿ ಸ್ಪಷ್ಟಗೊಳಿಸಲಾಗಿದೆ. ಕುಬುದ್ಧಿಯ ಸಮಾಜದಲ್ಲಿ ಯಾವ ವ್ಯಕ್ತಿಯೂ

ಸ್ವಸ್ಥಚಿತ್ತದಿಂದಿರಲಾರ. 'ನಃ' ಎಂದರೆ ಮನುಷ್ಯರು ಮೊದಲಾಗಿ ಸ್ಥಾವರ ಗಳವರೆಗಿನ ಜೀವಾತ್ಮರು, ಹಾಗೆಯೇ ಅನೇಕ ವಿಧವಾದ ಅಭ್ಯಾಸದಿಂದ ಉಂಟಾದ ಭೇದವುಳ್ಳ ಆತ್ಮರು ಎಂದರ್ಥ.

'ಧಿಯಃ' ಎಂದರೆ ಬುದ್ಧಿಗಳನ್ನು ಪ್ರಕಾಶಪಡಿಸಿಕೊಂಡಿರುವ ಪರಮಾತ್ಮನ ಪ್ರತಿಫಲಿತ ಚೈತನ್ಯನೂ, 'ಯಃ' ಎಂದರೆ ಸೂರ್ಯನಲ್ಲಿರುವ ಪ್ರತಿಫಲಿತ ಚೈತನ್ಯನೂ ಒಂದೇ. ಆದುದರಿಂದ ಬುದ್ಧಿಯು ಧ್ಯಾನಾನುಷ್ಠಾನದಿಂದ ತನ್ನಲ್ಲಿರುವ ಸೂರ್ಯನನ್ನು ಉಪಸಂಹಾರ ಮಾಡಿಕೊಂಡು, ನಂತರ 'ನಃ' ಎಂದರೆ ಶುದ್ಧವಾದ 'ನಾನು' ಎಂಬ ಜ್ಞಾನದೊಡನೆ ಸೇರುವಿಕೆಯೇ ಈಗಿನ ಕಳಾಸೋಪಾನ—ಅಂದರೆ ದೇಹ ಜ್ಞಾನವಿಲ್ಲದ ಆನಂದಮಯವಾಗಿಯೂ, ಅಖಂಡವಾಗಿಯೂ 'ನಾನು' ಎಂಬ ಜ್ಞಾನಮಾತ್ರ ಇರುವ ಸ್ಥಿತಿಯೇ ಈ ಗಾಯತ್ರೀ ಮಂತ್ರದಲ್ಲಿನ 'ನಃ' ಪದದ ತತ್ತ್ವವಾಗಿದೆ.

ನಾನೆಂಬ ಸ್ವರೂಪವೂ, ನನ್ನ ಬುದ್ಧಿಯ ಸ್ವರೂಪವೂ, ನನ್ನ ಬುದ್ಧಿಯ ವ್ಯಾಪಾರಾದಿಗಳಲ್ಲಿ ಯಾವುದು ಪ್ರಕಾಶಿಸುತ್ತಿದ್ದಿತೋ ಅಂತಹ ಜೀವದ ಸ್ವರೂಪಗಳೆಲ್ಲಾ ಈ 'ಧಿಯೋ ಯೋ ನಃ' ಎಂಬ ಪದದ ತತ್ತ್ವದಲ್ಲಿರುವು ದೆಂಬುದನ್ನು ಪ್ರತಿಪಾದಿಸುವ ಸೂಚನೆಯೂ ಈ ಪದದಲ್ಲಿ ಅಡಕವಾಗಿರು ವುದು. ತೇಜಸ್ಸಿನಲ್ಲಿ ಸ್ಥಿರಪಟ್ಟ, ತ್ರಿಪುಟೀ ರೂಪವಾದ, ಸ್ಥಿತಿಯನ್ನು ಮರೆಯುವುದೆಂದರೆ ತನ್ನನ್ನು ತಾನು ಮರೆಯುವಂತಹ ಸಮಾಧಿಸ್ಥಿತ ನಾಗುವ ಪ್ರಾರಂಭದ ಸ್ಥಿತಿಯು, 'ಧಿಯೋ ಯೋ ನಃ' ಪದ ಮತ್ತು ಸ್ವರಗಳ ತತ್ತ್ವಾರ್ಥದಲ್ಲಿರುವುದು. ನಮ್ಮ ಬುದ್ಧಿಗೆ ಪ್ರೇರಕನಾಗಿರುವವನೇ ಸೂರ್ಯದೇವತಾ ಸ್ವರೂಪದಲ್ಲಿರುವ ಅಂತರ್ಯಾಮಿ—ಎಂದರೆ ಈಶ್ವರ ನಾಗಿರುವವನು. ಸಮಾಧಿಯನ್ನು ಅಭ್ಯಾಸಮಾಡುತ್ತಿರುವ ಅಧಿಕಾರಿಯ ಜೀವ ಚೈತನ್ಯನು ತನ್ನಲ್ಲಿರುವ ಸೂರ್ಯರೂಪಿನಲ್ಲಿ ಬಂದು ನಿಂತು ಅವನೇ ಇವನಾಗುವ ತತ್ತ್ವವೇ 'ಧಿಯಃ ನಃ' ಎಂಬುದರ ತತ್ತ್ವವು. ಸಮಾಧಿಯಲ್ಲಿ ದೇಹಜ್ಞಾನವೂ ಇಲ್ಲದ ಶುದ್ಧನಾದ ನಾನೆಂಬ ಜ್ಞಾನ ಮಾತ್ರ ಉಳಿಯುವ ಸ್ಥಿತಿಯಲ್ಲಿ ಜೀವ ಚೈತನ್ಯನು ತಾದಾತ್ಮ್ಯದಿಂದ ಇರುವವನಾದುದರಿಂದ ಇವನಿಗೆ 'ನಃ' ಎಂಬುದು ಸಲ್ಲುವುದು. ಅಧಿಕಾರಿಯು ಸವಿಕಲ್ಪಸಮಾಧಿಯ ಅಂತ್ಯದವರೆಗೆ ಬರುವ ವಿಧಾನಗಳೇ 'ಧಿಯೋ ಯೋ ನಃ' ಎಂಬ ಪದದ ತತ್ತ್ವವಾಗಿದೆ.

ನಮ್ಮೆಲ್ಲರಿಗೂ ಸುಬುದ್ಧಿಯು ಲಭಿಸಲಿ, ನಮ್ಮ ಒಳಗಿನ ಹಾಗೂ ಹೊರ

ಗಿನ ಜಗತ್ತಿನಲ್ಲೆಲ್ಲಿಯೂ ಸದ್ಬುದ್ಧಿಯ ಪ್ರಕಾಶವು ತುಂಬಲಿ, ಎನ್ನುವುದ ಕ್ಕೋಸ್ಕರವಾಗಿಯೇ ಭಗವಂತನನ್ನು ಗಾಯತ್ರಿಯಲ್ಲಿ ಪ್ರಾರ್ಥಿಸಲಾಗಿದೆ. ಈ ಸದ್ಬುದ್ಧಿಯ ಮಹತ್ತ್ವವನ್ನು 'ನಃ' ಶಬ್ದದಲ್ಲಿ ಸ್ಪಷ್ಟಗೊಳಿಸಲಾಗಿದೆ.

**"ಪ್ರಚೋದಯಾತ್"** : ಇದೊಂದು ಕ್ರಿಯಾಪದ ರೂಪ. **'ಚೋದ್–ಪ್ರೇರಣೆ'** ಎಂಬ ಧಾತುವಿನಿಂದ ಬಂದ ರೂಪ. ಅಂದರೆ ತೀವ್ರವಾಗಿ ಪ್ರೇರಿಸು, ಚೋದಿಸು, ಹುರುಪುಗೊಳಿಸು, ಉತ್ಸಾಹಗೊಳಿಸು, ಜೋಡಿಸು, ಅಭಿವೃದ್ಧಿಪಡಿಸು ಎಂಬರ್ಥವನ್ನು ಈ ಪದ ಕೊಡುತ್ತದೆ. ಪ್ರಾರ್ಥನಾರೂಪವಾದ ಕ್ರಿಯೆಯನ್ನು ಇದು ಸೂಚಿಸುತ್ತದೆ. ನಿಜವಾದ ಪ್ರೇರಣೆ, ಪ್ರಚೋದನೆ, ಪರಮಾತ್ಮನಿಂದಲೇ ಸಾಧ್ಯ. ಸದ್ಬುದ್ಧಿಯನ್ನು ಪರಮಾತ್ಮನು ಪ್ರೇರಣೆ ಮಾಡಿದಾಗ ಮಾತ್ರ ಪ್ರಕಾಶಗೊಳ್ಳುವುದು. ಆದ್ದರಿಂದ ನಮಗೆ ಸದ್ಬುದ್ಧಿಯನ್ನು ಪ್ರೇರಿಸು ಎಂದು ಅವನಲ್ಲೇ ಮೊರೆಹೋಗಬೇಕು. ಇದೇ ಈ ಮಂತ್ರದ ರಹಸ್ಯ. ಇಹದಲ್ಲಿ ಏಳಿಗೆಗೆ, ಪರದಲ್ಲಿ ಇವುಗಳನ್ನು ಗಳಿಸಲು ಮಂಗಳಕರ್ಮಗಳಲ್ಲಿ ತೊಡಗಿಸಲು, ಪ್ರೇರಣೆ ಮಾಡಲಿ ಎಂಬುದು ಇದರ ಅರ್ಥವೆಂದು ವಿದ್ವಾಂಸರ ಮತ. ಧರ್ಮ–ಅರ್ಥ–ಕಾಮ–ಮೋಕ್ಷದ ಕಡೆಗೆ ಹೋಗಲು ಪ್ರೇರಣೆ ಹಾಗೂ ಕೆಟ್ಟಕೆಲಸಗಳಿಂದ ದೂರವಿರುವುದು ಎಂದಾಗುವುದು. ಯಾವುದಕ್ಕೆ ಪ್ರೇರಣೆ ಎಂದರೆ ಹಿಂದಿನ 'ಧಿಯೋ ಯೋ ನಃ' ಪದದಲ್ಲಿ ತಿಳಿಸಿರುವಂತೆ ಸರ್ವತ್ರ ವ್ಯಾಪಕವಾಗಿದ್ದ 'ನಾನು' ಎಂಬ ಬುದ್ಧಿವೃತ್ತಿಯು ಪರಬ್ರಹ್ಮನಲ್ಲಿ ಲೀನವಾಗಿ ಬ್ರಹ್ಮಸಾಕ್ಷಾತ್ಕಾರ ಉಂಟಾಗುವುದಕ್ಕೂ, ವಿರಾಟ್ ಸ್ವರೂಪದಲ್ಲಿದ್ದ ಸಕಲ ಶಕ್ತಿಗಳು ಬೀಜರೂಪವಾಗಿ ಪರಬ್ರಹ್ಮಸ್ಥಿತಿಯನ್ನು ಪಡೆಯುವುದಕ್ಕೂ ಜೀವ ಚೈತನ್ಯ ಪರಬ್ರಹ್ಮವಾಗುವುದಕ್ಕೂ ಪ್ರೇರಣೆಯಾಗಬೇಕಾಗಿರುವುದು. ಗಾಯತ್ರಿಯ ಮೂಲಕ ಆ ಸವಿತನ, ವರೇಣ್ಯನ, ಭರ್ಗನ, ದೇವನ ಧ್ಯಾನ ಮಾಡಲಾಗುವುದು. ಇದು ಪರಮಾತ್ಮನಲ್ಲಿ ಸದ್–ಬುದ್ಧಿಯನ್ನು ಬೇಡುವ ಉದ್ದೇಶದಿಂದ. ಅಂದರೆ ಇದು ದೀನ–ಹೀನ ರೀತಿಯಿಂದಲ್ಲ. ವೈದಿಕ ಸಂಸ್ಕೃತಿಗನುಸಾರವಾಗಿ, ಆತ್ಮಗೌರವಯುಕ್ತವಾದ ಭಾವನೆಯಿಂದ ಮಾಡಲಾಗುತ್ತದೆ. ದೈನ್ಯಭಾವದಿಂದ ಭಿಕ್ಷೆ ಬೇಡುವುದು ಭಾರತ ಸಂಸ್ಕೃತಿಗೆ ಹೊಂದಿಕೊಳ್ಳುವುದಿಲ್ಲ.

ಇಲ್ಲಿ ಉಪಾಸಕನಿಗೆ ಪರಮಾತ್ಮನು ತನ್ನ ವರಪ್ರಸಾದದ ಮೂಲಕ ಹೊರಗಿನಿಂದ ತುಂಬಬೇಕಾದ ಅಂಶವೇನೂ ಇಲ್ಲ; ಅವನ ಅಜ್ಞಾನದ

ನಾಶವು ನಿಜಜ್ಞಾನದ ಅರಿವೇ. ತಾನು ಪರಮಾತ್ಮನೆಂಬ ಮುಕ್ತಿಸ್ಥಿತಿಯೇ ಸಾಕು. ನಮ್ಮಲ್ಲಿಲ್ಲದ ಬೆಂಕಿಗೆ ಹೊರಗಿನಿಂದ ಎಷ್ಟು ಗಾಳಿ ಊದಿದರೂ ಅದರಿಂದ ಬೆಂಕಿ ಪ್ರಜ್ವಲಿಸುವುದಿಲ್ಲ. ಆದರೆ ಬೂದಿ ಮುಚ್ಚಿದ ಕಿಡಿಗೆ ಬೂದಿಯ ಬಂಧನದಿಂದ ಬಿಡುಗಡೆಯಾದಲ್ಲಿ ಅದು ಪುನಃ ಪ್ರಜ್ವಲಿಸುವುದು. ಇಲ್ಲಿ ನಡೆಯಬೇಕಾದುದು ಈ ಪ್ರಚೋದನೆ ಮಾತ್ರ.

ಪರಮಾತ್ಮನು ನಮ್ಮ ಬುದ್ಧಿಗೆ ಎಂತಹ ಪ್ರೇರಣೆ ನೀಡಬೇಕೆಂದರೆ ಆದರಿಂದ ಉತ್ಸಾಹಗೊಂಡವರಾಗಿ ನಾವು ನಮ್ಮ ಅಂತಃಕರಣವನ್ನು ನಿರ್ಮಾಣ ಮಾಡುವ ಕಾರ್ಯದಲ್ಲಿ ತೊಡಗುವಂತಾಗಬೇಕು ; ಅದರ ಸ್ಥಾನದಲ್ಲಿ ಸುಬುದ್ಧಿಯನ್ನು ಸ್ಥಾಪಿಸುವ ಪುರುಷಾರ್ಥವನ್ನು ಪ್ರದರ್ಶಿಸುವಂತಾಗಬೇಕು. ಭಾರತೀಯ ಸಂಸ್ಕೃತಿ ಕರ್ಮ ಸಂಸ್ಕೃತಿಯಾಗಿದೆ. ಅದರಲ್ಲಿ ಪುರುಷಾರ್ಥ, ಪ್ರಯತ್ನ, ಸಂಘರ್ಷ, ಶ್ರಮಮಾಡಿ ಅಭೀಷ್ಟವಸ್ತುಗಳನ್ನು ಪಡೆಯುವ ಆದೇಶವಿದೆ. ಈಶ್ವರನಲ್ಲಿ ಮಾಡುವ ಪ್ರಾರ್ಥನೆಗಳಲ್ಲಿ ಆತನ ಆಶೀರ್ವಾದ, ಮಾರ್ಗದರ್ಶನ, ನೇತೃತ್ವವನ್ನು ಬೇಡಲಾಗುತ್ತದೆ. ಬಾಲಕನು ಪರೀಕ್ಷೆಗೆ ಹೋಗುವ ಸಮಯದಲ್ಲಿ ಹಿರಿಯರಿಂದ ಆಶೀರ್ವಾದ ಪಡೆಯುತ್ತಾನೆ. ಹಾಗೆ ಆಶೀರ್ವಾದವನ್ನು ಹೊಂದುವುದರಿಂದ ಆ ವಿದ್ಯಾರ್ಥಿಯ ಉತ್ಸಾಹ ಇಮ್ಮಡಿಯಾಗುತ್ತದೆ. ಆಶೀರ್ವಾದದ ಶಕ್ತಿಮಾತ್ರದಿಂದಲೇ ತಾನು ಉತ್ತೀರ್ಣನಾಗುವೆನೆಂದು ಆಸೆ ಇಟ್ಟುಕೊಂಡರೆ ತಾನು ಸ್ವತಃ ಏನೂ ಪ್ರಯತ್ನ ಮಾಡದಿದ್ದರೆ, ಅದು ಅನುಚಿತ ಆಸೆ ಎನಿಸುವುದು.

ಸವಿತಾದೇವ ಪ್ರೇರಣೆ ಮಾಡಿ ಆನಂದ ನೀಡುವ ಆ ಪರಮಾತ್ಮನನ್ನೇ ಈ ಗಾಯತ್ರೀ ಮಂತ್ರದ ಮೂಲಕ ಸಾಧನೆ ಮಾಡುವ ಸಾಧಕನು ಕರೆಯುತ್ತಾನೆ. ಯಾವ ಸವಿತಾ ಶಕ್ತಿಯು ಇಡೀ ಸೃಷ್ಟಿಯನ್ನು ರಚಿಸಿದೆಯೋ, ಸಕಲ ಜ್ಞಾನ–ವಿಜ್ಞಾನದ ನಿರ್ಮಾಣ ಮಾಡಿದೆಯೋ, ಆ ಸವಿತೃ ದೇವನನ್ನೇ ಈ ಮಂತ್ರದಲ್ಲಿ ಆಹ್ವಾನಿಸಲಾಗಿದೆ. ಇದರಿಂದ ಗಾಯತ್ರೀ ಪರಮಾತ್ಮನು ತನ್ನ ಸವಿತಾ ಶಕ್ತಿಯಿಂದ ಸೂರ್ಯ, ಚಂದ್ರ, ವಾಯು ಮೊದಲಾದುವುಗಳನ್ನು ಯಾವ ರೀತಿ ಪ್ರೇರಿಸುತ್ತಾನೆಯೋ ಅದೇ ರೀತಿಯಾಗಿ ಮನುಷ್ಯನ ಮನದಲ್ಲಿಯೂ ಅಂತಹುದೇ ಸವಿತಾಶಕ್ತಿ ಇದೆ ಎಂಬುದನ್ನು ಮರೆಯಬಾರದು. ಸವಿತಾ ಜೀವನದ ಮೂಲಶಕ್ತಿ–ಪ್ರಾಣವಾಗಿದೆ. ಸವಿತೃ ಅದರ ವಿಸ್ತಾರವಾಗಿದೆ. ಮಾನವನು ಸವಿತಾ ದೇವನೊಡನೆ ಸಂಬಂಧವನ್ನು ಸ್ಥಾಪಿಸಿದನೆಂದಾದರೆ ಆವನು ಜೀವನದ ಪೂರ್ಣಲಾಭವನ್ನು

ಪಡೆಯಬಲ್ಲನು.

ಗಾಯತ್ರೀ ಮಂತ್ರದಲ್ಲಿ ಪರಮಾತ್ಮನನ್ನು ಪ್ರಾರ್ಥನೆ ಮಾಡುವುದು ಸದ್ಬುದ್ಧಿಗಾಗಿ ಅಲ್ಲ, ಅದರ ಪ್ರೇರಣೆಗಾಗಿ. ಇಲ್ಲಿ ನಮ್ಮ ಪ್ರಯತ್ನವೂ ಇದೆ. ಮನುಷ್ಯನು ಪ್ರಯತ್ನಮಾಡಿ ಪರಮಾತ್ಮನ ಅನುಗ್ರಹ ಪಡೆಯಬೇಕೆಂಬ ಸಂಕೇತ ಇದರಲ್ಲಿದೆ. ಮನಸ್ಸಾದರೋ ಪ್ರಾಕೃತ ಪದಾರ್ಥ. ಈ ಕುರುಡು ಪ್ರಕೃತಿ ನಮ್ಮನ್ನು ಎಲ್ಲಿಗೆ ಕರೆದೊಯ್ಯುವುದೋ ಗೊತ್ತಿಲ್ಲ. ಈ ಮನಸ್ಸು ಬಹಳ ಶಕ್ತಿಶಾಲಿ. ಇದನ್ನು ಶುಭ ಪ್ರೇರಣೆ ನೀಡುವ ಆನಂದದಾಯಕ ಪರಮಾತ್ಮನೊಡನೆ ಕೂಡಿಸಿದಾಗ ಅಲ್ಲಿಂದ ಶುಭ ಪ್ರೇರಣೆ ನಡೆಯುವುದು. ಅಲ್ಲೀದಲೇ ದಿವ್ಯಪ್ರಕಾಶವು ಲಭಿಸುವುದು ; ಅಲ್ಲಿಂದಲೇ ಬುದ್ಧಿ ಹಾಗೂ ಕರ್ಮಗಳು ಒಂದಾಗಿ ಜೀವನದಲ್ಲಿ ಮಾಧುರ್ಯವನ್ನು ತರುವುವು. ಗಾಯತ್ರಿಯನ್ನು ಪ್ರಾರ್ಥಿಸುವುದು ಧನಕನಕಾದಿ ಯಾವ ಲೌಕಿಕ ಭಾಗ್ಯ ಬೇಡಲಿಕ್ಕಲ್ಲ. ನಮ್ಮ ನಿಷ್ಕಾಮ, ನಿರ್ವಿಷಯಕ, ಜ್ಞಾನಶಕ್ತಿಯನ್ನು ಪ್ರಚೋದಿಸಲಿಕ್ಕಾಗಿ. ನಮ್ಮ ಜ್ಞಾನದೇವತೆ ನಮಗೆ ಮಾಡಬೇಕಾದ ಉಪಕಾರ ನಮ್ಮ 'ಧೀಃ' ಶಕ್ತಿಯ ಪ್ರೇರಣೆ. ನಮ್ಮ ಬುದ್ಧಿಯನ್ನು ಎಲ್ಲಾ ಪವಿತ್ರ ಕರ್ಮಗಳಲ್ಲಿ ಪ್ರವೀಣರನ್ನಾಗಿಯೂ, ದುಷ್ಕರ್ಮಗಳಿಂದ ವಿಮುಖರನ್ನಾಗಿಯೂ ಮಾಡಲಿ, ನಮ್ಮ ಅಂತಃಕರಣಗಳನ್ನು ಪ್ರಕಾಶಗೊಳಿಸಲಿ ಎಂಬುದು ಇದರ ಸಂಕೇತ (ತೈತ್ತಿರೀಯ ಸಂಧ್ಯಾಭಾಷ್ಯ). ಪರಬ್ರಹ್ಮನನ್ನು ತಿಳಿಯಲು ಶಕ್ತಿಯನ್ನು ದಯಪಾಲಿಸಲಿ ಎಂಬ ಪ್ರಾರ್ಥನೆ ಇದಾಗಿದೆ. 'ಪ್ರಚೋದಯಾತ್' ಪದವು ಆತ್ಮಸಾಕ್ಷಾತ್ಕಾರ ಸ್ವರೂಪವಾದ ನಿರ್ವಿಕಲ್ಪ ಸಮಾಧಿ ಎನಿಸುವ ಜೀವನ್ಮುಕ್ತಿ, ವಿದೇಹ ಮುಕ್ತಿಗಳೆರಡರ ತತ್ತ್ವಗಳೆರಡನ್ನೂ ಒಳಗೊಂಡಿರುವುದು. 'ತತ್' ಪದದಲ್ಲಿನ 'ತ್' ಎಂಬ ಅರ್ಧಾಕ್ಷರವು ಜಗತ್ತಿನ ರೂಪವಾದ ಬೀಜ. ಬೀಜದಲ್ಲಿ ವೃಕ್ಷದ ಸಾರವೆಲ್ಲಾ ಅಡಗಿರುವಂತೆ ಅರ್ಧಾಕ್ಷರವಾದ 'ತ್' ಎಂಬುದರಲ್ಲಿ ಪ್ರಪಂಚವೆಲ್ಲಾ ಬೀಜರೂಪವಾಗಿರುವುದು. ಬೀಜವು ಮೊಳಕೆಯಾಗಿ ಹೇಗೆ ವೃಕ್ಷವಾಗುವುದೋ ಹಾಗೆ 'ತ್' ಎಂಬ ಅರ್ಧಾಕ್ಷರ ತತ್ತ್ವವಾದ ಪರಬ್ರಹ್ಮಶಕ್ತಿಯು ಜಗದ್ರೂಪವಾಗಿ ಆಗುವುದು. ವೃಕ್ಷದ ಸಾರವನ್ನೆಲ್ಲಾ ಅಡಗಿಸಿಕೊಂಡು ಪುನಃ ಬೀಜರೂಪಕ್ಕೆ ಬರುವಂತೆ ಪರಾಶಕ್ತಿಯು ಜಗದ್ರೂಪವನ್ನೆಲ್ಲ ಅಡಗಿಸಿಕೊಂಡು, ಉಪಸಂಹರಿಸಿಕೊಂಡು, ಬೀಜರೂಪಕ್ಕೆ ಬರುವುದು. ಇದಕ್ಕನುಸಾರವಾಗಿಯೇ ಮಂತ್ರದ ಪ್ರಥಮದಲ್ಲಿ 'ತತ್' ಶಬ್ದವೂ, ಮಂತ್ರಾಂತ್ಯವಾದ 'ಪ್ರಚೋದಯಾತ್' ಎಂಬ

ಪದದ ಕೊನೆಯಲ್ಲಿ 'ತ್' ಎಂಬ ಅರ್ಧಾಕ್ಷರವೂ ಇರುವುದು. ಮಂತ್ರದ 'ತತ್' ಪದದಲ್ಲಿನ 'ತ್' ಅರ್ಧಾಕ್ಷರ ತತ್ತ್ವವಾದ ಪರಾಶಕ್ತಿಯು ಸೃಷ್ಟಿ, ಸ್ಥಿತಿ, ಲಯರೂಪವಾಗಿಲಂಬಿಸುವುದೇ 'ಸವಿತುಃ' ಪದದ ಪ್ರಾರಂಭದಾರಭ್ಯ ಮಂತ್ರಾಂತ್ಯದವರೆಗೆ ಇರುವ ಬೀಜಾಕ್ಷರಗಳ ರೂಪವಾಗಿ ಮಂತ್ರಾಂತ್ಯದಲ್ಲಿ ಅರ್ಧಾಕ್ಷರವಾದ 'ತ್' ಇರುವುದಾಗಿದೆ. ಅಂದರೆ 'ತತ್' ಎಂಬ ಪದದ ತತ್ತ್ವವೇ ಮಂತ್ರದ ಅನೇಕ ಪದಗಳ ತತ್ತ್ವವಾಗಿದೆ ; ಅಂದರೆ ಒಂದನೇ ಸಂಖ್ಯೆಯಿಂದ ಇಪ್ಪತ್ತನಾಲ್ಕು ಸಂಖ್ಯೆಯವರೆಗೂ ಲಂಬಿಸಿ ನಿಂತಿದೆ. ಈ ತತ್ತ್ವವೇ ಪರಬ್ರಹ್ಮವು. ಪ್ರಪಂಚರೂಪವಾಗಿ ವಿರಾಟ ಸ್ಥಿತಿಯಲ್ಲಿರುವುವಾಗಿದೆ. ಮಂತ್ರಾಂತ್ಯದಲ್ಲಿರುವ ಅರ್ಧಾಕ್ಷರವಾದ 'ತ್' ಎಂಬುದು ಲಂಬಿಸಿರುವ ಪದಗಳ ತತ್ತ್ವಗಳನ್ನೆಲ್ಲಾ ವೃಕ್ಷವು ಬೀಜರೂಪಕ್ಕೆ ಬರುವಂತೆ ನುಂಗಿಕೊಂಡು 'ತ್' ಅಕ್ಷರದ ಜೊತೆಯಲ್ಲಿ ನಿಲ್ಲುವುದೇ ಪರಬ್ರಹ್ಮ ಒಂದೇ ಇದ್ದ ಸ್ಥಿತಿಯಾಗಿರುವುದು.

'ತ್' ಎಂಬ ಅರ್ಧಾಕ್ಷರವು ಲಯಕಾಲದಲ್ಲಿ 'ತ'ಕಾರದೊಡಗೂಡಿ 'ತತ್' ಎಂಬ ಪದ ಉಳಿದಾಗ ಅಚ್ಯುತನೆನಿಸುವುದು. ಒಂದರಿಂದ ಇಪ್ಪತ್ತನಾಲ್ಕು ಸಂಖ್ಯೆಯವರೆಗೆ ಲಂಬಿಸಿರುವ ಪದಗಳ ಸರ್ವತತ್ತ್ವಗಳನ್ನೂ 'ತ್' ಎಂಬ ಅರ್ಧಾಕ್ಷರವು ತನ್ನೊಳಗೆ ತಿರೋಭೂತವಾಗಿ, ಬೀಜರೂಪವಾಗಿ, ಅಡಗಿಸಿಕೊಂಡು ತಾನೊಂದೇ 'ತ'ಕಾರದ ಜೊತೆಯಲ್ಲಿದ್ದು ಮುಂದಿನ ಪದಗಳು ಯಾವುವೂ ಇಲ್ಲದ ಕಾಲವೇ 'ಅಚ್ಯುತಸ್ಥಿತಿ'ಯಾಗಿರುವುದು.

'ತತ್' ಪ್ರತಿಪಾದ್ಯವಾದ ಪರಾತ್ಪರ ವಸ್ತುವು ಬ್ರಹ್ಮ, ವಿಷ್ಣು, ರುದ್ರ ಮುಂತಾದ ಯಾವಯಾವ ದೇವತಾಶಕ್ತಿಗಳ ರೂಪವಾಗಿ ಸೃಷ್ಟಿ, ಸ್ಥಿತಿ, ಲಯಗಳಲ್ಲಿ ಕಾರ್ಯ ನಡೆಸಿದರೂ ಗಾಯತ್ರೀ ಮಂತ್ರದ ತತ್ತ್ವಕ್ರಮವನ್ನೇ ಅನುಸರಿಸಬೇಕು. ಇದರಂತೆ ಸರಸ್ವತೀ ತತ್ತ್ವವಾದ ನಾದಬ್ರಹ್ಮದ ಕಾರ್ಯವೂ, ಸಾವಿತ್ರೀ ತತ್ತ್ವವಾದ ತೇಜಸ್ಸಿನ ಕಾರ್ಯವೂ, ಲಕ್ಷ್ಮೀ ತತ್ತ್ವವಾದ ಆನಂದದ ಕಾರ್ಯಕ್ರಮಗಳೂ ಗಾಯತ್ರೀ ಮಂತ್ರದ ತತ್ತ್ವವಾದ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಕ್ರಮದ ಆಧಾರವನ್ನು ಅನುಸರಿಸಿಯೇ ನಡೆಯುವುದು. ಸರ್ವದೇವತಾ ಕಾರ್ಯಕ್ರಮಗಳಿಗೂ ಗಾಯತ್ರೀ ಮಂತ್ರವೇ ಮೂಲಾಧಾರವಾಗಿರುವುದು.

ಗುರುಜನರಿಂದ ಇಲ್ಲವೇ ಭಗವಂತನಿಂದ ಆಶೀರ್ವಾದ ಬೇಡುವುದು ಉಚಿತ ; ಏಕೆಂದರೆ ಅವರ ಅಂತಃಕರಣವು ಯಾವಾಗಲೂ ಸತ್ತ್ವಯುಕ್ತ

ಮಾಡುವವರ ಕಡೆಗೆ ತಾನಾಗಿ ಹರಿಯುತ್ತಿರುತ್ತದೆ. ನಾವು ಸನ್ಮಾರ್ಗ ಪ್ರವೃತ್ತರಾದಂತೆಲ್ಲಾ ಆ ಆಶೀರ್ವಾದವೂ ಬಲಸಹಿತವಾಗಿ ನಮ್ಮೊಂದಿಗೆ ಸೇರಿಕೊಳ್ಳುತ್ತದೆ.

ಯಾವುದಾದರೊಂದು ಪದಾರ್ಥವನ್ನು ಶ್ರದ್ಧಾಪೂರ್ವಕವಾಗಿ ನಮ್ಮೊಳಗೆ ಅಭಿಮಂತ್ರಿಸಿಕೊಳ್ಳುವುದು, ನಮ್ಮ ಅಂತರ್ಯದಲ್ಲಿ ಸ್ಥಾಪಿಸಿಕೊಳ್ಳುವುದು ಮತ್ತು ನಮ್ಮ ವೃತ್ತಿಗಳು ಆ ಕಡೆಗೆ ಹರಿಯುವಂತೆ ಮಾಡುವುದು ಪ್ರಾರ್ಥನೆಯ ಅರ್ಥವಾಗಿದೆ. ನಾವು ನಮ್ಮ ಆಂತರಿಕ ಸ್ಥಿತಿಯನ್ನು ಯಾವ ರೀತಿಯಲ್ಲಿ ಮಾರ್ಪಡಿಸಿಕೊಳ್ಳಬೇಕೆಂದರೆ, ಅದರಿಂದ ನಮ್ಮ ಇಚ್ಛಾಪೂರ್ತಿಗೆ ತಕ್ಕ ವಿಚಾರವೂ, ಕಾರ್ಯಕ್ಕೆ ತಕ್ಕ ಸಮುಚಿತ ಭೂಮಿಯೂ ತಯಾರಾಗಬೇಕು. ದಿವ್ಯಶಕ್ತಿಗಳು ನಮಗೆ ಆಶೀರ್ವಾದ-ಪ್ರೇರಣೆ-ಪ್ರೋತ್ಸಾಹಗಳನ್ನು ಕೊಡುತ್ತವೆ. ಈ ಸೂಕ್ಷ್ಮದಾನವು ನಮ್ಮ ಅಂತಃಪ್ರವೃತ್ತಿಗಳನ್ನು ಮಾರ್ಪಡಿಸುವುದರಲ್ಲಿ ಸಹಾಯಕವಾಗುತ್ತದೆ. ವಿಶ್ವಾಸವೆಂಬ ಬೀಜವು ಯಾವ ದಿಕ್ಕಿನಲ್ಲಿ ಹೊರಳುವುದೋ ಆ ದಿಕ್ಕಿನಲ್ಲಿಯೇ ಮನಸ್ಸಿನ ಅನ್ಯ ವೃತ್ತಿಗಳೂ ಹೊರಳುವವೆಂಬುದು ಸಾಧಾರಣ ಸಿದ್ಧಾಂತವಾಗಿದೆ. ಪ್ರಾರ್ಥನೆಯು ಮನೋವಿಜ್ಞಾನ ಸಮ್ಮತವಾದ ಒಂದು ಧಾರ್ಮಿಕ ಕ್ರಿಯೆಯಾಗಿದೆ. ಅದು ನಮ್ಮ ಮನೋಭೂಮಿಕೆಯನ್ನು ಫಲವತ್ತಾಗಿಸುವುದೆಂದರೆ ಅದರಲ್ಲಿ ನಮ್ಮ ಮನೋವಾಂಛಿತ ಸ್ಥಿತಿಯು ಚೆನ್ನಾಗಿ ಅಂಕುರಿಸಿ ಹೂಹಣ್ಣು ಬಿಡಬಲ್ಲುದು.

ಗಾಯತ್ರೀ ಮಂತ್ರದಲ್ಲಿ 'ಪ್ರಚೋದಯಾತ್' ಶಬ್ದವು ಬಹು ವೈಭವಯುತವಾಗಿದೆ. ಅದರಲ್ಲಿ ಆತ್ಮನ ಗೌರವವನ್ನು ಪರಿಪೂರ್ಣವಾಗಿ ರಕ್ಷಿಸಲಾಗಿದೆ. ಆತ್ಮನು ಶಕ್ತಿಯ ಭಂಡಾರವಾಗಿರುವನು. ಯಾವುವುಗಳ ಸಹಾಯದಿಂದ ನಾವು ಮನಸ್ಸಿನ ಸ್ಥಿತಿಗಳನ್ನು ಪ್ರಾಪ್ತಮಾಡಿಕೊಳ್ಳಬಲ್ಲೆವೋ ಆ ಎಲ್ಲಾ ತತ್ವಗಳೂ ಆತ್ಮನಲ್ಲಿ ಉಪಸ್ಥಿತವಾಗಿವೆ. ಗಾಯತ್ರಿಯಲ್ಲಿ ಪ್ರಾರ್ಥಿಸುವ ಸದ್ಬುದ್ಧಿಯ ಪ್ರೇರಣೆಗಾಗಿ ಸಂಯಮ-ವ್ರತ-ಉಪವಾಸ ಜಪ-ತಪ-ಸ್ವಾಧ್ಯಾಯ-ಸತ್ಸಂಗ-ಸೇವೆ ಮೊದಲಾದ ಸತ್ಕರ್ಮಗಳ ಆಶ್ರಯವನ್ನು ಪಡೆಯಬೇಕಾಗುವುದು. ಆದರೆ ಅದಕ್ಕೆ ಪ್ರೇರಣೆಯು ಈಶ್ವರನಿಂದಲೇ ಪ್ರಾಪ್ತವಾಗಬೇಕು. ಆ ಅಂತಃಪ್ರೇರಣೆಯಾಗದಿದ್ದರೆ ಮೇಲೆ ಹೇಳಿದ ಕರ್ಮಕಾಂಡವೆಲ್ಲ ನಿರರ್ಥಕವೇ ಸರಿ. ಆತ್ಮದರ್ಶನ-ಬ್ರಹ್ಮಪ್ರಾಪ್ತಿಯೆಂಬ ದೈವೀವರದಾನಕ್ಕಾಗಿ ಯಾವ ಅಂತಃಪ್ರೇರಣೆಯು ಅವಶ್ಯ

ಕತೆಯಿದೆಯೋ ಅದಕ್ಕೆಂದೇ ಪರಮಾತ್ಮನಲ್ಲಿ ಯಾಚನೆಯನ್ನು ಮಾಡಲಾಗಿದೆ. 'ಪ್ರಚೋದಯಾತ್' ಶಬ್ದವು ಈ ಪ್ರೇರಣೆಯ ಬೋಧಕವಾಗಿದೆ.

ಗಾಯತ್ರೀಮಂತ್ರದ ಮೊದಲನೆಯ ಅಕ್ಷರವಾದ 'ತ'ವನ್ನು ಮತ್ತು ಈ ಮಂತ್ರದ ಕೊನೆಯ ಅಕ್ಷರ 'ಯಾತ್' ಎಂಬುದರಲ್ಲಿ 'ತ್' ಎಂಬುದನ್ನು ಸೇರಿಸಿದರೆ 'ತತ್' ಎಂದಾಗುತ್ತದೆ. ಅಂದರೆ ಅಚ್ಯುತ, ನಾಶವಿಲ್ಲದಿರುವುದು ಎಂದರ್ಥ. ಪರಬ್ರಹ್ಮ-ಪ್ರಪಂಚದ ಸೃಷ್ಟಿ-ಸ್ಥಿತಿಗಳಿಲ್ಲದ ಕಾಲದಲ್ಲಿ ತಚ್ಛಬ್ದವಾಚ್ಯನಾದ ಪರಬ್ರಹ್ಮ ಒಂದೇ ಇರುವುದೆಂಬುದನ್ನು ಇದು ಪ್ರತಿಪಾದಿಸುತ್ತದೆ.

ಮೊದಲನೇ ವರ್ಣವನ್ನು ಬಿಟ್ಟು ಎರಡನೇ ಅಕ್ಷರ 'ಸ'ವನ್ನೂ ಕೊನೆಯ ಅರ್ಧಾಕ್ಷರವನ್ನೂ ಸೇರಿಸಿದರೆ 'ಸತ್' ಎಂದಾಗುವುದು. ಇದರ ಅರ್ಥ ಸದ್ರೂಪ ಅಥವಾ ಇರುವುದು ಎಂದು. ಈ 'ಸತ್' ಪದವನ್ನೂ ಮಂತ್ರದ ಪ್ರಥಮ ಪದವಾದ 'ತತ್' ಪದದೊಡನೆ ಸೇರಿಸಿದರೆ 'ತತ್‌ಸತ್' ಎಂದಾಗಿ ಅದು 'ಸದ್ರೂಪ'ವೆಂದರ್ಥವಾಗುವುದು. ಅಲ್ಲದೆ ಮಂಗಳಕರವಾದ 'ಓಂ' ಕಾರವನ್ನೂ ಈ 'ತತ್ಸತ್' ಜೊತೆಗೆ ಸೇರಿಸಿದರೆ 'ಓಂ ತತ್ಸತ್' ಎಂದಾಗುವುದು. 'ಸವಿತುಃ' ಪದದಲ್ಲಿನ (ಗಾಯತ್ರೀಮಂತ್ರದ ಮೂರನೇ ವರ್ಣ) 'ವಿ' ಅಕ್ಷರದಿಂದ ಮಂತ್ರಾಂತ್ಯದಲ್ಲಿರುವ ಅರ್ಧಾಕ್ಷರವನ್ನೂ ಅಂದರೆ 'ತ್' ಅನ್ನೂ ಸೇರಿಸಿದರೆ 'ವಿತ್' ಎಂದಾಗುವುದು. 'ವಿತ್' ಎಂದರೆ ಚೈತನ್ಯ ಎಂದರ್ಥ. 'ವಿತ್', 'ಚಿತ್' ಇವೆರಡೂ ಒಂದೇ–ಎಂದರೆ 'ಜ್ಞಾನ'ವೆಂದರ್ಥ. ಆದುದರಿಂದ ವೇದಜನನಿಯಾದ ಗಾಯತ್ರೀದೇವಿಯ ಮಂತ್ರದಲ್ಲಿ 'ತತ್' 'ಸತ್' 'ಚಿತ್' ಎಂಬಿವುಗಳನ್ನು ಪ್ರತಿಪಾದಿಸುವ ಮತ್ತು 'ಓಂ ತತ್ಸತ್' ಎಂಬುದು ಗಾಯತ್ರೀದೇವಿಯ ಮಂತ್ರವಾಗಿರುವುದು ಎಂತಹ ಪ್ರತ್ಯಕ್ಷ ತತ್ತ್ವವಾಗಿರುವುದೆಂಬುದನ್ನು ವಾಚಕರು ಮನಗಾಣಬಹುದು.

ಗಾಯತ್ರೀ ಮಹಾಮಂತ್ರದ ಸ್ಥಾನಸ್ಥಾನಗಳಲ್ಲಿ ಪದಪದಗಳಲ್ಲಿ ಮತ್ತು ವರ್ಣವರ್ಣಗಳಲ್ಲಿ ತನ್ನೊಳಗೆ ರಹಸ್ಯವನ್ನು ತುಂಬಿಕೊಂಡಿರುವ ಅನಂತ ಉಪದೇಶಗಳ ಸಮೂಹ ಅಡಗಿದೆ. ವಿಭಿನ್ನ ಋಷಿಗಳು ಹಾಗೂ ಅನೇಕ ವಿದ್ವಾಂಸರೂ ತಮ್ಮತಮ್ಮ ದೃಷ್ಟಿಕೋನಕ್ಕನುಸಾರವಾಗಿ ಈ ಮಂತ್ರಕ್ಕೆ ವ್ಯಾಖ್ಯಾನಮಾಡಿದ್ದಾರೆ; ಭಾಷ್ಯಗಳನ್ನು ಬರೆದಿದ್ದಾರೆ. ಈ ವಿಭಿನ್ನತೆ, ಪ್ರತಿಕೂಲತೆಗಳು ವಿರೋಧಾತ್ಮಕವಾಗಿಲ್ಲದೆ ಒಂದು ಮತ್ತೊಂದಕ್ಕೆ ಪೂರಕವಾಗಿವೆ. ಒಂದರಲ್ಲಿ ಬಿಟ್ಟುಹೋಗಿರುವ ವಿಷಯ ಮತ್ತೊಂದರಲ್ಲಿ

ಹೇಳಲ್ಪಟ್ಟಿದೆ. ಒಟ್ಟು ಎಲ್ಲವನ್ನು ಸೇರಿಸಿದಾಗ್ಯೂ ಕೂಡ ಗಾಯತ್ರೀ ತತ್ತ್ವಾರ್ಥ ಪೂರ್ಣವಾಯಿತೆಂದು ಹೇಳಲಾಗುವುದಿಲ್ಲ. ಆದ್ದರಿಂದಲೇ ಗಾಯತ್ರೀ ಮಂತ್ರವು ಸಂಧ್ಯಾವಂದನೆಯಲ್ಲಿ ಮಾತ್ರವಲ್ಲದೆ ಸಕಲ ವೈದಿಕ ಕರ್ಮಗಳಲ್ಲಿಯೂ ಬರುತ್ತದೆ. ಆದ್ದರಿಂದ ಗಾಯತ್ರಿಯ ವ್ಯಾಪಕತೆಯು ವಿಸ್ತೃತವಾದುದು ಎಂದು ತಿಳಿದುಬರುತ್ತದೆ.

### ಶ್ರೀ ಗಾಯತ್ರೀ ಹತ್ತು ಪದಗಳ ನಿಯಾಮಕ ದೇವತೆಗಳು

| | |
|---|---|
| ೧ ತತ್–ಅನಿರುದ್ಧ | ೬ ಧೀಮಹಿ–ತೈಜಸ |
| ೨ ಸವಿತುಃ–ಪ್ರದ್ಯುಮ್ನ | ೭ ಧಿಯೋ–ತುರೀಯ |
| ೩ ವರೇಣ್ಯಂ–ಸಂಕರ್ಷಣ | ೮ ಯೋ–ಪ್ರಜ್ಞಾ |
| ೪ ಭರ್ಗೋ–ವಾಸುದೇವ | ೯ ನಃ–ಪುರುಷೋತ್ತಮ |
| ೫ ದೇವಸ್ಯ–ವಿಷ್ಣು | ೧೦ ಪ್ರಚೋದಯಾತ್–ನಾರಾಯಣ |

ಎಲ್ಲಿ ಸುಮತಿಗಳಿಹರೋ ಅಲ್ಲಿ ಸಂಪತ್ತು ।
ಎಲ್ಲಿ ಕುಮತಿಗಳಿಹರೋ ಅಲ್ಲಿ ವಿಪತ್ತು ॥

## ವರ್ಣ ವಿವರಣೆ

ಪರಾಶಕ್ತಿಯು ವ್ಯಕ್ತಸ್ಥಿತಿಯೇ ಗಾಯತ್ರೀದೇವಿಯ ಇಪ್ಪತ್ತನಾಲ್ಕು ಅಕ್ಷರಗಳ ತತ್ತ್ವವಾಗಿದೆ. ಭವಸಾಗರವನ್ನು ದಾಟಿಸುವ ಅಲೌಕಿಕ ಶಕ್ತಿ ಹೊಂದಿರುವ ಗಾಯತ್ರೀ ಮಂತ್ರದಲ್ಲಿರುವ ಇಪ್ಪತ್ತನಾಲ್ಕು ಅಕ್ಷರಗಳು ನಾಲ್ಕು ವೇದಗಳ, ಶಾಸ್ತ್ರ, ಪುರಾಣ, ಆಗಮ, ಸ್ಮೃತಿ, ದರ್ಶನ, ಉಪನಿಷತ್ತು ಇತ್ಯಾದಿಗಳ ಸಾರವನ್ನು ಒಳಗೊಂಡಿವೆ. ಈ ಅಕ್ಷರಗಳ ವ್ಯಾಖ್ಯೆಯೇ ನಾಲ್ಕು ವೇದಗಳು. ಒಂದೊಂದು ಅಕ್ಷರವೂ ಒಂದೊಂದು ಧರ್ಮಶಾಸ್ತ್ರ ಇದ್ದಂತೆ. ವಿಶ್ವದ ಎಲ್ಲಾ ವಿಜ್ಞಾನ–ಜ್ಞಾನ–ಶಾಸ್ತ್ರಗಳಿಗೆ ಗಾಯತ್ರಿಯು ಈ ಅಕ್ಷರಗಳೇ ಆಧಾರ. ಅವೆಲ್ಲವೂ ಈ ಅಕ್ಷರಗಳಲ್ಲಿ ಬೀಜರೂಪದಲ್ಲಿ ಅಡಗಿವೆ. ಇವುಗಳ ವಿವರವನ್ನು ಮುಂದೆ ತಿಳಿಯೋಣ. ಜಗತ್ತಿನ ಸರ್ವಶ್ರೇಷ್ಠ, ಸರ್ವೋತ್ತಮ, ತಾರಕಮಂತ್ರ ಗಾಯತ್ರೀ. ಮಾನವಧರ್ಮದ, ಸಂಸ್ಕೃತಿಯ ಆಧಾರಶಿಲೆಯಾದ ಗಾಯತ್ರೀ ಅನಂತ, ಅಚ್ಯುತ, ಅಕ್ಷರ, ಅವಿನಾಶಿ, ಗುಪ್ತ

ಶಕ್ತಿಗಳ ಭಂಡಾರ ; ಚೈತನ್ಯದ ಆಗರ. ಅಸಂಖ್ಯ ಶಕ್ತಿಸ್ತೋತ್ರವಾದ ಈ ಗಾಯತ್ರೀ ಮಂತ್ರದ ೨೪ ಅಕ್ಷರಗಳು ೨೪ ಶಕ್ತಿಬೀಜಗಳ ಸಂಕೇತ ; ೨೪ ಮಾತೃಕೆಯರ, ಮಹಾಶಕ್ತಿಯ ಪ್ರತೀಕ. ಇದರ ಅದ್ಭುತ, ಅನ್ಯಾದೃಶ ಶಕ್ತಿಯನ್ನು ಅಳೆಯುವುದು ಅಂಜಲಿಯಲ್ಲಿ ಅಂಬುಧಿಯನ್ನು ಹಿಡಿದಿಡುವಂಥ ಕೆಲಸವಾದೀತು !

**'ತತ್'** : ಈ ವರ್ಣದೇವತೆ 'ಅಗ್ನಿ'. ನಿಯಾಮಕದೇವತೆ–ಕೇಶವ. ಇದು ಪೃಥ್ವೀ ತತ್ತ್ವಕ್ಕೆ ಸೇರಿದೆ. ಪಾದದ ಅಂಗುಷ್ಠಗಳು ಇದರ ಸ್ಥಾನ. 'ತತ್' ಶಬ್ದಾರ್ಥವೇ ವೇದದಲ್ಲಿ ಪರಬ್ರಹ್ಮಪ್ರತಿಪಾದಕವಾಗಿರುವುದು. 'ತತ್' ಎಂದರೆ ಅದು 'ಪರಬ್ರಹ್ಮ' ಅದು ಎಂಬ ಪದದಿಂದ ಹೇಳಲ್ಪಡುವುದು. 'ತತ್' ಪ್ರತಿಪಾದ್ಯವಾದ ಪರಬ್ರಹ್ಮವೇ ಸರ್ವಕ್ಕೂ ಆದಿಯಾಗಿಯೂ, ಅಂತ್ಯದಲ್ಲಿ ಉಳಿಯುವುದಾಗಿಯೂ ಇರುವುದೆಂಬ ಸೂಚನೆ ಈ ವರ್ಣದಲ್ಲಿ ಸೂಚಿತವಾಗಿದೆ. 'ತತ್' ಸ್ವರೂಪವಾದ ಗಾಯತ್ರೀ ಪರಾಶಕ್ತಿಯೇ ಜಗದ್ರೂಪವಾದ ವಿರಾಟ್ ಸ್ವರೂಪವಾಗುವುದಾಗಿಯೂ, ಜಗದ್ರೂಪದಿಂದ ಪುನಃ ಪರಾತ್ಪರ ವಸ್ತುವು ಒಂದೇ ಉಳಿಯುವ ಸ್ಥಿತಿಗೆ ಬರುವುದಾಗಿಯೂ ಇದೆ. ಇವೇ ಇಪ್ಪತ್ತನಾಲ್ಕು ಮಹಾ ಬೀಜಾಕ್ಷರಗಳುಳ್ಳ ಗಾಯತ್ರೀ ಮಂತ್ರದ ತತ್ತ್ವಾರ್ಥವಾಗಿದೆ.

**'ಸ'** : ಈ ವರ್ಣದ ದೇವತೆ 'ವಾಯು'. ನಿಯಾಮಕ ದೇವತೆ–ನಾರಾಯಣ. ಇದು ಜಲ (ಅಪ್) ತತ್ತ್ವಕ್ಕೆ ಸೇರಿದ್ದು. ಮನುಷ್ಯರಿಗೆ ವಾಯು ಮತ್ತು ನೀರಿನ ಆವಶ್ಯಕತೆ ಇರುವಷ್ಟು ಮತ್ತಾವುದಕ್ಕೂ ಇರುವುದಿಲ್ಲ. ಇದು ಹೆಜ್ಜೆ ಪ್ರದೇಶದಲ್ಲಿದೆ. ನಮ್ಮ ಚಲನವಲನಕ್ಕೆ ವಾಯುವಿನ ಸಹಾಯ ಮತ್ತು ಹೆಜ್ಜೆಗಳು ಕಾರಣ. ಈ ಅಕ್ಷರದ ಉಚ್ಚಾರಣೆಯಿಂದ ಆ ಭಾಗದ ನರಗಳು ಬಲಗೊಂಡು ನಮ್ಮ ಚಲನೆಗೆ ಸಹಕಾರಿಯಾಗುತ್ತದೆ ಮತ್ತು ಆರೋಗ್ಯ ಬಲಗೊಳ್ಳುತ್ತದೆ.

**'ವಿ'** : ಈ ವರ್ಣದ ದೇವತೆ 'ಸೂರ್ಯ.' ನಿಯಾಮಕ ದೇವತೆ–ಮಾಧವ. ಇದು ತೇಜಸ್ ತತ್ತ್ವಕ್ಕೆ ಸೇರಿದುದು. ಕಣಕಾಲುಗಳ ಮೇಲು ಭಾಗ ಇದರ ಸ್ಥಾನ. ದೇಹದಲ್ಲಿ ಪಾದದಿಂದ ಮೇಲಿನ ಕಣಕಾಲುಗಳ ಮೂಳೆ ಒಹಳ ಮುಖ್ಯವಾದದ್ದು. ಏಕೆಂದರೆ ಇದು ಇಡೀ ದೇಹದ ಭಾರವನ್ನು

ಹೊತ್ತು ನಿಲ್ಲಬೇಕು. 'ಭೂಮಿ' ಎಂದರೆ ಜಗತ್ತು. ದೇವತೆಯಾದ ಸೂರ್ಯ ಜಗತ್ತಿಗೆ ಚಕ್ಷುಃ ಅಂದರೆ ಅಸ್ತಿ(ಮೂಳೆ)ಕಾರಕ. ಸೂರ್ಯನು ಜಗತ್ತಿಗೆ ಹೇಗೆ ಆಧಾರನೋ ಹಾಗೆಯೇ ದೇಹಕ್ಕೆ ಈ ಮೂಳೆ ಆಧಾರಭೂತ. ಆದ್ದರಿಂದ ಇದನ್ನು ಬಲಗೊಳಿಸುವುದು ಈ ಅಕ್ಷರದ ಉಚ್ಚಾರಣೆಯ ಉದ್ದೇಶ.

**'ತಃ'** : ಈ ವರ್ಣದ ದೇವತೆ 'ಈಶಾನ.' ನಿಯಾಮಕ ದೇವತೆ– ಗೋವಿಂದ. ಇದು ವಾಯುತತ್ತ್ವಕ್ಕೆಸೇರಿದ್ದು. ಇದರ ಸ್ಥಾನ ಮೊಣಕಾಲಿನ ಮಧ್ಯಭಾಗ (ಮಂಡಿ). ಈ ಭಾಗದಲ್ಲಿ ಯಾವ ಅಂಗವೂ ಇಲ್ಲದಿದ್ದರೂ, ಇದು ಶೂನ್ಯಪ್ರದೇಶವಾದರೂ, ಶರೀರ ನಿಲ್ಲಲು ಈ ಭಾಗ ಅತಿಮುಖ್ಯ ವಾದುದು. ಈ ಅಕ್ಷರದ ಉಚ್ಚಾರಣೆಯ ಮೂಲಕ ಈ ಪ್ರದೇಶವನ್ನು ಬಲಪಡಿಸುವುದೇ ಇದರ ಗುರಿ.

**'ವ'** : 'ಆದಿತ್ಯ'ನು ಈ ಅಕ್ಷರದ ದೇವತೆ. ನಿಯಾಮಕ ದೇವತೆ– ವಿಷ್ಣು. ಇದು ಆಕಾಶತತ್ತ್ವಕ್ಕೆ ಸೇರಿದ್ದಾಗಿದೆ. ಇದರ ಸ್ಥಾನ ತೊಡೆ (ಊರು). ನಮ್ಮ ಶರೀರ ಸರಿಯಾಗಿ ನಿಲ್ಲುವುದಕ್ಕೂ, ನಾವು ಚಲಿಸು ವುದಕ್ಕೂ ತೊಡೆಯು ಮುಖ್ಯ. ನಮಗೆ ಈ ಭಾಗದ ಸಹಾಯ ಅಗತ್ಯ ವಾಗಿ ಬೇಕು. ಆದ್ದರಿಂದ ಇದನ್ನು ಬಲಪಡಿಸುವ ಉದ್ದೇಶದಿಂದ 'ವ' ಕಾರೋಚ್ಚಾರಣೆ ಮಾಡುವುದಾಗಿದೆ.

**'ರೇ'** : 'ಬೃಹಸ್ಪತಿ' ಈ ವರ್ಣದ ದೇವತೆ. ನಿಯಾಮಕ ದೇವತೆ– ಮಧುಸೂದನ, ಇದು ಗಂಧ ತತ್ತ್ವದ್ದು. ಶರೀರದಲ್ಲಿ ಇದರ ಸ್ಥಾನ ಗುಹ್ಯ ಪ್ರದೇಶ. ವರುಣ ಸ್ವರೂಪದೇವತೆ. ಈತನು ಪ್ರಮುಖನಾದ ವೈದಿಕ ದೇವತೆ, ಕವಿ, ದೂರ ನೋಡುವವನು, ಬುದ್ಧಿವಂತ, ಬಲಶಾಲಿ, ನೀರಿನ ಒಡೆಯ, ಪೋಷಕ, ಋತದ ತತ್ತ್ವಗಳನ್ನು ಪ್ರತಿನಿಧಿಸುವವನು ಮತ್ತು ಋಣ ವಿಮೋಚಕ. ಗುಹ್ಯಪ್ರದೇಶದಲ್ಲಿ ಮೂತ್ರಕೋಶವೂ ಹಾಗೂ ಮೂತ್ರ ಜನಕಾಂಗವೂ ಇವೆ. ಈ ಅಂಗಗಳಿಗೆ ತೊಂದರೆಯಾಗದಂತೆ ಈತನ ಅನುಗ್ರಹ ವನ್ನು ಪಡೆದು ಈ ಅಂಗಗಳನ್ನು ಬಲಪಡಿಸುವುದೇ ಈ ವರ್ಣದ ಉಚ್ಚಾರಣೆಯ ಉದ್ದೇಶ.

**'ಣಿ'** : 'ಪಿತೃ' ಈ ಅಕ್ಷರದ ದೇವತೆ. ನಿಯಾಮಕ ದೇವತೆ–ತ್ರಿವಿಕ್ರಮ. ಇದು ರಸತತ್ತ್ವಕ್ಕೆ ಸೇರಿದೆ. ಇದು ಶರೀರದ ವೃಷಣಸ್ಥಾನ ಪ್ರದೇಶದಲ್ಲಿದೆ. 'ಶುಕ್ರ' ಧಾತುವು ವೃಷಣದಲ್ಲಿ ಉತ್ಪತ್ತಿಯಾಗುವುದು. ಗರ್ಭೋತ್ಪತ್ತಿಗೆ

ಇದು ಮುಖ್ಯವಾದ ಸ್ಥಾನ. ಇಲ್ಲಿ ಉತ್ಪತ್ತಿಯಾಗುವ ಧಾತುವಿನಿಂದ ಜನಿಸುವ ಶಿಶುವು ಸ್ವರೂಪದೇವತೆಯಾದ ಬೃಹಸ್ಪತಿಯಂತೆ ಬುದ್ಧಿಶಾಲಿಯಾಗಲಿ ಮತ್ತು ಈ ಧಾತುವಿನ ಉತ್ಪತ್ತಿಗೆ ಯಾವ ತೊಂದರೆಯೂ ಆಗದಿರಲಿ ಎಂಬ ಉದ್ದೇಶದಿಂದ ಈ ಸ್ಥಾನವನ್ನು ಬಲಪಡಿಸುವುದು ಈ ಅಕ್ಷರವನ್ನು ಉಚ್ಚರಿಸುವುದರ ಗುರಿ.

**'ಯಂ'** : 'ಭಗ'ನು ಈ ವರ್ಣದ ದೇವತೆ. ನಿಯಾಮಕ ದೇವತೆ–ವಾಮನ. ಇದು ರೂಪತತ್ತ್ವಕ್ಕೆ ಸೇರಿದ್ದು. ದೇಹದಲ್ಲಿ ಕಟಿ (ಸೊಂಟ-ನಡು) ಇದರ ಸ್ಥಾನ. ಈ ವರ್ಣದ ಸ್ವರೂಪದೇವತೆ ಚಂದ್ರ. ಈತನು ಮೋಡಗಳ ದೇವತೆ. ಮಳೆಯು ಸಮೃದ್ಧಿಗಾಗಿ ಇವನನ್ನು ಸ್ತೋತ್ರಮಾಡುತ್ತಾರೆ. ಗೋವುಗಳೂ, ಹೆಂಗಸರೂ ಗರ್ಭಧರಿಸುವುದು ಇವನ ಪ್ರಭಾವದಿಂದ. ಮಳೆಯಿಂದಲೇ ಬೆಳೆ–ಬೆಳೆಯಿಂದ ಅನ್ನ-ಅನ್ನದಿಂದ ಮನುಷ್ಯರು. ಸೊಂಟದಭಾಗದಲ್ಲಿ ಜಠರ, ಪಿತ್ತಕೋಶ, ಸಣ್ಣಕರುಳು, ದೊಡ್ಡಕರುಳುಗಳಿವೆ. ಮಳೆಯಿಂದ ಹೇಗೆ ಬೆಳೆಯೋ ಹಾಗೆಯೇ ಈ ಅಂಗಗಳಲ್ಲಿ ಉತ್ಪತ್ತಿಯಾಗುವ ರಸಗಳಿಂದ (ಜಲರೂಪ) ನಾವು ತಿಂದ ಆಹಾರವು ಪಚನವಾಗಿ ರಕ್ತಗತವಾಗುವುದು. ಇದು ಸರಿಯಾಗಿ ನಡೆಯದಿದ್ದರೆ ನಾವು ಅನೇಕ ರೋಗಗಳಿಗೆ ತುತ್ತಾಗುತ್ತೇವೆ. ಆದುದರಿಂದ ಪರ್ಜನ್ಯನ ಜಪದಿಂದ ಒಳ್ಳೆಯ ಮಳೆಯಾಗಿ ನಮಗೆ ಉತ್ತಮ ಆಹಾರ ದೊರೆಯಲೆಂದು ಹಾಗೂ ಮೇಲೆ ತಿಳಿಸಿದ ಅಂಗಗಳು ಸರಿಯಾಗಿ ಕೆಲಸ ಮಾಡಿ ನಮ್ಮ ಆರೋಗ್ಯವು ಉತ್ತಮವಾಗಿರಲಿ ಎಂಬುದೇ ಈ ವರ್ಣೋಚ್ಚಾರಣೆಯ ಗುರಿ.

**'ಭ'** : ಈ ವರ್ಣದ ದೇವತೆ 'ಅರ್ಯಮಾ'. ನಿಯಾಮಕ ದೇವತೆ–ಶ್ರೀಧರ. ಇದು ಸ್ಪರ್ಶತತ್ತ್ವಕ್ಕೆ ಸೇರಿದೆ. ದೇಹದಲ್ಲಿ ನಾಭಿ (ಹೊಕ್ಕಳು) ಪ್ರದೇಶ ಇದರ ಸ್ಥಾನ. ಈ ಹೊಕ್ಕಳಿನ ಮೂಲಕ ಗರ್ಭದಲ್ಲಿರುವ ಶಿಶುವಿಗೆ ಆಹಾರ ಒದಗಬೇಕು. ಆಗ ಮಾತ್ರ ಆ ಶಿಶುವು ಸರಿಯಾಗಿ ಬೆಳೆಯುತ್ತದೆ. ನಮ್ಮ ಮಕ್ಕಳು ಶಕ್ತಿಶಾಲಿಗಳಾಗಿ ಜನಿಸಲಿ ಎಂಬುದು ಈ ವರ್ಣೋಚ್ಚಾರಣೆಯ ಉದ್ದೇಶ.

**'ಗೋ'** : 'ಸವಿತಾ' ಈ ವರ್ಣದ ದೇವತೆ. ನಿಯಾಮಕ ದೇವತೆ–ಹೃಷಿಕೇಶ. ಇದು ಶಬ್ದತತ್ತ್ವಕ್ಕೆ ಸೇರಿದೆ. ಉದರ (ಹೊಟ್ಟೆ) ಇದರ ಸ್ಥಾನ. ಈ ಸ್ಥಾನದಿಂದಲೇ ನಾದ ಹೊರಡುವುದು. ಈ ಭಾಗವು ಬಲಗೊಂಡು

ನಾದವು ಸುಗಮವಾಗಿಯೂ, ಸುಲಭವಾಗಿಯೂ, ಸ್ಫುಟವಾಗಿಯೂ, ಸ್ಪಷ್ಟವಾಗಿಯೂ ಹೊರಡಲಿ ಎಂಬ ಉದ್ದೇಶದಿಂದ ಈ ಭಾಗವನ್ನು ಬಲ ಪಡಿಸಲು ಈ ಅಕ್ಷರವನ್ನು ಉಚ್ಚರಿಸುವುದಾಗಿದೆ.

**'ದೇ'** : 'ತ್ವಷ್ಟಾ' ಈ ಅಕ್ಷರದ ದೇವತೆ. ನಿಯಾಮಕ ದೇವತೆ–ಪದ್ಮನಾಭ. ಉಪಸ್ಥ ಇದರ ತತ್ತ್ವ. ಸ್ತನಗಳ ಪ್ರದೇಶ (ಎದೆ) ಇದರ ಸ್ಥಾನ. ಇಲ್ಲಿ ಶ್ವಾಸಕೋಶಗಳು ಇವೆ. ಶ್ವಾಸಕೋಶಗಳು ಸರಿಯಾಗಿ ಕೆಲಸ ಮಾಡಿ ದರೆ ಮಾತ್ರ ಮನುಷ್ಯನ ಆರೋಗ್ಯ ಸರಿಯಾಗುತ್ತದೆ. ಆದ್ದರಿಂದ ಈ ಭಾಗ ವನ್ನು ಬಲಪಡಿಸುವುದಕ್ಕಾಗಿ ಈ ವರ್ಣದ ಉಚ್ಚಾರಣೆ ಮಾಡುವುದಾಗಿದೆ.

**'ವ'** : ಈ ಅಕ್ಷರದ ದೇವತೆ 'ಪುಷ್ಟಿಃ'. ನಿಯಾಮಕ ದೇವತೆ–ದಾಮೋದರ. ಇದು ವಾಯುತತ್ತ್ವಕ್ಕೆ ಸೇರಿದ್ದು. ಇದರ ಸ್ಥಾನ ಹೃದಯ. ಇದರ ಚಲನೆ ಒಂದು ಕ್ಷಣವೂ ನಿಲ್ಲದೆ ನಡೆಯುತ್ತಲೇ ಇರಬೇಕು. ಇದನ್ನು ನಿಯಂತ್ರಿಸುವಂತೆ ಮಾಡಲು ಈ ಸ್ಥಾನವನ್ನು ಬಲಪಡಿಸುವುದೇ ಈ ಅಕ್ಷರದ ಉಚ್ಚಾರಣೆಯ ಉದ್ದೇಶ.

**'ಸ್ಯ'** : ಇಂದ್ರ ಈ ವರ್ಣದ ದೇವತೆ. ನಿಯಾಮಕ ದೇವತೆ–ಸಂಕರ್ಷಣ. ಇದು ಪಾದತತ್ತ್ವಕ್ಕೆ ಸೇರಿದ್ದು. ಇದರ ಸ್ಥಾನ ಕಂಠ. ನಾದವು (ಸ್ವರವು) ಕಂಠದಿಂದ ಹೊರಬರುವುದು. ಕಂಠವು ಸರಿಯಾಗಿಲ್ಲದಿದ್ದರೆ ಸ್ವರವು ಸರಿ ಯಾಗಿರುವುದಿಲ್ಲ. ಆದುದರಿಂದ ಈ ಕಂಠವನ್ನು ನಿಯಂತ್ರಿಸಿ ಬಲಪಡಿಸುವು ದರ ಮೂಲಕ ಸ್ವರವು ಸ್ಪಷ್ಟವಾಗಿಯೂ, ಸರಾಗವಾಗಿಯೂ ಬರುವಂತೆ ಮಾಡುವುದೇ ಈ ವರ್ಣೋಚ್ಚಾರಣೆಯ ಗುರಿಯಾಗಿದೆ.

**'ಧೀಃ'** : ಈ ವರ್ಣದ ದೇವತೆ 'ವಾಯು'. ನಿಯಾಮಕ ದೇವತೆ–ವಾಸುದೇವ. ಇದು ಪಾಣಿ ತತ್ತ್ವಕ್ಕೆ ಸೇರಿದೆ. ಇದರ ಸ್ಥಾನ ವದನ (ಮುಖ). ಮನುಷ್ಯನ ತೇಜಸ್ಸು ಮುಖದಿಂದ ಗೋಚರವಾಗುತ್ತದೆ. ಈ ವರ್ಣದ ಉಚ್ಚಾರಣೆಯಿಂದ ಮುಖದ ಮೇಲೆ ಹರಿದುಹೋಗುವ ನರಗಳು ಬಲಗೊಂಡು ತೇಜಸ್ಸುಂಟಾಗುವುದು. ಮುಖದಲ್ಲಿ ಒಳ್ಳೆಯ ತೇಜಸ್ಸಿದ್ದರೆ ಅದೇ ಒಂದು ಭಾಗ್ಯ. ತೇಜಸ್ಸು ಬಂದರೆ ಮನುಷ್ಯ ಸ್ಫುರದ್ರೂಪಿಯಾಗು ವನು.

**'ಮ'** : ಈ ಅಕ್ಷರದ ದೇವತೆ 'ವಾಸುದೇವ'. ನಿಯಾಮಕ ದೇವತೆ–ಪ್ರದ್ಯುಮ್ನ. ಇದು ವಾಕ್ ತತ್ತ್ವದ್ದು. ಇದರ ಸ್ಥಾನಕಾಲಮಧ್ಯ (ದವಡೆ). ವೇದಾಧ್ಯಯನ, ಮಂತ್ರೋಚ್ಚಾರಣೆ ಮೊದಲಾದುವುಗಳಿಗೆ ದವಡೆಯ ಚಲನೆ ಸುಗಮವಾಗಿರಬೇಕು ಈ ಕಾರಣದಿಂದ ಈ ವರ್ಣೋಚ್ಚಾರಣೆಯು ಮೂಲಕ ಈ ಭಾಗವನ್ನು ಬಲಪಡಿಸುವುದಾಗಿದೆ.

**'ಹಿ'** : **'ಮಿತ್ರಾವರುಣ'** ಈ ವರ್ಣದ ದೇವತೆ. ನಿಯಾಮಕ ದೇವತೆ–ಅನಿರುದ್ಧ. ಇದು ಪ್ರಾಣತತ್ತ್ವಕ್ಕೆ ಸೇರಿದೆ. ಶರೀರದಲ್ಲಿ ಇದರ ಸ್ಥಾನ ನಾಸಾಗ್ರ (ಮೂಗಿನ ತುದಿ). ಮೂಗಿನ ತುದಿಗೆ ದೃಷ್ಟಿಯನ್ನಿಟ್ಟು ಜಪಿಸುವುದರಿಂದ ಕಣ್ಣುಗಳ ಗುಡ್ಡೆಗಳಿಗೂ ಹಾಗೂ ಕಣ್ಣಿನ ನರಗಳಿಗೂ ಒಳ್ಳೆಯ ವ್ಯಾಯಾಮವಾಗುತ್ತದೆ. ಇದರಿಂದ ಕಣ್ಣುಗಳು ಪ್ರಕಾಶಮಾನವಾಗುವುವಲ್ಲದೆ ದೃಷ್ಟಿದೋಷವೂ ಪರಿಹಾರವಾಗುವುದು. ಆದುದರಿಂದಲೇ ಈ ವರ್ಣದ ಉಚ್ಚಾರಣೆ ಮಾಡಲಾಗುತ್ತದೆ.

**'ಧಿ'** : 'ವಿಧಾತಾ' ಈ ವರ್ಣದ ದೇವತೆ. ನಿಯಾಮಕ ದೇವತೆ–ಪುರುಷೋತ್ತಮ. ಇದು ಜಿಹ್ವಾತತ್ತ್ವಕ್ಕೆ ಸೇರಿದ್ದು. ಶರೀರದಲ್ಲಿ ಇದರ ಸ್ಥಾನ ನೇತ್ರ (ಕಣ್ಣು). ಕಣ್ಣಿನ ದೃಷ್ಟಿಯನ್ನು ಮೂಲ ಸ್ವರೂಪದಲ್ಲಿ ಕಂಡಾಗ ನಮ್ಮ ಕಣ್ಣಿನಿಂದ ಅಗೋಚರವಾದ ಅಗ್ನಿ ಕಿರಣಗಳು ಹೊರದೂಡಲ್ಪಡುವುದು ಗೋಚರವಾಗುವುದು. ನಾವು ಸುಂದರ (ಒಳ್ಳೆಯ) ಪ್ರಪಂಚವನ್ನು ಕಂಡು ಆನಂದವನ್ನು ಅನುಭವಿಸುವ ಮುಖ್ಯ ದೇಹೇಂದ್ರಿಯ ಕಣ್ಣು. ಈ ದೃಷ್ಟಿಯನ್ನು ಒಳ್ಳೆಯದು ಮತ್ತು ಕೆಟ್ಟದ್ದು ಎಂದು ಎರಡು ಗುಣಗಳಿಂದ ವಿಂಗಡಿಸಬಹುದು. ಕಣ್ಣಿನ ದೃಷ್ಟಿಯನ್ನು ಒಳ್ಳೆಯ ವಿಚಾರಗಳ ಕಡೆಗೆ ಹಾಯಿಸಿದರೆ ಉತ್ತಮ ಫಲವೂ, ಕೆಟ್ಟವಿಚಾರಗಳ ಕಡೆಗೆ ತಿರುಗಿಸಿದರೆ ತೊಂದರೆಯೂ ಆಗುವುದು. ಈ ದೃಷ್ಟಿಯಿಂದ ದುಷ್ಪರಿಣಾಮಗಳು ಆಗದೆ, ಇರಲಿ; ಹಾಗೂ ಕಣ್ಣಿಗೆ ಸಂಬಂಧಪಟ್ಟ ನರಗಳು ಬಲಗೊಳ್ಳಲಿ ಎಂಬುದು ಈ ಅಕ್ಷರದ ಉಚ್ಚಾರಣೆಯ ಗುರಿ.

**'ಯೋ'** ಈ ವರ್ಣದ ದೇವತೆ 'ವಿಶ್ವೇದೇವರು'. ನಿಯಾಮಕ ದೇವತೆ–ಅಧೋಕ್ಷಜ. ಇದು ಚಕ್ಷುಸ್ ತತ್ತ್ವಕ್ಕೆ ಸೇರಿದ್ದು. ಇದರ ಸ್ಥಾನ ಭ್ರೂಮಧ್ಯಪ್ರದೇಶ (ಹುಬ್ಬುಗಳ ನಡುವಿನ ಭಾಗ). ಎಲ್ಲಾ ದೇವತೆಗಳ ಸಮೂಹಕ್ಕೆ 'ವಿಶ್ವೇದೇವರು' ಎಂದು ಕರೆಯುವರು. ಈ ಭ್ರೂಮಧ್ಯದಲ್ಲಿ

'ಆಜ್ಞಾ' ಚಕ್ರವಿದೆ. ಇದರ ಅಧಿದೇವತೆ ಶಂಭು (ಶಿವ). ಇದು ಮನಸ್ಸಿನ ಮಂಡಲವಿರುವ ಪ್ರದೇಶ ಇಲ್ಲಿಯೇ ಯೋಗದ ಅತ್ಯಂತ ಪ್ರಸಿದ್ಧವಾದ 'ಉಡ್ಯಾಣ' ಪೀಠವಿರುವುದು. ಈ ಮಂಡಲವು ಜ್ಞಾನಶಕ್ತಿಯ ಕೇಂದ್ರ ಸ್ಥಾನವಾಗಿದೆ. ನಮ್ಮ ವಿಚಾರ, ಆಗುಹೋಗುಗಳನ್ನು ತಿಳಿಯಲು ಇಲ್ಲಿಯ ನರಗಳು ತಲೆಯ ಹಿಂಭಾಗಕ್ಕೆ ಹೋಗಿ ತಿಳಿಸುತ್ತವೆ. ಈ ನರಗಳನ್ನು ಬಲಪಡಿಸಿ ನಮ್ಮ ಜ್ಞಾಪಕಶಕ್ತಿಯನ್ನು ಹೆಚ್ಚಿಸಿಕೊಳ್ಳಲು ವಿಶ್ವೇದೇವರ ಮೂಲಕ ಪ್ರಾರ್ಥಿಸುವುದೇ ಈ ವರ್ಣದ ಉಚ್ಚಾರಣೆಯ ಗುರಿ.

**'ಯೋ'** : 'ವಿಷ್ಣು' ಈ ಅಕ್ಷರದ ದೇವತೆ. ನಿಯಾಮಕ ದೇವತೆ– ನಾರಸಿಂಹ. ಇದು ತ್ವಕ್ ತತ್ತ್ವಕ್ಕೆ ಸೇರಿದ್ದು. ಶರೀರದಲ್ಲಿ ಇದರ ಸ್ಥಾನ 'ಲಲಾಟ' (ಹಣೆ). ನೆತ್ತಿಯ ಭಾಗ ಯಾವಾಗಲೂ ತಂಪಾಗಿರಬೇಕು. ಇದಕ್ಕಾಗಿಯೇ ತಲೆಗೆ ಎಣ್ಣೆ ಹಾಕಿಕೊಳ್ಳುವುದು, ಪೇಟ ಅಥವಾ ಟೋಪಿ ಯನ್ನು ಧರಿಸುವುದು ರೂಢಿಗೆ ಬಂದದ್ದು. ಇದರಿಂದಲೇ ದೇವತಾಮೂರ್ತಿ ಗಳಿಗೆ ಕಿರೀಟ ಧಾರಣೆಯ ಸೂಚನೆಯನ್ನೂ ಮಾಡಲಾಗಿದೆ. ಈ ಭಾಗದ ನರಗಳನ್ನು ಬಲಗೊಳಿಸುವುದಕ್ಕಾಗಿಯೇ 'ಯೋ' ವರ್ಣೋಚ್ಚಾರಣೆ ಮಾಡುವುದಾಗಿದೆ.

**'ನಃ'** : ಈ ವರ್ಣದ ದೇವತೆ 'ವಾಸವಃ'. ನಿಯಾಮಕ ದೇವತೆ– ಅಚ್ಯುತ. ಇದು ಶ್ರೋತ್ರ ತತ್ತ್ವಕ್ಕೆ ಸೇರಿದೆ. ದೇಹದಲ್ಲಿ ಇದರ ಸ್ಥಾನ ಪಶ್ಚಿಮ್ಮಮುಖ (ಮುಂದಿನ ಮುಖ). ಮುಖದಲ್ಲಿ ಕಾಂತಿಯೂ, ಬ್ರಹ್ಮ ತೇಜಸ್ಸೂ ಇರಬೇಕು. ಇದು ಬರುವುದಕ್ಕೋಸ್ಕರ ಮುಖದ ಮುಂಭಾಗದಲ್ಲಿ ಹರಿದುಹೋಗುವ ನರಗಳನ್ನು ಉದ್ರೇಕಿಸಿ ಬಲಪಡಿಸಬೇಕು. ಆದ್ದರಿಂದ 'ನಃ' ವರ್ಣೋಚ್ಚಾರಣೆಯನ್ನು ಮಾಡುವುದಾಗಿದೆ.

**'ಪ್ರ'** : ಈ ಅಕ್ಷರದ ದೇವತೆ 'ಸರ್ವ ದೇವರು.' ನಿಯಾಮಕ ದೇವತೆ– ಜನಾರ್ದನ. ಇದು ಮನಃ ತತ್ತ್ವಕ್ಕೆ ಸೇರಿದ್ದು. ಶರೀರದಲ್ಲಿ ಇದರ ಸ್ಥಾನ ಉತ್ತರಮುಖ (ಹಿಂದಿನ ಮುಖ). ನಮ್ಮ ಶರೀರದಲ್ಲಿ ವ್ಯಾಪಿಸಿರುವ ನರ ಗಳೆಲ್ಲಕ್ಕೂ ಈ ಸ್ಥಳವೇ ಕೇಂದ್ರಬಿಂದು. ನರಗಳ ಕವಲೊಡೆಯುವಿಕೆಯೂ ಇಲ್ಲಿಂದಲೇ ಪ್ರಾರಂಭವಾಗಿ ದೇಹದ ಎಲ್ಲಾ ಭಾಗಗಳಿಗೂ ಸಂಪರ್ಕವನ್ನು ಕಲ್ಪಿಸುತ್ತವೆ. ಇದೇ ಇದರ ಮುಖ್ಯ ಕಾರ್ಯ. ಈ ನರಗಳ ಕೇಂದ್ರವನ್ನು ಉದ್ರೇಕಿಸುವುದೇ ಈ ಅಕ್ಷರದ ಉಚ್ಚಾರಣೆಯ ಗುರಿ.

'ಚೋ' : 'ಕುಬೇರ' ಈ ಅಕ್ಷರದ ದೇವತೆ. ನಿಯಾಮಕ ದೇವತೆ-ಉಪೇಂದ್ರ. ಇದು ಬುದ್ಧಿತತ್ತ್ವಕ್ಕೆ ಸೇರಿದೆ. ದೇಹದಲ್ಲಿ ಇದರ ಸ್ಥಾನ ದಕ್ಷಿಣ ಮುಖ (ತಲೆಯ ಪಶ್ಚಿಮ ಭಾಗ). ಈ ಭಾಗವೇ ಜ್ಞಾನಕೇಂದ್ರ. ಆಗು ಹೋಗುಗಳ ಸರ್ವಜ್ಞಾನಕ್ಕೂ ಇದು ಕೇಂದ್ರಸ್ಥಳ. ಈ ಭಾಗಕ್ಕೆ ಯಾವ ವಿಧದಲ್ಲಿಯೂ ತೊಂದರೆಯಾಗಬಾರದು. ನೆತ್ತಿಯಲ್ಲಿ ಬಹಳ ಸೂಕ್ಷ್ಮವಾದ 'ಶಿರಸಂಧಿ'ಯೊಂದು ಇದ್ದು ಅದನ್ನು ಕಾಪಾಡಬೇಕು. ಈ ಕಾರಣದಿಂದಲೇ ಈ ಭಾಗದ ಕೂದಲನ್ನು ಇಟ್ಟುಕೊಳ್ಳುವುದು. ಅಲ್ಲದೆ ತಲೆಗೆ ಬಿಸಿಲಿನ ತಾಪ ತಾಗದಂತೆ ಟೋಪಿ ಅಥವಾ ಪೇಟ ಹಾಕಿಕೊಳ್ಳುವುದು ರೂಢಿಯಲ್ಲಿದೆ. ಈ ಅಕ್ಷರದ ಉಚ್ಚಾರಣೆಯಿಂದ ಈ ಭಾಗದ ನರಗಳನ್ನು ಉದ್ರೇಕಿಸಿ ಬಲಗೊಳಿಸುವುದರ ಮೂಲಕ ಈ ಭಾಗಕ್ಕೆ ರಕ್ಷಣೆ ಕೊಟ್ಟಂತಾಗುವುದು.

'ದ' : ಈ ಅಕ್ಷರದ ದೇವತೆ'ಅಶ್ವಿನೀ.' ನಿಯಾಮಕ ದೇವತೆ-ಹರಿ (ಹರ). ದೇಹದಲ್ಲಿ ಇದರ ಸ್ಥಾನ ಪೂರ್ವಮುಖ (ತಲೆಯ ಉತ್ತರ ಭಾಗ). ಇದನ್ನು ಕಪಾಲವೆಂದು ಕರೆಯುವರು. ಮೆದುಳಿನ ಮುಖ್ಯವಾದ ಮತ್ತು ಸೂಕ್ಷ್ಮವಾದ ಭಾಗ ಇದು. ಈ ಭಾಗಕ್ಕೆ ಪೆಟ್ಟುಬಿದ್ದರೆ ತುಂಬಾ ತೊಂದರೆಯಾಗುವುದು ; ಕಷ್ಟವಾಗುವುದು. ಮೆದುಳಿನಿಂದ ಸೃಷ್ಟಿಯಾಗುವ ಬುದ್ಧಿ ಇತ್ಯಾದಿಗಳಿಗೆ ಇದು ಕೇಂದ್ರಸ್ಥಾನ. ಆದುದರಿಂದ ಇದನ್ನು ಬಲಗೊಳಿಸುವುದೇ ಈ ಅಕ್ಷರದ ಉಚ್ಚಾರಣೆಯ ಉದ್ದೇಶ. ಇದನ್ನು ಬ್ರಹ್ಮಕಪಾಲವೆಂತಲೂ ಕರೆಯುತ್ತಾರೆ.

'ಯಾತ್' : ಈ ವರ್ಣದ ದೇವತೆ 'ಬ್ರಹ್ಮ.' ನಿಯಾಮಕ ದೇವತೆ-ಶ್ರೀಕೃಷ್ಣ. ಅಹಂಕಾರ ಇದರ ತತ್ತ್ವ. ಶರೀರದ ಊರ್ಧ್ವಮುಖ (ತಲೆಯ ಮೇಲುಭಾಗ) ಇದರ ಸ್ಥಾನ. ಈ ಭಾಗವನ್ನು ಬ್ರಹ್ಮಾಂಡವೆನ್ನುವರು. ನಮ್ಮ ಶರೀರದಲ್ಲಿ ವಿದ್ಯುತ್ತನ್ನು ಉತ್ಪಾದಿಸಲೂ ಮತ್ತು ವಿಸರ್ಜಿಸಲೂ ಇದು ಮುಖ್ಯ ಕೇಂದ್ರ. ಈ ವಿದ್ಯುತ್ ಉತ್ಪಾದನೆ ಮತ್ತು ವಿಸರ್ಜನೆ ಸದಾಕಾಲವೂ ಸರಿಯಾಗಿ ಆಗುತ್ತಿದ್ದರೆ ಮಾತ್ರ ದೇಹದಲ್ಲಿರುವ ಎಲ್ಲಾ ಅಂಗಗಳೂ ಯಾವ ತೊಂದರೆಯೂ ಇಲ್ಲದೆ ಸರಿಯಾಗಿ ಕೆಲಸಮಾಡುತ್ತವೆ. ಈ ರೀತಿ ಕೆಲಸ ಮಾಡುವುದರಿಂದ ಶರೀರಕ್ಕೆ ಯಾವ ಬಾಧೆಯೂ ಇರುವುದಿಲ್ಲ. ಇದಕ್ಕೆ 'ಸ್ಥಿತಿ' ಎನ್ನುವರು. 'ಸ್ಥಿತಿ' ಎಂದಾಗ ಜಗತ್ತಿನ ತ್ರಿಮೂರ್ತಿಗಳಲ್ಲಿ ಸ್ಥಿತಿಕಾರಕನಾದ ವಿಷ್ಣುವಿನ ಸ್ಮರಣೆಯಾಗುತ್ತದೆ. ಈ ಪ್ರಪಂಚದ

ಸ್ಥಿತಿಗೆ ವಿಷ್ಣುವು ಹೇಗೆ ಕಾರಣನೋ ಹಾಗೆಯೇ ದೇಹಸ್ಥಿತಿಗೂ ಅವನು ಕಾರಣ. ಆದುದರಿಂದ ಈ ಭಾಗವನ್ನು ಈ ಅಕ್ಷರದ ಉಚ್ಚಾರಣೆಯಿಂದ ಬಲಪಡಿಸಲಾಗುತ್ತದೆ. ಇದೇ ಇದರ ಗುರಿ.

ತತ್ತ್ವವಿದರು ಗಾಯತ್ರಿಯ ಮಹಿಮೆಯನ್ನು ಹೇಳುವಾಗ ಸೃಷ್ಟಿಯ ಮೂಲದಲ್ಲಿರುವ ಇಪ್ಪತ್ತನಾಲ್ಕು ತತ್ತ್ವಗಳಿಗೂ, ಗಾಯತ್ರಿಯಲ್ಲಿರುವ ಇಪ್ಪತ್ತನಾಲ್ಕು ಅಕ್ಷರಗಳಿಗೂ ಮಧ್ಯೆ ಸಮನ್ವಯ ಮಾಡಿರುವರು. ಇವು ಯಾವುವೆಂದರೆ ಐದು ಕರ್ಮೇಂದ್ರಿಯಗಳು, ಐದು ಜ್ಞಾನೇಂದ್ರಿಯಗಳು, ಐದು ಇಂದ್ರಿಯಾರ್ಥಗಳು, ಐದು ಭೂತಗಳು, ಮನಸ್ಸು, ಬುದ್ಧಿ, ಜೀವ ಮತ್ತು ಅವ್ಯಕ್ತ ಎಂಬ ಪ್ರಕೃತಿಯ ಇಪ್ಪತ್ತುನಾಲ್ಕು ತತ್ತ್ವಗಳೂ ಗಾಯತ್ರಿಯ ಇಪ್ಪತ್ತನಾಲ್ಕು ಅಕ್ಷರಗಳು. ಪ್ರಣವವೇ ಇಪ್ಪತ್ತೈದನೆಯ ದಾದ ಪುರುಷ. ತತ್ತ್ವಗಳಿಗೂ, ವರ್ಣಗಳಿಗೂ ಮಧ್ಯೆಇರುವ ಸಂಬಂಧವನ್ನು ಆಳವಾಗಿ ಅನ್ವೇಷಣೆಮಾಡಿ ಮಂತ್ರಗಳ ದ್ವಾರ ತತ್ತ್ವಜ್ಞಾನಕ್ಕೆ ದಾರಿ ಮಾಡಿಕೊಟ್ಟಿರುವುದೇ ಮಂತ್ರಶಾಸ್ತ್ರದ ಕೆಲಸ.

## ಚತುರ್ವಿಂಶತಿ ವರ್ಣಾನಾಂ ಋಷ್ಯಾದಿ ನ್ಯಾಸ

**ಆಚಮ್ಯ :** ಓಂ ಕೇಶವಾಯ ಸ್ವಾಹಾ ...ಶ್ರೀಕೃಷ್ಣಾಯ ನಮಃ ।

**ಪ್ರಾಣಾಯಾಮ :** ಓಂ ಪ್ರಣವಸ್ಯ ಪರಬ್ರಹ್ಮ ಋಷಿಃ । ಪರಮಾತ್ಮಾ ದೇವತಾ । ದೈವೀ ಗಾಯತ್ರೀ ಛಂದಃ । ಪ್ರಾಣಾಯಾಮೇ ವಿನಿಯೋಗಃ ....ಶ್ರೀಪರಮೇಶ್ವರ ಪ್ರೀತ್ಯರ್ಥಂ ಶ್ರೀಗಾಯತ್ರೀಚತುರ್ವಿಂಶತಿ ವರ್ಣಾನಾಂ ಋಷ್ಯಾದಿ ನ್ಯಾಸೇ ವಿನಿಯೋಗಃ ॥

**ಅಥ ಧ್ಯಾನಂ:** ಮುಕ್ತಾ ವಿದ್ರುಮ ಹೇಮ ನೀಲ ಧವಳಚ್ಛಾಯೈ ರ್ಮುಖೈ ಸ್ತ್ರೀಕ್ಷಣೈ । ಯುಕ್ತಾಮಿಂದು (ಕಲಾ) ನಿಬದ್ಧ ರತ್ನ ಮಕುಟಾಂ ತತ್ತ್ವಾರ್ಥವರ್ಣಾತ್ಮಕಾಂ । ಗಾಯತ್ರೀಂ ವರದಾಭಯಾಂಕುಶಕಶಾಂ (ಶೂಲಂ) ಶುಭ್ರಂ ಕಪಾಲಂ ಗದಾಂ । ಶಂಖಂ ಚಕ್ರ ಮಥಾರವಿಂದಯುಗಳಂ ಹಸ್ತೈರ್ವಹಂತೀಂ ಭಜೇ ।

೧. ತಕಾರಸ್ಯ, ವಸಿಷ್ಠ ಋಷಿಃ, ಅಗ್ನಿರ್ದೇವತಾ, ಗಾಯತ್ರೀ ಛಂದಃ ಚಂಪಕವರ್ಣಂ, ಪೃಥ್ವೀ ತತ್ತ್ವಂ, ಪ್ರಹ್ಲಾದಿನೀ ಶಕ್ತಿಃ ಸುಮುಖಂ

ಮುದ್ರಾ, ತಪಸೀ ಕಳಾ, ಮೋಕ್ಷದಂ ಫಲಂ, ಅಂ ಬೀಜಂ, ಉದಾತ್ತ ಸ್ವರಃ, ತ್ರಿಮೂರ್ತ್ಯಾತ್ಮಕಂ ಸ್ವರೂಪಂ, ಪಾದಾಂಗುಷ್ಠ ಸ್ಥಾನಂ, ಅಜ್ಞಾನ ದೋಷಹರ ಸಿದ್ಧಿ ವಿನಿಯೋಗಃ ॥ (ಮೋಕ್ಷಾರ್ಥೇ ವಿನಿಯೋಗಃ)

೨. ತ್ಸಕಾರಸ್ಯ, ಭರದ್ವಾಜ ಋಷಿಃ, ವಾಯುರ್ದೇವತಾ, ಉಷ್ಣಿಕ್ ಛಂದಃ, ಅಸಿತ ವರ್ಣಃ, ಅಪ್ ತತ್ತ್ವಂ, ಪ್ರಭಾಶಕ್ತಿಃ, ಸಂಪುಟಂ ಮುದ್ರಾ, ಸಕಲಾ ಕಳಾ, ಆರೋಗ್ಯದಂ ಫಲಂ, ಈಂ ಬೀಜಂ, ಅನುದಾತ್ತ ಸ್ವರಃ, ವಾಯಾತ್ಮಕಂ ಸ್ವರೂಪಂ, ಗುಲ್ಮಮಧ್ಯಂ ಸ್ಥಾನಂ, ಉಪಪಾತಕ ನಾಶನೇ ವಿನಿಯೋಗಃ ॥

೩. ವಿಕಾರಸ್ಯ ಗೌತಮ ಋಷಿಃ, ಸೋಮೋ ದೇವತಾ, ಅನುಷ್ಟುಪ್ ಛಂದಃ, ವಿದ್ರುಮ ವರ್ಣಃ, ತೇಜಸ್ ತತ್ತ್ವಂ, ಸತ್ಯಾ ಶಕ್ತಿ ; ವಿತತಂ ಮುದ್ರಾ, ವಿಶ್ವಾಕಳಾ, ಐಶ್ವರ್ಯದಂ ಫಲಂ, ಊಂ ಬೀಜಂ, ಅನುದಾತ್ತ ಸ್ವರಃ, ಸೋಮಾತ್ಮಕಂ ಸ್ವರೂಪಂ, ಜಂಘೇ ಸ್ಥಾನಂ, ಮಹಾಪಾತಕ ನಾಶನೇ ವಿನಿಯೋಗಃ ॥

೪. ತುಕಾರಸ್ಯ, ಭೃಗು ಋಷಿಃ, ಈಶಾನೋ ದೇವತಾ, ಬೃಹತೀ ಛಂದಃ, ಸ್ಫಟಿಕ ವರ್ಣಃ, ವಾಯುಸ್ತತ್ತ್ವಂ, ವಿಶ್ವ ಭದ್ರಾಶಕ್ತಿಃ, ವಿಸ್ತೃತಂ ಮುದ್ರಾ, ತುಷ್ಟಾಕಳಾ, ಧನದಂ ಫಲಂ, ಜೂಂ ಬೀಜಂ, ಉದಾತ್ತಃ ಸ್ವರಃ, ವಿದ್ಯಾಧರಾತ್ಮಕಂ ಸ್ವರೂಪಂ, ಜಾನುಃ ಸ್ಥಾನಂ, ಗ್ರಹದೋಷ ವಿನಾಶೇ. ವಿನಿಯೋಗಃ ॥

೫. ವರ್ಕಾರಸ್ಯ, ಶೌಂಡಿನ್ಯ ಋಷಿಃ, ಆದಿತ್ಯೋ ದೇವತಾ, ಪಂಕ್ತಿಛಂದಃ, ಪದ್ಮವರ್ಣಃ, ಆಕಾಶಸ್ತತ್ತ್ವಂ, ವಿಲಾಸಿನೀ ಶಕ್ತಿಃ, ದ್ವಿಮುಖಂ ಮುದ್ರಾ, ವರದಾ ಕಳಾ, ಕಾಮದಂ ಫಲಂ, ಇಂ ಬೀಜಂ, ಉದಾತ್ತ ಸ್ವಃ, ಸೋಮಾತ್ಮಕಂ ಸ್ವರೂಪಂ, ಊರು ಸ್ಥಾನಂ, ಭ್ರೂಣಹತ್ಯಾದೋಷ ವಿನಾಶನೇ ವಿನಿಯೋಗಃ ॥

೬. ರೇಕಾರಸ್ಯ, ರೋಹಿತ ಋಷಿಃ, ಬೃಹಸ್ಪತಿ ದೇವತಾ, ತ್ರಿಷ್ಟುಪ್ ಛಂದಃ, ತರುಣಾದಿತ್ಯ ವರ್ಣಃ, ಗಂಧಸ್ತತ್ತ್ವಂ, ಪ್ರಭಾವತೀಶಕ್ತಿಃ, ತ್ರಿಮುಖಂ ಮುದ್ರಾ, ರೇವತೀ ಕಳಾ, ವಿದ್ಯಾದಂ ಫಲಂ, ಏಂ ಬೀಜಂ, ಸ್ವರಿತಃ ಸ್ವರಃ, ವರುಣಾತ್ಮಕಂ ಸ್ವರೂಪಂ, ಗುಹ್ಯಸ್ಥಾನಂ, ಅಗಮ್ಯಾಗಮನ ದೋಷ ನಾಶನೇ ವಿನಿಯೋಗಃ ॥

೭. ಣೀಕಾರಸ್ಯ, ಗರ್ಗ ಋಷಿಃ, ಪಿತರೋ ದೇವತಾ, ಜಗತೀ ಛಂದಃ, ಶಂಖವರ್ಣಃ, ವಾಯುಃ ತತ್ತ್ವಂ, ಜಯಾ ಶಕ್ತಿಃ, ಚತುರ್ಮುಖಂ ಮುದ್ರಾ, ಸೂಕ್ಷ್ಮಾ ಕಳಾ, ಕಾಮದಂ ಫಲಂ, ಓಂ ಬೀಜಂ, ಸ್ವರಿತ ಸ್ವರಃ, ಬೃಹಸ್ಪತ್ಯಾತ್ಮಕಂ ಸ್ವರೂಪಂ, ವೃಷಣ ಸ್ಥಾನಂ, ಅಭಕ್ಷ್ಯಾಭಕ್ಷಣ ದೋಷವಿನಾಶನೇ ವಿನಿಯೋಗಃ ॥

೮. ಯಂಕಾರಸ್ಯ ಶಾತಾತಪ ಋಷಿಃ, ಭರ್ಗೋ ದೇವತಾ, ಅತಿಜಗತಿ ಛಂದಃ, ಕುಂದ ವರ್ಣಃ, ರೂಪಂ ತತ್ತ್ವಂ, ಶಾಂತಾ ಶಕ್ತಿಃ, ಪಂಚಮುಖಂ ಮುದ್ರಾ, ಜ್ಞಾನಾ ಕಳಾ, ಧನದಂ ಫಲಂ, ಸಂ ಬೀಜಂ, ಪ್ರಚಯ ಸ್ವರಃ, ಚಂದ್ರಾತ್ಮಕಃ ಸ್ವರೂಪಂ, ಕಟೀ ಸ್ಥಾನಂ, ಬ್ರಹ್ಮಹತ್ಯಾದೋಷ ವಿನಾಶನೇ ವಿನಿಯೋಗಃ ॥

೯. ಭೆಕಾರಸ್ಯ, ಸನತ್ಕುಮಾರ ಋಷಿಃ, ಅರ್ಯಮಾ ದೇವತಾ, ಪದ ಪಂಙ್ಕ್ತಿ ಛಂದಃ, ಇಂದು ವರ್ಣಃ, ಸ್ಪರ್ಶಸ್ತತ್ತ್ವಂ, ಶಾಂತಾಶಕ್ತಿಃ, ಷಣ್ಮುಖಂ ಮುದ್ರಾ, ಭರ್ಗ ಕಳಾ, ಸಂತತಿದಂ ಫಲಂ, ಹಂ ಬೀಜಂ, ಉದಾತ್ತಃ ಸ್ವರಃ, ಪರ್ಜನ್ಯಾತ್ಮಕಂ ಸ್ವರೂಪಂ, ನಾಭಿ ಸ್ಥಾನಂ, ಪುರುಷ ಹತ್ಯಾ ದೋಷ ವಿನಾಶನೇ ವಿನಿಯೋಗಃ ॥

೧೦. ಗೋಕಾರಸ್ಯ, ಕಶ್ಯಪ ಋಷಿಃ, ಸವಿತಾ ದೇವತಾ, ವಿಷ್ಟಾರ ಪಂಙ್ಕ್ತಿ ಛಂದಃ, ಪ್ರವಾಳ ವರ್ಣಃ, ಶಬ್ದಸ್ತತ್ತ್ವಂ, ದುರ್ಗಾ ಶಕ್ತಿಃ, ಅಧೋ ಮುಖಂ ಮುದ್ರಾ, ಗೋಮತೀ ಕಳಾ, ಅಭೀಷ್ಟದಂ ಫಲಂ, ಳಂ ಬೀಜಂ, ಸ್ವರಿತ ಸ್ವರಃ, ಇಂದ್ರಾತ್ಮಕಂ ಸ್ವರೂಪಂ, ಉದರ ಸ್ಥಾನಂ, ಗೋಹತ್ಯಾ ಕೃತಪಾಪವಿನಾಶನೇ ವಿನಿಯೋಗಃ ॥

೧೧. ದೇಕಾರಸ್ಯ, ಅತ್ರಿ ಋಷಿಃ, ತ್ವಷ್ಟ್ರಾದೇವತಾ, ವಿರಾಟ್ ಛಂದಃ, ಪದ್ಮಪತ್ರವರ್ಣಃ, ಉಪಸ್ಥ ತತ್ತ್ವಂ, ಸರಸ್ವತೀ ಶಕ್ತಿಃ, ವ್ಯಾಪಕಾಂಜಲೀಕಂ ಮುದ್ರಾ, ದರ್ವಿಕಾ ಕಳಾ, ಇಷ್ಟಕನ್ಯಾದಂ ಫಲಂ, ಕ್ಷಂ ಬೀಜಂ, ಅನುದಾತ್ತ ಸ್ವರಃ, ಗಂಧರ್ವಾತ್ಮಕಂ ಸ್ವರೂಪಂ, ಸ್ತನಂ ಸ್ಥಾನಂ, ಸ್ತ್ರೀಹತ್ಯಾ ಕೃತ ಪಾಪ ವಿನಾಶನೇ ವಿನಿಯೋಗಃ ॥

೧೨. ವಕಾರಸ್ಯ, ಭಾರ್ಗವ ಋಷಿಃ, ಪುಷ್ಟಿರ್ದೇವತಾ, ಅಕ್ಷರ ಪಂಙ್ಕ್ತಿ ಛಂದಃ, ಪದ್ಮರಾಗ ವರ್ಣಃ, ವಾಯುಸ್ತತ್ತ್ವಂ, ವಿದ್ರುಮಾ ಶಕ್ತಿಃ, ಶಕಟಂ

ಮುದ್ರಾ, ವರಾ ಕಳಾ, ಶಾಂತಿದಂ ಫಲಂ, ಕಂ ಬೀಜಂ, ಉದಾತ್ತ ಸ್ವರಃ, ಪೂಷಾತ್ಮಕಂ ಸ್ವರೂಪಂ, ಹೃದಯಂ ಸ್ಥಾನಂ, ಗುರುಹತ್ಯಾಕೃತ ಪಾಪ ವಿನಾಶನೇ ವಿನಿಯೋಗಃ ॥

೧೩. ಸ್ಯ ಕಾರಸ್ಯ ಪರಾಶರ ಋಷಿಃ, ಇಂದ್ರೋದೇವತಾ, ಕಾತ್ಯಾಯಿನೀ ಛಂದಃ, ವಜ್ರ ವರ್ಣಃ, ಆಪಃ ತತ್ತ್ವಂ, ವಿಶಾಲ ಶಕ್ತಿಃ, ಯಮಪಾಶಂ ಮುದ್ರಾ, ಸಿದ್ಧಾಂತಾ ಕಳಾ, ಚಿಂತಿತ ಸಿದ್ಧಿದಂ ಫಲಂ, ಖಂ ಬೀಜಂ, ಸ್ವರಿತ ಸ್ವರಃ, ಮಿತ್ರಾತ್ಮಕಂ ಸ್ವರೂಪಂ, ಕಂಠಂ ಸ್ಥಾನಂ, ಮನೋಕೃತ ಪಾಪವಿ ನಾಶನೇ ವಿನಿಯೋಗಃ ॥

೧೪. ಧೀಕಾರಸ್ಯ, ಪುಂಡರೀಕ ಋಷಿಃ, ವಾಯುರ್ದೇವತಾ, ಜ್ಯೋತಿ ಷ್ಮತೀಛಂದಃ, ಚಂದ್ರ ನೀಲ ವರ್ಣಃ, ಪಾಣಿಸ್ತತ್ತ್ವಂ, ಈಶಾ ಶಕ್ತಿಃ, ಗ್ರಥಿತಂ ಮುದ್ರಾ, ಧ್ಯಾನಾ ಕಳಾ, ಕೀರ್ತಿದಾಯಕಂ ಫಲಂ, ಗಂ ಬೀಜಂ, ಅನುದಾತ್ತ ಸ್ವರಃ, ತ್ವಷ್ಟ್ರಾತ್ಮಕಂ ಸ್ವರೂಪಂ, ವದನಂ ಸ್ಥಾನಂ, ಪಿತ ಮಾತೃವಧ ಪಾಪವಿನಾಶನೇ ವಿನಿಯೋಗಃ ॥

೧೫. ಮಕಾರಸ್ಯ, ಕ್ರತು ಋಷಿಃ, ವಾಮದೇವೋ ದೇವತಾ, ತ್ರಿಷ್ಟುಪ್ ಛಂದಃ, ಮೌಕ್ತಿಕವರ್ಣಃ, ವಾಕ್ ತತ್ತ್ವಂ, ವ್ಯಾಪಿನೀಶಕ್ತಿಃ, ಸನ್ಮುಖೋ ನ್ಮುಖಂ ಮುದ್ರಾ, ಮರ್ಯಾದಾ ಕಳಾ, ಸೌಭಾಗ್ಯದಂ ಫಲಂ, ಘಂ ಬೀಜಂ, ಅನುದಾತ್ತ ಸ್ವರಃ, ವಾಸವಾತ್ಮಕಂ ಸ್ವರೂಪಂ, ತಾಲಮಧ್ಯಂ ಸ್ಥಾನಂ, ಪೂರ್ವಜನ್ಮಾರ್ಜಿತ ಪಾಪ ವಿನಾಶನೇ ವಿನಿಯೋಗಃ ॥

೧೬. ಹಿಕಾರಸ್ಯ, ವಕ್ಷಪ್ರಜಾಪತಿ ಋಷಿಃ ಮಿತ್ರಾವರುಣೋ ದೇವತಾ, ಜಾಗರಿತಂ ಛಂದಃ, ಕುಂಕುಮ ವರ್ಣಃ, ಪ್ರಾಣಸ್ತತ್ತ್ವಂ, ವಿಮಲಾ ಶಕ್ತಿಃ, ಪ್ರಲಂಬಂ ಮುದ್ರಾ, ಸ್ಫುಟಾ ಕಳಾ, ಅಭೀಷ್ಟ ಸಿದ್ಧಿದಂ ಫಲಂ, ಙ ಬೀಜಂ, ಅನುದಾತ್ತ ಸ್ವರಃ, ಮರುದಾತ್ಮಕಂ ಸ್ವರೂಪಂ, ನಾಸಾಗ್ರಂ ಸ್ಥಾನಂ, ಅಶೇಷಪಾಪ ವಿನಾಶನೇ ವಿನಿಯೋಗಃ ।

೧೭. ಧಿಕಾರಸ್ಯ ಅಂಗೀರಸ ಋಷಿಃ, ಧಾತಾ ದೇವತಾ, ಜಗತೀ ಛಂದಃ, ಅಂಜನ ವರ್ಣಃ, ಜಿಹ್ವಾ ತತ್ತ್ವಂ, ತಮೋಹಾರಿಣೀ ಶಕ್ತಿಃ, ಮುಷ್ಟಿಕಂ ಮುದ್ರಾ, ಬುದ್ಧಿಃ ಕಳಾ, ತ್ರೈಲೋಕ್ಯ ಮೋಹಕರಂ ಫಲಂ, ಚಂ ಬೀಜಂ, ಉದಾತ್ತ ಸ್ವರಃ, ಸೋಮಾತ್ಮಕಂ ಸ್ವರೂಪಂ, ನೇತ್ರಂ ಸ್ಥಾನಂ, ಪ್ರತಿ ಗ್ರಹಕೃತ ಪಾಪ ವಿನಾಶನೇ ವಿನಿಯೋಗಃ ॥

೧೮. ಯೋೀಕಾರಸ್ಯ, ಕಾರ್ತಿಕೇಯ ಋಷಿಃ, ವಿಶ್ವೇದೇವಾ ದೇವತಾ, ಸಂಯ ಛಂದಃ, ಗಂಗಾ ವರ್ಣಃ, ಚಕ್ಷುಸ್ತತ್ತ್ವಂ, ಸೂಕ್ಷ್ಮಾ ಶಕ್ತಿಃ, ಮತ್ಸ್ಯ ಮುದ್ರಾ, ಯೋಗಮಾತಾ ಕಳಾ, ಸರಾಶ್ರಯಾಘನಾಶನಾತ್ ಫಲಂ, ಭಂ ಬೀಜಂ, ಅನುದಾತ್ತ ಸ್ವರಃ, ಯಮಾತ್ಮಕಂ ಸ್ವರೂಪಂ, ಭ್ರೂಮಧ್ಯಂ ಸ್ಥಾನಂ, ಪ್ರಾಣಿವಧಾಕೃತ ಪಾಪ ವಿನಾಶನೇ ವಿನಿಯೋಗಃ ॥

೧೯. ಯೋೀಕಾರಸ್ಯ, ಮುದ್ಗಲ ಋಷಿಃ, ವಿಷ್ಣುರ್ದೇವತಾ, ಮಹ ಛಂದಃ, ವೈಢೂರ್ಯ ವರ್ಣಃ, ತ್ವಕ್ ತತ್ತ್ವಂ, ವಿಶ್ವಯೋನಿ ಶಕ್ತಿಃ, ಕೂರ್ಮಮುದ್ರಾ, ಯೋಗಾಂತರಾ ಕಳಾ, ದೇವಪ್ರತಿಗ್ರಹದೋಷ (ನಾಶನಾ) ಫಲಂ,ಜಂ ಬೀಜಂ, ಉದಾತ್ತ ಸ್ವರಃ, ವಿಶ್ವೇದೇವಾತ್ಮಕಂ ಸ್ವರೂಪಂ, ಲಲಾಟಂ ಸ್ಥಾನಂ, ಸರ್ವಪಾಪ ವಿನಾಶನೇ ವಿನಿಯೋಗಃ ॥

೨೦. ನಃಕಾರಸ್ಯ, ಉಶನಾ ಋಷಿಃ, ವಾಸವೋದೇವತಾ, ಭೂಃ ಛಂದಃ, ಕ್ಷಾದ್ರ ವರ್ಣಃ, ಶ್ರೋತ್ರಂ ತತ್ತ್ವಂ, ಜಯಾವಹಾ ಶಕ್ತಿಃ, ವರಾಹಕಂ ಮುದ್ರಾ, ಪೃಥ್ವೀಕಳಾ, ತ್ರೈಲೋಕ್ಯದಂ ಫಲಂ, ಧ್ಯಂ ಬೀಜಂ, ಅನು ದಾತ್ತ ಸ್ವರಃ, ಅಶ್ವಿನ್ಯಾತ್ಮಕಂ ಸ್ವರೂಪಂ, ಪಶ್ಚಿಮಮುಖಂ ಸ್ಥಾನಂ, ಈಶ್ವರ ಪದಪ್ರಾಪ್ತ್ಯರ್ಥೇ ವಿನಿಯೋಗಃ ॥

೨೧. ಪ್ರಕಾರಸ್ಯ, ರೋಮಶ ಋಷಿಃ, ಸರ್ವದೈವತ್ವಂ ದೇವತಾ, ಭುವಃ ಛಂದಃ, ಹರಿದ್ರ ವರ್ಣಃ, ಮನಸ್ತತ್ತ್ವಂ, ಪದ್ಮಾಲಯಾ ಶಕ್ತಿಃ, ಸಿಂಹಾ ಕ್ರಾಂತಂ ಮುದ್ರಾ, ಪ್ರಭವಾ ಕಳಾ, ಪರಾನುಗ್ರಹ ಶಕ್ತಿದಂ ಫಲಂ, ಇಂ ಬೀಜಂ, ಅನುದಾತ್ತ ಸ್ವರಃ, ಪ್ರಜಾಪತ್ಯಾತ್ಮಕಂ ಸ್ವರೂಪಂ, ಉತ್ತರ ಮುಖಂ ಸ್ಥಾನಂ, ವಿಷ್ಣುಪದ ಸಿದ್ಧ್ಯರ್ಥೇ ವಿನಿಯೋಗಃ ॥

೨೨. ಚೋೀಕಾರಸ್ಯ ಮೃಗಃ ಋಷಿಃ, ಕುಬೇರೋ ದೇವತಾ, ಸುವಃ ಛಂದಃ, ದುಗ್ಧ ವರ್ಣಃ, ಬುದ್ಧಿಸ್ತತ್ತ್ವಂ, ಪದ್ಮ ಶೋಭಾಶಕ್ತಿಃ, ಸಿಂಹಾ ಕ್ರಾಂತಂ ಮುದ್ರಾ, ವ್ರತ್ಮ ಕಳಾ, ತೇಜಸಾತಿಶಯದಂ ಫಲಂ, ಟಂ ಬೀಜಂ, ಪ್ರಚಯಃ ಸ್ವರಃ, ಸರ್ವದೇವಾತ್ಮಕಂ ಸ್ವರೂಪಂ, ದಕ್ಷಿಣ ಮುಖಂ ಸ್ಥಾನಂ, ರುದ್ರಪದ ಪ್ರಾಪ್ತ್ಯರ್ಥೇ ವಿನಿಯೋಗಃ ॥

೨೩. ದಕಾರಸ್ಯ, ಅಗಸ್ತ್ಯ ಋಷಿಃ, ಅಶ್ವಿನಿ ದೇವತಾ, ಭೂರ್ಭುವಃ ಛಂದಃ, ಸೂರ್ಯ ವರ್ಣಃ, ಅಹಂಕಾರಸ್ತತ್ತ್ವಂ, ಪದ್ಮರೂಪಾ ಶಕ್ತಿಃ,

ಮುದ್ಗರಂ ಮುದ್ರಾ, ನಿಧ್ಯಮಾನಾ ಕಾಳಾ, ಸ್ವರ್ಗದಂ ಫಲಂ. ಠಂ ಬೀಜಂ, ಉದಾತ್ತ ಸ್ವರಃ, ರುದ್ರಾತ್ಮಕಂ, ಬ್ರಹ್ಮಪದ ಪ್ರಾಪ್ತ್ಯರ್ಥೇ ವಿನಿಯೋಗಃ ॥

೨೪. **ಯಾತ್ಕಾರಸ್ಯ**, ವಿಶ್ವಾಮಿತ್ರ ಋಷಿಃ, ಬ್ರಹ್ಮಾ ದೇವತಾ, ದೈವೀ ಗಾಯತ್ರೀ ಛಂದಃ, ಚಂಪಕ ವರ್ಣಃ, ಅವ್ಯಕ್ತಂ ತತ್ತ್ವಂ, ಬ್ರಾಹ್ಮೀ ಶಕ್ತಿಃ, ಪಲ್ಲವಂ ಮುದ್ರಾ, ನಿರಂಜನಾ ಕಳಾ, ಸ್ವರ್ಗಲೋಕದಂ ಫಲಂ, ವಂ, ಜಂ, ಸಂ, ಹಂ ಬೀಜಂ, ಉದಾತ್ತ ಸ್ವರಃ, ಬ್ರಹ್ಮಾತ್ಮಕಂ ಸ್ವರೂಪಂ, ಊರ್ಧ್ವಮುಖಸ್ಥಾನಂ, ಬ್ರಹ್ಮ, ವಿಷ್ಣು, ರುದ್ರ ಪ್ರಸಾದ ಸಿದ್ಧ್ಯರ್ಥೇ ವಿನಿಯೋಗಃ ॥

ನಾಭಿಸ್ಥಾನೇ ಗಾಯತ್ರೀ ನ್ಯಸೇತ್ (ಶ್ರೀಗಾಯತ್ರೀ ಕಲ್ಪ)

ಈ ರೀತಿ ಜಪ ಮಾಡುವುದರಿಂದ ಆರುಲಕ್ಷ ಗಾಯತ್ರೀ ಜಪ ಮಾಡಿದ ಫಲವು ಬರುತ್ತದೆ ಎಂದು ಗಾಯತ್ರೀ ಸಂಹಿತೆಯಲ್ಲಿ ವಿಶದೀಕರಿಸಿದೆ.

## ನಿಯಾಮಕ ರೂಪಾದಿ ವಿವರ

| ಸಂಖ್ಯೆ | ಗಾಯತ್ರೀ ವರ್ಣಂ | ನಿಯಾಮಕ ರೂಪ | ಮಾತೃಕೆ | ಮಹಾಬಂಧ ಮುದ್ರೆ |
|---|---|---|---|---|
| ೧ | ತತ್ | ಕೇಶವ | ಚಂಡಿಕೇಶ್ವರೀ | ಮಹಾಮುದ್ರಾ |
| ೨ | ಸ | ನಾರಾಯಣ | ಅಜಿತಬಲಾ | ನಭೋಮುದ್ರಾ |
| ೩ | ವಿ | ಮಾಧವ | ದುರಿತಾರೀ | ಉಡ್ಡೀಯಾನ |
| ೪ | ತು | ಗೋವಿಂದ | ಕಾಳಿಕಾ | ಜಾಲಂಧರ |
| ೫ | ರ್ವ | ವಿಷ್ಣು | ಮಹಾಕಾಳೀ | ಮೂಲಬಂಧ |
| ೬ | ರೇ | ಮಧುಸೂದನ | ಶ್ಯಾಮ | ಮಹಾಬಂಧ |
| ೭ | ಣೀ | ತ್ರಿವಿಕ್ರಮ | ಶಾಂತಾ | ಖೇಚರೀ |
| ೮ | ಯಂ | ವಾಮನ | ಜ್ವಾಲಾ | ವಿಪರೀತಕರಣಿ |
| ೯ | ಭ | ಶ್ರೀಧರ | ತಾರಿಕಾ | ಯೋನಿ |
| ೧೦ | ರ್ಗೋ | ಹೃಷೀಕೇಶ | ಅಶೋಕಾ | ವ್ರಜೋಲಿ |
| ೧೧ | ದೇ | ಪದ್ಮನಾಭ | ಶ್ರೀವತ್ಸಾ | ಶಕ್ತಿಚಾಲಿನೀ |

| | | | | |
|---|---|---|---|---|
| ೧೨ | ವ | ದಾಮೋದರ | ಚಂಡೀ | ತಡಾಗೀ |
| ೧೩ | ಸ್ಯ | ಸಂಕರ್ಷಣ | ವಿಜಯಾ | ಮಾಂಡವೀ |
| ೧೪ | ಧೀ | ವಾಸುದೇವ | ಅಂಕುಶಾ | ಶಾಂಭವೀ |
| ೧೫ | ಮ | ಪ್ರದ್ಯುಮ್ನ | ಪನ್ನಗಾ | ಅಶ್ವಿನೀ |
| ೧೬ | ಹಿ | ಅನಿರುದ್ಧ | ನಿರ್ವಾಣಾ | ವಾಶಿನೀ |
| ೧೭ | ಧಿ | ಪುರುಷೋತ್ತಮ | ಬಲಾ | ಕಾಕೀ |
| ೧೮ | ಯೋ | ಅಧೋಕ್ಷಜ | ಧಾರಿಣೀ | ಮಾತಂಗೀ |
| ೧೯ | ಯೋ | ನಾರಸಿಂಹ | ವರಣಪ್ರಿಯಾ | ಭುಜಂಗಿನಿ |
| ೨೦ | ನಃ | ಅಚ್ಯುತ | ನರದತ್ತಾ | ಪಾರ್ಥವೀ |
| ೨೧ | ಪ್ರ | ಜನಾರ್ದನ | ಗಾಂಧಾರೀ | ಆಪಂಭವೀ |
| ೨೨ | ಚೋ | ಉಪೇಂದ್ರ | ಅಂಬಿಕಾ | ವೈಶ್ವಾನರೀ |
| ೨೩ | ದ | ಹರಿ(ಹರ) | ಪದ್ಮಾವತೀ | ಕಥರೀ |
| ೨೪ | ಯಾತ್ | ಶ್ರೀಕೃಷ್ಣ | ಸಿದ್ಧಾಯಿಕಾ | ಆಕಾಶೀ |

**ಶ್ರೀಗಾಯತ್ರಿಯಲ್ಲಿ ಎಲ್ಲಾ ಮಂತ್ರಗಳೂ, ಅವುಗಳ ಶಕ್ತಿಗಳೂ ಅಡಗಿವೆ.**

ಗಾಯತ್ರೀ ಜಪದಿಂದ ತೊಲಗಲಿ ಸಕಲ ವಿಧ ಸಂತಾಪ !
ಪ್ರೇಮ ಮಗ್ನರಾಗಲಿ ಭಕ್ತ ಜನ, ಮಾಡುತ ಸದಾ ಜಪ ॥

## ಶ್ರೀಗಾಯತ್ರೀ-ಸಂಗೀತಶಾಸ್ತ್ರ

ಸಂಗೀತಶಾಸ್ತ್ರವು ಗಾಯತ್ರೀ ಮಂತ್ರದ ಆಧಾರದ ಮೇಲೆಯೇ ಇದೆ. ಶ್ರೀಸರಸ್ವತೀ ದೇವಿಯ ಹಸ್ತದಲ್ಲಿ ವೀಣೆಯಿದೆ. ವೀಣೆ ಸಂಗೀತದಲ್ಲಿ ಬಹಳ ಪುರಾತನವಾದ ಹಾಗೂ ಪ್ರಸಿದ್ಧವಾದ ವಾದ್ಯ. ವೀಣೆಯಲ್ಲಿ ಇಪ್ಪತ್ತುನಾಲ್ಕು ಮನೆಗಳಿವೆ. ಈ ಇಪ್ಪತ್ತುನಾಲ್ಕು ಮನೆಗಳೂ ಶ್ರೀಗಾಯತ್ರೀ ಮಂತ್ರದ ಇಪ್ಪತ್ತುನಾಲ್ಕು ಅಕ್ಷರಗಳ ತತ್ತ್ವಗಳೇ ಆಗಿವೆ. ಅಲ್ಲದೆ ಗಾಯತ್ರೀ ಮಂತ್ರದ ಅಂಗವಾಗಿರುವ ಸಪ್ತವ್ಯಾಹೃತಿಗಳೇ ಸಂಗೀತಶಾಸ್ತ್ರದ ಸಪ್ತಸ್ವರಗಳಾಗಿ ವೀಣೆಯ ಇಪ್ಪತ್ತುನಾಲ್ಕು ಮನೆಗಳಲ್ಲೂ ಇವೆ. ವೀಣೆಯ ನಾಲ್ಕು ತಂತಿಗಳೇ ನಾಲ್ಕು ವೇದಗಳು. ಗಾಯತ್ರೀ ಮಂತ್ರದ ಮೂರು ಪಾದಗಳನ್ನು ಅನುಸರಿಸಿಯೇ ಮಂದ್ರ, ಮಧ್ಯಮ ಮತ್ತು ತಾರಕಗಳೆಂಬ ಮೂರು ಸ್ಥಾಯಿಗಳೂ

ಏರ್ಪಟ್ಟಿರುವುವು. ವರ್ಣಗಳಲ್ಲಿ ಉದಾತ್ತ, ಅನುದಾತ್ತ, ಸ್ವರಿತ ಮತ್ತು ಪ್ರಚಯಗಳೆಂಬ ವೇದಗಳಲ್ಲಿರುವ ನಾಲ್ಕು ಭೇದಗಳನ್ನು ಅನುಸರಿಸಿಯೇ ಸಂಗೀತಶಾಸ್ತ್ರದಲ್ಲಿಯೂ ಸ್ಥಾಯಿ, ಆರೋಹ, ಅವರೋಹ ಮತ್ತು ಸಂಚಾರಿಗಳೆಂಬ ನಾಲ್ಕು ಭೇದಗಳಿರುವುವು. ಪ್ರಕೃತಿರೂಪವಾದ ಶುದ್ಧ ವೇದಾಧ್ಯಯನವು ಪದ, ಕ್ರಮ, ಜಟೆ ಮತ್ತು ಘನ ಮುಂತಾದ ವಿಕೃತಿಗಳ ಸಂಬಂಧವಾಗಿರುವುದನ್ನು ಅನುಸರಿಸಿಯೇ ಸಂಗೀತಶಾಸ್ತ್ರದಲ್ಲಿಯೂ ಶುದ್ಧ ಗಾಯನವು ಕಾಲ, ಕ್ರಿಯೆ, ಪರಿಮಾಣ ಮತ್ತು ಸ್ವರೂಪವಾದ ತಾಳಕ್ಕೆ ಸಂಬಂಧಿಸಿರುವುದಾಗಿದೆ. ಪರಾಶಕ್ತಿಯಾದ ಶ್ರೀಗಾಯತ್ರೀ ದೇವಿಯ ಅವತಾರಗಳಾದ ಸಪ್ತಮಾತೃಕೆಯರೇ ಸಪ್ತವ್ಯಾಹೃತಿಗಳ ರೂಪದಲ್ಲೂ ಮತ್ತು ಸಂಗೀತಶಾಸ್ತ್ರದ **ಸ, ರಿ, ಗ, ಮ, ಪ, ದ,** ನಿ ಗಳಾದ ಸಪ್ತಸ್ವರಗಳ ರೂಪದಲ್ಲೂ ಇರುತ್ತಾರೆ. ತಾಳಗಳಿಗೂ ಸ್ವರಗಳೇ ಜನಕಸ್ಥಾನಗಳಾಗಿವೆ. ಈ ತತ್ತ್ವಕ್ಕೆ ಅನುಸಾರವಾಗಿಯೇ ಸಪ್ತಸ್ವರಗಳಿರುವಂತೆ ಸಪ್ತತಾಳಗಳೇ ಇರುತ್ತವೆ. ಪಕ್ಕದ ಮತ್ತು ಮೇಲಿನ ತಂತಿಗಳೆಲ್ಲಾ ಸೇರಿಯೇ ಪೂರ್ಣ ವಾದ್ಯವಾದ ವೀಣೆ ಎನಿಸುವುದು (ಚಿತ್ರ ನೋಡಿ, ಪುಟ 174).

ಓಂಕಾರವೂ ನಾದಸ್ವರೂಪವಾದುದು ಷಡ್ಜಾದಿ ಸಪ್ತಸ್ವರಗಳೂ ನಾದಸ್ವರೂಪವಾದವುಗಳು. ಆದುದರಿಂದ ನಾದಸ್ವರೂಪವಾದ ಓಂಕಾರದಲ್ಲಿಯೇ ಸಪ್ತಸ್ವರಗಳೂ ಅಡಕವಾಗಿವೆ. ಓಂಕಾರನಾದದಲ್ಲಿ ಗಾಯತ್ರೀ, ಸಾವಿತ್ರೀ, ಸರಸ್ವತೀ ಎಂಬ ಶಕ್ತಿತ್ರಯರೂಪವಾದ ಮೂರು ಮಾತೃಕೆಗಳಿರುವುವು ಎಂದು ಸಂಗೀತ ಶಾಸ್ತ್ರದಲ್ಲಿ ಹೇಳಿದೆ. ಈ ಮೂರು ಮಾತೃಕೆಗಳೇ ಸಪ್ತಮಾತೃಕೆಗಳಾಗಿ, ಸಪ್ತವ್ಯಾಹೃತಿ ಮತ್ತು ಸಪ್ತಸ್ವರಗಳೆನಿಸಿರುವುವು. (ಪುಟ 177 ನೋಡಿ)

ಸಪ್ತಸ್ವರಗಳೂ ಸ್ವಯಂಪ್ರಕಾಶವಾದುವುಗಳೆಂದೂ, ಪರಾತ್ಪರವಸ್ತುವೆಂದೂ ಸೂಚಿಸುವ ತತ್ತ್ವಕ್ಕೋಸ್ಕರವೇ ಸಪ್ತಸ್ವರಗಳಿಗೂ ಸಪ್ತಮಾತೃಕೆಯರೇ ಅಧಿದೇವತೆಗಳಾಗಿರುವರು. ಕೊಳಲಿನಲ್ಲಿಯೂ ಸಪ್ತಸ್ವರಗಳಿಗನುಸಾರವಾಗಿ ಸಪ್ತರಂಧ್ರಗಳಿರುವುವು.

ಅನುಸಾರಿಣಿ, ಅನುಪಂಚಮ ಮತ್ತು ಅನುಮಂದ್ರಗಳೆಂಬ ವೀಣೆಯ ಪಕ್ಕದ ಮೂರು ತಂತಿಗಳು ಕಾಲ, ಕ್ರಿಯಾ ಮತ್ತು ಪರಿಮಾಣಗಳ ಸ್ವರೂಪದಿಂದ ತಾಳ ತಂತಿಗಳಾಗಿವೆ.

ಸಾರಿಣಿ–ಜ್ಞಾನಶಕ್ತಿ
ಪಂಚಮ–ಕ್ರಿಯಾಶಕ್ತಿ
ಮಂದ್ರ–ಇಚ್ಛಾಶಕ್ತಿ
ಅನುಮಂದ್ರ–ಇಚ್ಛಾಶಕ್ತಿಯ ಅನುವರ್ತಿ
ಮಂದ್ರಸ್ಥಾಯಿ–ತಮೋಗುಣ
ಮಧ್ಯಮಸ್ಥಾಯಿ–ರಜೋಗುಣ
ತಾರಸ್ಥಾಯಿ–ಸತ್ತ್ವಗುಣ

---

ಪ್ರಭಾತಾಯಾಂ ತು ಶರ್ವರ್ಯಾಂ ವಿಶ್ವಾಮಿತ್ರೋ ಮಹಾಮುನಿಃ । ಅಭ್ಯಭಾಷತ ಕಾಕುತ್ಸ್ಥೌ ಶಯಾನೌ ಪರ್ಣ ಸಂಸ್ತರೇ ॥ ಕೌಸಲ್ಯಾ ಸುಪ್ರಜಾರಾಮ ಪೂರ್ವಾಸಂಧ್ಯಾ ಪ್ರವರ್ತತೇ । ಉತ್ತಿಷ್ಠ ನರಶಾರ್ದೂಲ ಕರ್ತವ್ಯಂ ದೈವಮಾಹ್ನಿಕಂ ॥ ತಸ್ಯರ್ಷೇಃ ಪರಮೋದಾರಂ ವಚಃ ಶ್ರುತ್ವಾ ನೃಪಾತ್ಮಜೌ । ಸ್ನಾತ್ವಾ ಕೃತೋದಕೌ ವೀರೌ ಜೇಪತುಃ ಪರಮಂ ಜಪಂ ॥ (ಮನು 2–83)

ಸರ್ವ ವೇದ ಸಾರಭೂತಾ ಗಾಯತ್ರ್ಯಾಸ್ತು ಸಮರ್ಚನಾ । ಬ್ರಹ್ಮಾದಯೋಽಪಿ ಸಂಧ್ಯಾಯಾಂ ತಾಂ ಧ್ಯಾಯಂತಿ ಜಪಂತಿ ಚ ॥ (ದೇವೀಭಾಗವತ)

ಗಾಯತ್ರ್ಯಾಸ್ತು ಪರನ್ನಾಸ್ತಿ ಶೋಧನಂ ಪಾಪಕರ್ಮಣಾಂ । ಮಹಾವ್ಯಾಹೃತಿ ಸಂಯುಕ್ತಾಂ ಪ್ರಣವೇನ ಚ ಸಂಜಪೇತ್ ॥ (ಸಂವತ ಸ್ಮೃತಿ–218)

ಗಾಯತ್ರ್ಯಾಃ ಪರಮಂ ನಾಸ್ತಿ ದಿವಿ ಚೇಹ ಚ ಪಾವನಂ । ಹಸ್ತತ್ರಾಣ ಪ್ರದಾದೇವೀ ಪತತಾಂ ನರಕಾರ್ಣವೇ ॥ (ಶಂಖಸ್ಮೃತಿ)

| ಸಂಖ್ಯೆ | ಸಪ್ತ ಮಾತೃಕೆಯರು | ಸಪ್ತ ವ್ಯಾಹೃತಿಗಳು | ಸಪ್ತಸ್ವರಗಳು | ಸಂಗೀತಶಾಸ್ತ್ರದ ಸ್ವರಗಳು | ಗ್ರಹಗಳು | ವಾರಗಳು |
|---|---|---|---|---|---|---|
| ೧ | ಬ್ರಾಹ್ಮೀ | ಸತ್ಯಂ | ಸ (ಅವರ್ಗ) | ಷಡ್ಜ | ರವಿ | ಭಾನು |
| ೨ | ಮಾಹೇಶ್ವರೀ | ತಪಃ | ರಿ (ಕವರ್ಗ) | ಋಷಭ | ಚಂದ್ರ | ಸೋಮ |
| ೩ | ಕೌಮಾರೀ | ಜನಃ | ಗ (ಚವರ್ಗ) | ಗಾಂಧಾರ | ಕುಜ | ಮಂಗಳ |
| ೪ | ವೈಷ್ಣವೀ | ಮಹಃ | ಮ (ಟವರ್ಗ) | ಮಧ್ಯಮ | ಬುಧ | ಬುಧ |
| ೫ | ವಾರಾಹೀ | ಸುವಃ | ಪ (ತವರ್ಗ) | ಪಂಚಮ | ಗುರು | ಗುರು |
| ೬ | ಇಂದ್ರಾಣೀ | ಭುವಃ | ದ (ಪವರ್ಗ) | ಧೈವತ | ಶುಕ್ರ | ಶುಕ್ರ |
| ೭ | ಚಾಮುಂಡಾ | ಭೂಃ | ನಿ (ಯವರ್ಗ) | ನಿಷಾದ | ಶನಿ | ಶನಿ |

## ಶ್ರೀಗಾಯತ್ರೀ ಮಂತ್ರದ ಪ್ರತಿ ಪದದಲ್ಲಿಯೂ ಇರುವ ಸ್ವರಗಳು ಮತ್ತು ಅವುಗಳ ಶ್ರುತಿಗಳು

| | | |
|---|---|---|
| ೧ ತತ್ | ಷಡ್ಜ | |
| ೨ ಸವಿತುಃ | ಶುದ್ಧ ಋಷಭ, ಶುದ್ಧ ಗಾಂಧಾರ, ಸಾಧಾರಣ ಗಾಂಧಾರ, ಷಟ್ಶ್ರುತಿ ಋಷಭ, ಚತುಶ್ಶ್ರುತಿ ಋಷಭ. | ಗಾಯತ್ರೀ೧೨ ಅಕ್ಷರಗಳು |
| ೩ ವರೇಣೀ ಯಂ | ಅಂತರ ಗಾಂಧಾರ, ಮಧ್ಯಮ, ಪ್ರತಿ ಮಧ್ಯಮ, ಪಂಚಮ, | ಆರೋಹಣ (ಮೊದಲ ೧೨) |
| ೪ ಭರ್ಗಃ | ಧೈವತ, ಚತುಶ್ಶ್ರುತಿ, ಧೈವತ, ಶುದ್ಧ ನಿಷಾದ. | (ವರ್ಣಗಳು) |
| ೫ ದೇವಸ್ಯ | ಷಟ್ಶ್ರುತಿ ಧೈವತ, ಕೈಶಿಕೀ ನಿಷಾದ, ಕಾಕಲೀ ನಿಷಾದ, ಷಡ್ಜ. | |
| ೬ ಧೀಮಹಿ | ಶುದ್ಧ ಋಷಭ, ಚತುಶ್ಶ್ರುತಿ ಋಷಭ, ಷಟ್ಶ್ರುತಿ ಋಷಭ, ಶುದ್ಧ ಗಾಂಧಾರ, ಸಾಧಾರಣ ಗಾಂಧಾರ. | ಗಾಯತ್ರೀ ೧೨ ಅಕ್ಷರಗಳು |
| ೭ ಧಿಯೋ ಯೋ ನಃ | ಅಂತರ ಗಾಂಧಾರ, ಮಧ್ಯಮ, ಪ್ರತಿ ಮಧ್ಯಮ, ಪಂಚಮ. | ಅವರೋಹಣ (ಕೊನೆಯ ೧೨) |
| ೮ ಪ್ರಚೋ ದಯಾತ್ | ಶುದ್ಧ ಧೈವತ, ಕೈಶಿಕೀ ನಿಷಾದ, ಷಡ್ಜ, ಕಾಕಲೀ ನಿಷಾದ. | (ವರ್ಣಗಳು) |

# ಶ್ರೀಗಾಯತ್ರೀ-ಜ್ಯೋತಿಷ

ಜ್ಯೋತಿಷ ಶಾಸ್ತ್ರವು ಶ್ರೀಗಾಯತ್ರೀದೇವಿಯ ಮಂತ್ರವಾದ ೨೪ ಬೀಜಾಕ್ಷರಗಳ ತತ್ತ್ವಗಳ ಮೇಲೆ ಇರುವುದು. ಗಾಯತ್ರೀ ಮಂತ್ರವನ್ನು ಆಧಾರವಾಗಿಟ್ಟುಕೊಂಡು ಈ ಮಂತ್ರಕ್ಕೆ ಸಮಂಜಸವಾಗಿ ಅನ್ವಯವಾಗುವ ಜ್ಯೋತಿಷ ಶಾಸ್ತ್ರಕ್ಕೆ ಮೂಲರೂಪವಾದ ಮೇಷ, ವೃಷಭ ಮುಂತಾದ ದ್ವಾದಶ ರಾಶಿಗಳ ಅಸ್ತಿಭಾರದಂತಿರುವ ನಕ್ಷತ್ರಗಳು, ನಕ್ಷತ್ರಗಳಿಗೆ ದಶೆಗಳು, ಇತ್ಯಾದಿ ವಿಚಾರಗಳನ್ನು ಈ ಕೆಳಗೆ ವಿವರಿಸಿದೆ.

| | | | | | | |
|---|---|---|---|---|---|---|
| ಗಾಯತ್ರೀಮಂತ್ರ | ತತ್ | | | ಸವಿತುಃ | | |
| ರಾಶಿ | ಮೇಷ | | | ವೃಷಭ | | |
| ರಾಶ್ಯಾಧಿಪತಿ | ಅಂಗಾರಕ | | | ಶುಕ್ರ | | |
| ನಕ್ಷತ್ರಗಳು | ಅಶ್ವಿನೀ | ಭರಣೀ | ಕೃತ್ತಿಕಾ | ಕೃತ್ತಿಕಾ | ರೋಹಿಣಿ | ಮೃಗಶಿರಾ |
| ಪಾದಗಳು | ೪ | ೪ | ೧ | ೩ | ೪ | ೨ |
| ನಕ್ಷತ್ರದಶಾ | ಕೇತು | ಶುಕ್ರ | ರವಿ | ರವಿ | ಚಂದ್ರ | ಕುಜ |

| | | | | | | |
|---|---|---|---|---|---|---|
| ಗಾಯತ್ರೀಮಂತ್ರ | | | | ವರೇಣೀಯಂ | | |
| ರಾಶಿ | ಮಿಥುನ | | | ಕರ್ಕಾಟಕ | | |
| ರಾಶ್ಯಾಧಿಪತಿ | ಬುಧ | | | ಚಂದ್ರ | | |
| ನಕ್ಷತ್ರಗಳು | ಮೃಗಶಿರಾ | ಆರ್ದ್ರಾ | ಪುನರ್ವಸು | ಪುನರ್ವಸು | ಪುಷ್ಯ | ಆಶ್ಲೇಷಾ |
| ಪಾದಗಳು | ೨ | ೪ | ೩ | ೧ | ೪ | ೪ |
| ನಕ್ಷತ್ರದಶಾ | ಕುಜ | ರಾಹು | ಗುರು | ಗುರು | ಶನಿ | ಬುಧ |

| | | | | | | |
|---|---|---|---|---|---|---|
| ಗಾಯತ್ರೀಮಂತ್ರ | ಭರ್ಗಃ | | | ದೇವಸ್ಯ | | |
| ರಾಶಿ | ಸಿಂಹ | | | ಕನ್ಯಾ | | |
| ರಾಶ್ಯಾಧಿಪತಿ | ರವಿ | | | ಬುಧ | | |
| ನಕ್ಷತ್ರಗಳು | ಮಖಾ | ಪುಬ್ಬೆ | ಉತ್ತರ | ಉತ್ತರ | ಹಸ್ತ | ಚಿತ್ತ |
| ಪಾದಗಳು | ೪ | ೪ | ೧ | ೩ | ೪ | ೨ |
| ನಕ್ಷತ್ರದಶಾ | ಕೇತು | ಶುಕ್ರ | ರವಿ | ರವಿ | ಚಂದ್ರ | ಕುಜ |

| | | | | | | |
|---|---|---|---|---|---|---|
| ಗಾಯತ್ರೀಮಂತ್ರ | | | | ಧೀಮಹಿ | | |
| ರಾಶಿ | | ತುಲಾ | | ವೃಶ್ಚಿಕಾ | | |
| ರಾಶ್ಯಾಧಿಪತಿ | | ಶುಕ್ರ | | ಅಂಗಾರಕ | | |
| ನಕ್ಷತ್ರಗಳು | ಚಿತ್ತಾ | ಸ್ವಾತಿ | ವಿಶಾಖಾ | ವಿಶಾಖಾ | ಅನೂರಾಧ | ಜೇಷ್ಠಾ |
| ಪಾದಗಳು | ೨ | ೪ | ೩ | ೧ | ೪ | ೪ |
| ನಕ್ಷತ್ರದಶಾ | ಕುಜ | ರಾಹು | ಗುರು | ಗುರು | ಶನಿ | ಬುಧ |

| | | | | | | |
|---|---|---|---|---|---|---|
| ಗಾಯತ್ರೀಮಂತ್ರ | | ಧೀಯಃ | | | ಯಃ ನಃ | |
| ರಾಶಿ | | ಧನಸ್ಸು | | | ಮಕರ | |
| ರಾಶ್ಯಾಧಿಪತಿ | | ಬೃಹಸ್ಪತಿ | | | ಶನಿ | |
| ನಕ್ಷತ್ರಗಳು | ಮೂಲಾ | ಪೂರ್ವಾಷಾಢ | ಉತ್ತರಾಷಾಡಾ | ಉತ್ತರಾಷಾಡಾ | ಶ್ರವಣ | ಧನಿಷ್ಠಾ |
| ಪಾದಗಳು | ೪ | ೪ | ೧ | ೩ | ೪ | ೨ |
| ನಕ್ಷತ್ರದಶಾ | ಕೇತು | ಶುಕ್ರ | ರವಿ | ರವಿ | ಚಂದ್ರ | ಕುಜ |

| | | | | | | |
|---|---|---|---|---|---|---|
| ಗಾಯತ್ರೀಮಂತ್ರ | | | ಪ್ರಚೋದಯಾತ್ | | | |
| ರಾಶಿ | | ಕುಂಭ | | ಮೀನ | | |
| ರಾಶ್ಯಾಧಿಪತಿ | | ಶನಿ | | ಬೃಹಸ್ಪತಿ | | |
| ನಕ್ಷತ್ರಗಳು | ಧನಿಷ್ಠಾ | ಶತಭಿಷಾ | ಪೂರ್ವಾಭಾದ್ರಾ | ಪೂರ್ವಾಭಾದ್ರಾ | ಉತ್ತರಾಭಾದ್ರಾ | ರೇವತಿ |
| ಪಾದಗಳು | ೨ | ೪ | ೩ | ೧ | ೪ | ೪ |
| ನಕ್ಷತ್ರದಶಾ | ಕುಜ | ರಾಹು | ಗುರು | ಗುರು | ಶನಿ | ಬುಧ |

## ದೈನಂದಿನ ಕಾಲಚಕ್ರ

| | | | | | |
|---|---|---|---|---|---|
| | ಮಧ್ಯರಾತ್ರಿ | | ಪ್ರಾತಃಕಾಲ | | ಮಧ್ಯಾಹ್ನ |
| ತತ್ | ಸವಿತುಃ | ವರೇಣೀ | ಯಂ | ಭರ್ಗಃ | ದೇವಸ್ಯ |
| ೧ | ೨ ೩ ೪ | ೫ ೬ ೭ | ೮ | ೯ ೧೦ ೧೧ | ೧೨ ೧೩ |
| | ಸೃಷ್ಟಿಪೂರ್ಣ | | ವ್ಯಾಪಾರಾಭಿವೃದ್ಧಿ | | |

| | | | |
|---|---|---|---|
| | ಕ್ಷೀಣತೆ | ಸಾಯಂಕಾಲ | ಮಧ್ಯರಾತ್ರಿ |
| ಧೀ | ಮಹಿ | ಧಿ ಯೋ ಯೋ ನಃ | ಪ್ರಚೋದ ಯಾತ್ |
| ೧೪ | ೧೫ ೧೬ | ೧೭ ೧೮ ೧೯ ೨೦ | ೨೧ ೨೨ ೨೩ ೨೪ |
| | ವ್ಯಾಪಾರಲಯ | ಸೃಷ್ಟಿಯೂ ಲಯ | |

## ಋತುಧರ್ಮ

### (೧) ಶುಕ್ಲಪಕ್ಷ

| | |
|---|---|
| ಮಧ್ಯರಾತ್ರಿಯಿಂದ ಮಧ್ಯಾಹ್ನದ ವರೆಗಿನ ೧೫ ಮುಹೂರ್ತಗಳು | ೧ ೨ ೩ ೪ ೫ ೬ ೭ ೮ |
| ಶುಕ್ಲಪಕ್ಷದ ತಿಥಿಗಳು | ಪಾಡ್ಯ ಬಿ ತ ಚೌ ಪಂ ಷ ಸ ಅ |
| ಋತುಗಳು | ವಸಂತ ಗ್ರೀಷ್ಮ ವರ್ಷಾ |
| ಶ್ರೀಗಾಯತ್ರೀಮಂತ್ರ | ತತ್ ಸವಿತುಃ ವರೇ ಣೀ |
| ಸ್ವರಗಳು | ರಿ ರಿ ರಿ ಗ ಗ ಗ ಮ ಮ |

### (೨)

| | |
|---|---|
| ಮಧ್ಯರಾತ್ರಿಯಿಂದ ಮಧ್ಯಾಹ್ನದ ವರೆಗಿನ ೧೫ ಮುಹೂರ್ತಗಳು | ೯ ೧೦ ೧೧ ೧೨ ೧೩ ೧೪ ೧೫ |
| ಶುಕ್ಲಪಕ್ಷದ ತಿಥಿಗಳು | ನ ದ ಏ ದ್ವಾ ತ್ರ ಚ ಪೂರ್ಣಿಮಾ |
| ಋತುಗಳು | ಶರತ್ ಹೇಮಂತ ಶಿಶಿರ |
| ಶ್ರೀಗಾಯತ್ರೀ ಮಂತ್ರ | ಯಂ ಭರ್ಗಃ ದೇವಸ್ಯ |
| ಸ್ವರಗಳು | ಪ ಧ ಧ ಧ ನಿ ನಿ ನಿ ಸ |

### (೧) ಕೃಷ್ಣಪಕ್ಷ

| | |
|---|---|
| ಮಧ್ಯಾಹ್ನದಿಂದ ಮಧ್ಯರಾತ್ರಿ ವರೆಗಿನ ೧೫ ಮುಹೂರ್ತಗಳು | ೧ ೨ ೩ ೪ ೫ ೬ ೭ ೮ |
| ಕೃಷ್ಣಪಕ್ಷದ ತಿಥಿಗಳು | ಪಾಡ್ಯ ಬಿ ತ ಚೌ ಪಂ ಷ ಸ ಅ |
| ಋತುಗಳು | ವಸಂತ ಗ್ರೀಷ್ಮಾ ವರ್ಷಾ |
| ಶ್ರೀಗಾಯತ್ರೀ ಮಂತ್ರ | ಧೀಮಹಿ ಧಿಯೋ |
| ಸ್ವರಗಳು | ರಿ ರಿ ರಿ ಗ ಗ ಗ ಮ ಮ |

| | (೨) |
|---|---|
| ಮಧ್ಯಾಹ್ನದಿಂದ ಮಧ್ಯರಾತ್ರಿ ವರೆಗಿನ ೧೫ ಮುಹೂರ್ತಗಳು | ೯ ೧೦ ೧೧ ೧೨ ೧೩ ೧೪ ೧೫ |
| ಕೃಷ್ಣಪಕ್ಷದ ತಿಥಿಗಳು | ನ ದ ಏ ದ್ವಾ ತ್ರ ಚ ಅಮಾವಾಸ್ಯೆ |
| ಋತುಗಳು | ಶರತ್ ಹೇಮಂತ ಶಿಶಿರ |
| ಶ್ರೀಗಾಯತ್ರೀ ಮಂತ್ರ | ಯೋನಃ ಪ್ರಚೋದಯಾತ್ |
| ಸ್ವರಗಳು | ಪ ದ ದ ದ ನಿ ನಿ ನಿ ಸ |

## ಶ್ರೀಗಾಯತ್ರೀ ರಾಮಾಯಣ

ರಾಮಾಯಣವು ಶ್ರೀಗಾಯತ್ರೀ ದೇವಿಯ ಸ್ವರೂಪವಾಗಿರುವುದೆಂದು ವಾಲ್ಮೀಕಿ ಮಹರ್ಷಿಗಳೇ ಉತ್ತರ ರಾಮಾಯಣದಲ್ಲಿ ಹೇಳಿರುತ್ತಾರೆ. ಆಗುದರಿಂದ ಶ್ರೀಗಾಯತ್ರೀ ಮೂಲಮಂತ್ರವೇ ಶ್ರೀಮದ್ರಾಮಾಯಣ ವಾಗಿದೆ. ಶ್ರೀಗಾಯತ್ರೀ ಸ್ವರೂಪವು ಇಪ್ಪತ್ತುನಾಲ್ಕು ಅಕ್ಷರಗಳುಳ್ಳದ್ದು. ಈ ಗಾಯತ್ರಿಯ ಇಪ್ಪತ್ತುನಾಲ್ಕು ಅಕ್ಷರಕ್ಕೆ ಸರಿಯಾಗಿ ಶ್ರೀಮದ್ರಾಮಾಯಣದಲ್ಲಿ ಇಪ್ಪತ್ತುನಾಲ್ಕು ಸಾವಿರ ಶ್ಲೋಕಗಳಿವೆ. ಅಂದರೆ ಶ್ರೀಗಾಯತ್ರೀ ಮೂಲಮಂತ್ರದ ಒಂದೊಂದು ಅಕ್ಷರಕ್ಕೂ ಬಾಲಕಾಂಡದಿಂದ ಕ್ರಮವಾಗಿ ಒಂದೊಂದು ಸಾವಿರ ಶ್ಲೋಕಗಳಿವೆ. ಆಯಾಯಾ ಸಾವಿರ ಶ್ಲೋಕಗಳ ಪ್ರಥಮಾಕ್ಷರವು ಶ್ರೀಗಾಯತ್ರಿ ಮೂಲಮಂತ್ರದ ಆಯಾಯಾ ಅಕ್ಷರಗಳಿಂದ ಪ್ರಾರಂಭವಾಗುವುದು. ಅಂದರೆ ಶ್ರೀಗಾಯತ್ರೀ ಮೂಲಮಂತ್ರದ (ಗಾಯತ್ರೀ ಬೀಜಾಕ್ಷರದ) ಒಂದೊಂದು ಅಕ್ಷರಕ್ಕೆ ರಾಮಾಯಣದ ಒಂದೊಂದು ಸಾವಿರ ಶ್ಲೋಕಗಳು ವ್ಯಾಖ್ಯಾನರೂಪದಲ್ಲಿರುವುವು. ಗಾಯತ್ರೀ ಮಂತ್ರದಲ್ಲಿ ಸೃಷ್ಟಿ, ಸ್ಥಿತಿ, ಲಯಗಳೆಂಬ ಮೂರು ಪಾದಗಳಿರುವಂತೆ ಶ್ರೀಮದ್ರಾಮಾಯಣದ ತತ್ತ್ವದಲ್ಲಿಯೂ ಇವೆ. ಶ್ರೀಮದ್ರಾಮಾಯಣದಲ್ಲಿರುವ ಐದು ನೂರು ಸರ್ಗಗಳ ತತ್ತ್ವಗಳೇ ಕ್ರಮವಾಗಿ ಶ್ರೀಗಾಯತ್ರಿಯ ಐದು ಶಿರಸ್ಸುಗಳಿಗೆ ಅನ್ವಯವಾಗುವುವು. ಶ್ರೀಮದ್ರಾಮಾಯಣವು ಶ್ರೀಗಾಯತ್ರಿಯ ಅರ್ಥವನ್ನು ಒಳಗೊಂಡಿರುವುದು. ಇದನ್ನು ಈ ಕೆಳಗೆ ವಿವರಿಸಿದೆ.

ತತ್ : ಶ್ರೀಮದ್ರಾಮಾಯಣದ ಪ್ರಥಮ ಶ್ಲೋಕವಾದ 'ತಪಃಸ್ವ

ಧ್ಯಾಯ ನಿರತಂ' ಎಂಬ ಶ್ಲೋಕವು 'ತ'ಕಾರದಿಂದ ಪ್ರಾರಂಭವಾಗುವುದು. ಶ್ರೀಮದ್ರಾಮಾಯಣದ ಪ್ರಥಮ ಸಾವಿರ ಶ್ಲೋಕಗಳ ಅಂತರಾರ್ಥದ ಮುಖ್ಯ ತಾತ್ಪರ್ಯವು ತಚ್ಛಬ್ದಾರ್ಥದಿಂದ, ಮಹಾವಿಷ್ಣುವಾದ ಪರಬ್ರಹ್ಮ ಒಂದೇ ಇದ್ದ ಸ್ಥಿತಿಯನ್ನು ಪ್ರತಿಪಾದಿಸುವುದು.

**ಸವಿತುಃ** ಶ್ರೀಮದ್ರಾಮಾಯಣದಲ್ಲಿ ಶ್ರೀರಾಮಚಂದ್ರನು ವಿಶ್ವಾಮಿತ್ರ ಮಹರ್ಷಿಗಳೊಡಗೂಡಿ ಯಜ್ಞ ಸಂರಕ್ಷಣೆ ಮಾಡಿದುದು, ಸೀತಾಪಾಣಿಗ್ರಹಣ ಮಾಡಿಕೊಂಡುದು ಮೊದಲುಗೊಂಡು ಸೀತಾದೇವಿಯು ವನವಾಸಕ್ಕೆ ಹೋಗುವಾಗ ಆಭರಣಾದಿಗಳನ್ನು ಕೊಡುವವರೆಗಿನ ತತ್ತ್ವವನ್ನು ಒಳ ಗೊಂಡಿದೆ.

**ವರೇಣ್ಯಂ** : ಈ ಪದದ ತತ್ತ್ವವು ವನವಾಸಕ್ಕೆ ಹೋಗುತ್ತಿದ್ದ ಸೀತಾದೇವಿಯ ಆಭರಣಗಳನ್ನು ಕೊಟ್ಟ ಕಥಾಭಾಗದಿಂದ ಸೀತಾದೇವಿಯು ಮಾಯಾಮೃಗವನ್ನು ನೋಡಿ ಆಶ್ಚರ್ಯಪಟ್ಟು ಅದನ್ನು ಅಪೇಕ್ಷಿಸಿದ ವರೆಗಿನ ರಾಮಾಯಣವು ಪ್ರತಿಪಾದಿತವಾಗಿವೆ.

**ಭರ್ಗಃ** : ರಾಮಾಯಣದಲ್ಲಿ ಮಾಯಾ ಜಿಂಕೆಯನ್ನು ಹಿಡಿಯಲು ಶ್ರೀರಾಮನು ಅದನ್ನು ಹಿಂಬಾಲಿಸುವಿಕೆ, ಸೀತಾಪಹರಣದ, ಕಂಬಂಧನು ಶ್ರೀರಾಮನಿಗೆ ಜಾಗ್ರತೆಯಾಗಿ ಹೋಗಿ ಸುಗ್ರೀವನ ಸಖ್ಯ ಮಾಡೆಂದು ಹೇಳುವುದರವರೆಗಿನ ತತ್ತ್ವವನ್ನು ಒಳಗೊಂಡಿರುವುದು.

**ದೇವಸ್ಯ** : ವಾಲಿಯ ವಧೆಯಾದಾರಭ್ಯ ಹನುಮಂತನ ಋಕ್ಷ ಬಿಲ ಪ್ರವೇಶ, ಸಂಪಾತಿಯಿಂದ ಸೀತಾದೇವಿಯ ವೃತ್ತಾಂತವನ್ನು ತಿಳಿದು ಕೊಳ್ಳುವಿಕೆ, ಲಂಕಿಣಿಯ ಜರ್ಝರತ್ವ, ಚಂದ್ರೋದಯ ವರ್ಣನೆ, ಅಶೋಕವನ ಪ್ರವೇಶದ ಕಥೆಯ ತತ್ತ್ವಗಳನ್ನೆಲ್ಲಾ ಈ ಪದವು ಒಳ ಗೊಂಡಿದೆ.

**ಧೀಮಹಿ** : ಸೀತಾದೇವಿಯು ಶ್ರೀರಾಮನನ್ನು ಧ್ಯಾನಮಾಡುತ್ತಾ ಅವನಿಗಾಗಿ ದುಃಖಪಡುತ್ತಿದ್ದುದಾರಭ್ಯ ಯುದ್ಧ ಪ್ರಾರಂಭದವರೆಗಿನ ಕಥೆಯ ತತ್ತ್ವವಾಗಿದೆ.

**ಧಿಯೋ ಯೋನಃ** : ಸಕಲ ರಾಕ್ಷಸರ ನಿಗ್ರಹವಾಗಿ ಸೀತಾದೇವಿಯು ಶ್ರೀರಾಮನ ಬಳಿಗೆ ಬರುವುದು ಈ ಭಾಗದ ತತ್ತ್ವವನ್ನು ಈ ಪದವು ಒಳ ಗೊಂಡಿದೆ.

**ಪ್ರಚೋದಯಾತ್** : ಮುಂದೆ ಶ್ರೀರಾಮಾಯಣದಲ್ಲಿ ಸೀತಾ

ದೇವಿಯು ಅಗ್ನಿಪ್ರವೇಶ ಮಾಡುವವರೆಗಿನ ತತ್ತ್ವಗಳು ಈ ಪದದಲ್ಲಿ ಅಡಗಿವೆ.

ಶ್ರೀಗಾಯತ್ರೀ ತತ್ತ್ವವೇ ಶ್ರೀಮದ್ರಾಮಾಯಣದ ತತ್ತ್ವವಾಗಿರುವುದರಿಂದ ಶ್ರೀ ಗಾಯತ್ರಿಯೇ ರಾಮಾಯಣ ; ಶ್ರೀಮದ್ರಾಮಾಯಣವೇ ಗಾಯತ್ರಿಯಾಗಿದೆ. ಶ್ರುತಿ ತಾತ್ಪರ್ಯ ಪ್ರಚಾರರೂಪ ಪ್ರಯೋಜನಕ್ಕೋಸ್ಕರ ಶ್ರೀಮದ್ರಾಮಾಯಣವನ್ನು ಲವಕುಶರಿಗೆ ವಾಲ್ಮೀಕಿ ಮುನಿಗಳು ಉಪದೇಶ ಮಾಡಿದರು. ಆದುದರಿಂದ ಶ್ರೀಮದ್ರಾಮಾಯಣವು ಶ್ರೀಗಾಯತ್ರೀ ಮಂತ್ರದ ಅರ್ಥವನ್ನು ಒಳಗೊಂಡಿದೆ.

೨೪೦೦೦ ಶ್ಲೋಕಗಳಿಂದ ಕೂಡಿರುವ ವಾಲ್ಮೀಕಿ ರಾಮಾಯಣವು ಏಳು ಕಾಂಡಗಳಿಂದ ಕೂಡಿದೆ. ಗಾಯತ್ರೀ ಮಂತ್ರದ ಅಕ್ಷರಗಳು ಕ್ರಮವಾಗಿ ಪ್ರತಿಕಾಂಡಕ್ಕೂ ಈ ಕೆಳಗೆ ಕಂಡಂತೆ ಹರಡಿಕೊಂಡಿವೆ :

| | | |
|---|---|---|
| ಪ್ರಥಮ ಕಾಂಡ | ೩ ಅಕ್ಷರಗಳು | ತತ್ಸವಿ |
| ದ್ವಿತೀಯ ಕಾಂಡ | ೪ " | ತುಃ ವರೇಣ್ಯಂ |
| ತೃತೀಯ ಕಾಂಡ | ೨ " | ಭರ್ಗೋ |
| ಚತುರ್ಥ ಕಾಂಡ | ೨ " | ದೇವ |
| ಪಂಚಮ ಕಾಂಡ | ೩ " | ಸ್ಯ ಧೀಮ |
| ಷಷ್ಠಮ ಕಾಂಡ | ೬ " | ಹಿ ಧಿಯೋಯೋನಃ ಪ್ರ |
| ಸಪ್ತಮ ಕಾಂಡ | ೪ " | ಚೋದಯಾತ್ |

ಗಾಯತ್ರ್ಯಾಕ್ಯಕ್ಷರಾಣಿ ಚತ್ವಾರಿ ದ್ವೇದ್ವೇ ತ್ರೀಣ್ಯಥ ಷಟ್‌ಕ್ರಮಾತ್ ಚತ್ವಾರಿ ಸಪ್ತಕಾಂಡೇಷು ಸ್ಥಾಪಿತಾನ್ಯಕ್ಷರಾಣಿತು.

## ಶ್ರೀಗಾಯತ್ರೀ ಭಾಗವತ

ಭಾಗವತವು ಶ್ರೀಗಾಯತ್ರೀ ಮಂತ್ರದ ಭಾಷ್ಯರೂಪವಾಗಿದೆ ಎಂದು ಗರುಡ ಪುರಾಣ ಹೇಳುತ್ತದೆ. 'ಗಾಯತ್ರೀ ಭಾಷ್ಯ ರೂಪೋಽಸೌ'. ಸೃಷ್ಟಿ ಕಾಣದಿದ್ದ ವೇದಾರ್ಥವನ್ನು ಭಾಗವತ ತಿಳಿಸುತ್ತದೆ. ಭಾಗವತಕ್ಕೂ, ಗಾಯತ್ರಿಗೂ ವ್ಯಾಖ್ಯಾನ–ವ್ಯಾಖ್ಯೆಯ ಭಾಗಗಳಿವೆ ಎನ್ನಬಹುದು.

'ತತ್ ಸವಿತುಃ ದೇವಸ್ಯ' ಎಂಬುದರ ಅರ್ಥವೇ ಭಾಗವತದ 'ಜನ್ಮಾದ್ಯಸ್ಯ ಯತಃ' ಎಂಬುದೂ, 'ವರೇಣ್ಯಂ' ಎಂಬುದಕ್ಕೆ 'ವ್ಯಾಖ್ಯಾನ ಪರಂ' ಎಂಬುದೂ, 'ಭರ್ಗ' ಎಂಬುದಕ್ಕೆ 'ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ'

ಎಂಬುದಾಗಿದೆ. 'ತತ್' ಶಬ್ದದ ವ್ಯಾಖ್ಯಾನವೇ 'ಸ್ವರಾಟ್'. 'ಧಿಯೋಯೋನಃ ಪ್ರಚೋದಯಾತ್' ಎಂಬುದಕ್ಕೆ 'ತೇನೇ ಬ್ರಹ್ಮ ಹೃದಾಯ ಆದಿ ಕವಯೇ' ಎಂಬುದೇ ವ್ಯಾಖ್ಯಾನ.

'ಶ್ರೀಲಲಿತಾಪಂಚದಶಾಕ್ಷರೀ'ಯೂ ಸಹ ಶ್ರೀಗಾಯತ್ರೀ ಮಂತ್ರದ ಅರ್ಥವನ್ನೇ ಒಳಗೊಂಡಿದೆ.

## ಪುರುಷಸೂಕ್ತವು ಗಾಯತ್ರೀ ಮಂತ್ರದ ವ್ಯಾಖ್ಯಾನ

ಗಾಯತ್ರಿಯ ಮೂರು ಪಾದಗಳಿಂದ ಮೂರು ವರ್ಗಗಳ ಪುರುಷ ಸೂಕ್ತವು ರೂಪುಗೊಂಡಿದೆ. ಪುರುಷಸೂಕ್ತದ ಮೂರು ವರ್ಗಗಳ ವ್ಯಾಖ್ಯಾನವೇ ಮೂರು ವೇದಗಳು. ಪುರುಷಸೂಕ್ತದ ಮೊದಲ ಐದು ಋಕ್ಕುಗಳು ಋಗ್ವೇದದ ಸಾರರೂಪ ಹಾಗೂ ಗಾಯತ್ರಿಯ ಪ್ರಥಮ ಪಾದದ ವಿವರಣೆಯಾಗಿದೆ. ಮುಂದಿನ ಐದು ಋಕ್ಕುಗಳು ಯಜುರ್ವೇದದ ಸಾರರೂಪವಾಗಿದ್ದು ಎರಡನೆ ಪಾದದ ಅರ್ಥರೂಪವಾಗಿವೆ. ಮುಂದಿನ ಆರು ಋಕ್ಕುಗಳು ಸಾಮವೇದದ ಸಾರರೂಪವಾಗಿದ್ದು ಮೂರನೇ ಪಾದದ ವಿವರಣೆಯಾಗಿದೆ.

1) ಪುರುಷನಾಮಕ ಪರಮಾತ್ಮನ ಅದ್ಭುತವಾದ ರೂಪವರ್ಣನೆ, ಅವನ ವಿಶ್ವವ್ಯಾಪ್ತಿತ್ವ, ಸರ್ವಸ್ವಾಮಿತ್ವ ಮತ್ತು ಸರ್ವೋತ್ತಮತ್ವವನ್ನು ಹೇಳುತ್ತದೆ.

2) ಭಗವಂತನ ಆರಾಧನೆಯ ಬಗ್ಗೆ ತಿಳಿಸುತ್ತವೆ.

3) ಈ ಜಗತ್ತಿನ ಸೃಷ್ಟ್ಯಾದಿ ಕಾರ್ಯಗಳೆಲ್ಲವೂ ಆ ಪುರುಷನ ಅಧೀನವೆಂದು ಸ್ಪಷ್ಟಪಡಿಸಲಾಗಿದೆ.

1) 'ತತ್' ವ್ಯಾಪ್ತತ್ವವನ್ನು, 'ಸವಿತುಃ' ಸಕಲ ಚರಾಚರ ಜಗತ್ತಿನ ಸೃಷ್ಟೃತ್ವವನ್ನೂ ಹಾಗೂ 'ವರೇಣ್ಯಂ' ಸರ್ವೋತ್ತಮತ್ವವನ್ನೂ ಹೇಳುತ್ತವೆ. ಈ ಅರ್ಥವನ್ನೇ ಪುರುಷಸೂಕ್ತದ ಐದು ಮಂತ್ರಗಳು ಹೇಳುತ್ತವೆ.

2) ಗಾಯತ್ರೀನಾಮಕ ಪರಮಾತ್ಮನು ಸಕಲ ಪ್ರಾಣಿಗಳಲ್ಲೂ ಬಿಂಬರೂಪದಲ್ಲಿದ್ದು ಹೊರಗೂ, ಒಳಗೂ ನಿಯಮನ ಮಾಡುತ್ತ ಸಕಲ ಪ್ರೇರಕನಾಗಿ, ಪ್ರಕಾಶ, ಆನಂದ ಹಾಗೂ ಜ್ಞಾನಸ್ವರೂಪನಾಗಿದ್ದಾನೆಂದು 'ಭರ್ಗ' ಎಂಬ ಶಬ್ದ ತಿಳಿಸುತ್ತದೆ. ಕ್ರೀಡಾದಿ ಗುಣಗಳಿಂದ ಕೂಡಿದವನಾಗಿ, ಸಕಲ ದೋಷದೂರನಾಗಿರುವುದರಿಂದ ಪರಮಾತ್ಮನು ಎಲ್ಲರಿಂದಲೂ ಸ್ತುತ್ಯ

ನಾಗಿರುವುದರಿಂದ 'ದೇವ' ಶಬ್ದವಾಚ್ಯನಾಗಿದ್ದಾನೆ. ಅಂತಹ ಸ್ವಾಮಿಯನ್ನು ನಾವು ಅವಶ್ಯವಾಗಿ ಧ್ಯಾನಮಾಡಬೇಕು. 'ಧೀಮಹಿ 'ಎಂಬುದು ಗಾಯತ್ರೀ ದ್ವಿತೀಯ ಪಾದದ ಅರ್ಥ. ಈ ಅರ್ಥವನ್ನೇ ಪುರುಷಸೂಕ್ತದ ಎರಡನೆಯ ವರ್ಗದ ಮಂತ್ರಗಳು ಪ್ರತಿನಿಧಿಸುತ್ತವೆ. ಶ್ರೀಹರಿಯೇ ಮುಖ್ಯ ಕರ್ತೃ, ಎಲ್ಲವೂ ಅವನ ಅಧೀನ, ಅವನು ಒದಗಿಸಿದ ವಸ್ತುಗಳಿಂದಲೇ, ಅವನ ಪ್ರೇರಣೆಯಿಂದಲೇ ನಾವು ಮಾಡುವ ಆರಾಧನೆಯನ್ನು ಅವನಿಗೆ ಅರ್ಪಿಸಬೇಕೆಂಬ ಗಾಯತ್ರೀ ಮಂತ್ರದ ಎರಡನೇ ಪಾದದ ಅರ್ಥವನ್ನು ಪುರುಷಸೂಕ್ತದ ಎರಡನೆಯ ವರ್ಗವು ಮೇಲೆ ಹೇಳಿರುವ ರೀತಿಯಲ್ಲಿ ವಿವರಿಸುತ್ತದೆ.

3) ಮೇಲೆ ಹೇಳಿದಂತೆ ಮಹಾಮಹಿಮನಾದ ಪುರುಷೋತ್ತಮನನ್ನು ಧ್ಯಾನಮಾಡೋಣ. ನಮ್ಮ ಬುದ್ಧಿಗಳನ್ನು ಸನ್ಮಾರ್ಗದಲ್ಲಿ ಪ್ರೇರಿಸುವವನು ಸರ್ವೋತ್ತಮನಾದ ಪರಮಾತ್ಮನೇ. ಗಾಯತ್ರಿಯ ಮೂರನೆಯ ಪಾದದಲ್ಲಿ ಹೀಗೆ ತಿಳಿಸಿರುವ ಭಗವದುಪಾಸನೆಯ ವಿವರಣೆಯನ್ನು ಪುರುಷಸೂಕ್ತದ ಮೂರನೆಯ ವರ್ಗದ ಮಂತ್ರಗಳಲ್ಲಿ ಕಾಣಬಹುದು. ಭಗವದುಪಾಸನೆಯಿಂದ ದೇವತೆಗಳು ಮೋಕ್ಷಾದಿ ಪುರುಷಾರ್ಥವನ್ನು ಹೊಂದಿದರು. ಆದ್ದರಿಂದ ಭಗವದುಪಾಸನೆಯು ಅವಶ್ಯ ಕರ್ತವ್ಯ ಎಂಬುದಾಗಿ ಹೇಳಲಾಗಿದೆ.

ಹೀಗೆ ಜ್ಞಾನ-ಕರ್ಮಾತ್ಮಕ ಯಜ್ಞದಿಂದ ಪುರುಷನಾಮಕ ಭಗವಂತನನ್ನು ಆರಾಧಿಸಿದ ದೇವತೆಗಳು ಮೋಕ್ಷವನ್ನು ಗಳಿಸಿದರೆಂದು ಪುರುಷಸೂಕ್ತವು ಗಾಯತ್ರೀ ಮಂತ್ರದ ಫಲಶ್ರುತಿಯನ್ನು ಹೇಳುತ್ತದೆ.

ಗಾಯತ್ರೀ ಮಂತ್ರದ ಉಪಾಸನೆ ಹೇಗೆ ಮಾಡಬೇಕೆಂಬುದನ್ನು ಪುರುಷಸೂಕ್ತವು ಮೇಲೆ ಹೇಳಿದ ರೀತಿಯಲ್ಲಿ ತಿಳಿಸಿಕೊಡುತ್ತದೆ. ಆದ್ದರಿಂದ ಪುರುಷಸೂಕ್ತವು ಗಾಯತ್ರೀ ಮಂತ್ರಕ್ಕೆ ವ್ಯಾಖ್ಯಾನ ಎಂದು ಪರಿಗಣಿಸಲ್ಪಟ್ಟಿದೆ.

## ಗಾಯತ್ರೀ ಮತ್ತು ಬ್ರಹ್ಮಸೂತ್ರ

ಬ್ರಹ್ಮಸೂತ್ರದಲ್ಲಿ ಒಟ್ಟು ೫೬೪ ಸೂತ್ರಗಳಿವೆ. ಇವುಗಳನ್ನು ೨೩ ಅಧಿಕರಣಗಳನ್ನಾಗಿ ವರ್ಗೀಕರಿಸಿ ಮತ್ತೆ ಅವುಗಳನ್ನು ನಾಲ್ಕು ನಾಲ್ಕು ಪಾದಗಳುಳ್ಳ ನಾಲ್ಕು ಅಧ್ಯಾಯಗಳಾಗಿ ವಿಂಗಡಿಸಲಾಗಿದೆ. ಇವುಗಳಲ್ಲಿ ಮೊದಲೆರಡು ಅಧ್ಯಾಯಗಳಲ್ಲಿ ಪರಬ್ರಹ್ಮನ ಸ್ವರೂಪವನ್ನು ತಿಳಿಸುತ್ತಾ ಅವನನ್ನು ಕುರಿತು ಜಿಜ್ಞಾಸೆ ಮಾಡುವುದು ಅತ್ಯವಶ್ಯ ಎಂಬುದಾಗಿ

ನಿರೂಪಿಸಿದೆ. ಮೂರನೇ ಅಧ್ಯಾಯದಲ್ಲಿ ಸಕಲ ಕಲ್ಯಾಣ ಗುಣಪೂರ್ಣನಾದ ಪರಮಾತ್ಮನ ಉಪಾಸನೆ ಹೇಗೆ ಮಾಡಬೇಕೆಂಬುದನ್ನು ತಿಳಿಸಲಾಗಿದೆ. ನಾಲ್ಕನೇ ಅಧ್ಯಾಯವಲ್ಲಿ ವೈರಾಗ್ಯ ಭಕ್ತಿಗಳಿಂದ ಕೂಡಿದ ಸಾಧನೆಯಿಂದ ಅಪರೋಕ್ಷಜ್ಞಾನ ಬಂದಮೇಲೆ ಅದಕ್ಕೆ ಫಲವೇ ಮೋಕ್ಷ ಎಂಬುದನ್ನು ನಿರೂಪಿಸಲಾಗಿದೆ.

'ತತ್ ಸವಿತುಃ ವರೇಣ್ಯಂ' ಎಂಬುದು ಬ್ರಹ್ಮಸೂತ್ರಗಳ ಮೊದಲನೆಯ ಅಧ್ಯಾಯದ ಅರ್ಥವನ್ನೇ ಒಳಗೊಂಡಿದೆ.

ಎರಡನೇ ಅಧಿಕರಣವು ಪರಮಾತ್ಮನು ಜಗಜ್ಜನ್ಮಾದಿ ಅಷ್ಟಕರ್ತವಾದ್ದ ರಿಂದ ಅವನೇ ಜಿಜ್ಞಾಸ್ಯನು ಎಂದು ತಿಳಿಸುತ್ತದೆ. ಅದನ್ನೇ 'ಸವಿತುಃ' ಎಂಬ ಶಬ್ದವು ಹೇಳುತ್ತದೆ ಆದ್ದರಿಂದ 'ವರೇಣ್ಯ'ನು.

ಬ್ರಹ್ಮಸೂತ್ರದ ಎರಡನೇ ಅಧ್ಯಾಯದ ಅರ್ಥವನ್ನೇ ಗಾಯತ್ರೀ ಮಂತ್ರದ ಎರಡನೇ ಪಾದದ 'ಭರ್ಗ' ಶಬ್ದವು ತಿಳಿಸುತ್ತದೆ.

ಮೂರನೇ ಅಧ್ಯಾಯದ ಅರ್ಥವನ್ನೇ ಗಾಯತ್ರೀ ಮಂತ್ರದ 'ದೇವಸ್ಯ ಧೀಮಹಿ' ಎಂದು ಹೇಳಲಾಗಿದೆ.

ನಾಲ್ಕನೇ ಅಧ್ಯಾಯದ ಅಪರೋಕ್ಷಜ್ಞಾನಪ್ರಾಪ್ತಿಯ ವಿಷಯವೇ ಗಾಯತ್ರೀ ಮಂತ್ರದ 'ಧಿಯೋ ಯೋ ನಃ ಪ್ರಚೋದಯಾತ್' ಎಂಬ ಪದಗಳಲ್ಲಿ ಅಡಗಿದೆ.

## ಶ್ರೀಗಾಯತ್ರೀ ಪ್ರಶಂಸೆ

ಶ್ರೀಗಾಯತ್ರೀ ಮಂತ್ರದ ಮಹಿಮೆಯನ್ನು ಎಲ್ಲಾ ಆರ್ಷ ಗ್ರಂಥಗಳೂ ಹಾಡಿ ಹೊಗಳಿವೆ. ಇಷ್ಟೇ ಅಲ್ಲ, ಐತಿಹಾಸಿಕ ಹಾಗೂ ಪುರಾಣ ಗ್ರಂಥಗಳಲ್ಲೂ ಗಾಯತ್ರೀ ಉಪಾಸನೆಯ ವಿಧಾನವನ್ನು ನಾವು ನೋಡಬಹುದು. ಮಹಾತ್ಮರು ಯಾವುದನ್ನು ಅನುಸರಿಸುತ್ತಾರೋ ಅದನ್ನು ಇತರರೂ ಅನುಸರಿಸುತ್ತಾರೆ ಎಂದು ಗೀತೆ ಹೇಳುತ್ತದೆ. ಎಲ್ಲಿಯೋ ತಯಾರಾಗುವ ವಿದ್ಯುತ್ ದೇಶದ ಹಲವು ಮುಖ್ಯ ಕೇಂದ್ರಗಳ ಮೂಲಕ ಮನೆಮನೆಗೂ ತಲಪುವಂತೆ ದೇವರಿಂದ ಆದೇಶ ಪಡೆದ ಧರ್ಮದ ಜಾಗ್ರತೆಯು ಮಹಾತ್ಮರ ಮೂಲಕ ಉಂಟಾಗುತ್ತದೆ. ಪ್ರಪಂಚದ ಪ್ರತಿಯೊಂದು ಧರ್ಮದ ಮೂಲ ವನ್ನು ನೋಡಿದರೂ ಅದು ಅಂಥ ಮಹಾತ್ಮರ ಪಜ್ರೋಪಮಯ ಅನುಭವದ

ಮೇಲೆ ನಿಂತಿರುವುದು ಕಂಡುಬರುತ್ತದೆ. ಇಂದ್ರಿಯಗಳಿಗೆ ಗೋಚರವಾಗುವುವುಗಳಿಗಿಂತಲೂ ಹಿರಿದಾದ ಸತ್ಯವನ್ನು ತಾವು ಕಂಡು, ತಾವು ನಡೆದ ಆ ದಾರಿಯಲ್ಲಿಯೇ ಪ್ರಾಮಾಣಿಕವಾಗಿ ನಡೆಯುವವರೂ ಸಹ ಆ ಅನುಭವವನ್ನು ಪಡೆಯಬಹುದೆಂದು ಅವರು ಹೇಳುತ್ತಾರೆ. ಆ ಅನುಭವಗಳು 'ಜೀವನ' ಎಂಬ ಪುಸ್ತಕದ ಪುಟಗಳಿದ್ದಂತೆ. ಅವರ ಮಾತಿಗೆ 'ಆಪ್ತವಾಕ್ಯ' ಅಥವಾ 'ಶಬ್ದ ಪ್ರಮಾಣ' ಎನ್ನುತ್ತಾರೆ. ಇದನ್ನೇ ನಮ್ಮ ದೇಶದ ಋಷಿಗಳು 'ಶ್ರುತಿ' ಎನ್ನುವರು. ಶ್ರೀಗಾಯತ್ರಿಯ ವಿಷಯದಲ್ಲಿ ಇಂಥ ಋಷಿಮುನಿಗಳ ಮತ್ತು ಆಧುನಿಕ ಕಾಲದ ಮಹಾನುಭಾವರ ಅಭಿಪ್ರಾಯಗಳು ಈ ರೀತಿ ಇವೆ :

೧. **ಛಾಂದೋಗ್ಯೋಪನಿಷತ್** : ಗಾಯತ್ರಿಯೇ ಎಲ್ಲವು. ಪೃಥ್ವಿ, ದೇಹ, ವಾಕ್ಕು, (ಪಂಚ) ಭೂತಗಳು, ಹೃದಯ ಮತ್ತು ಪ್ರಾಣಗಳೆಲ್ಲವೂ ಗಾಯತ್ರಿಯ ಸ್ವರೂಪಗಳೇ.

೨. **ನೃಸಿಂಹತಾಪಿನೀ ಉಪನಿಷತ್ತು** : ಗಾಯತ್ರೀದೇವಿಯು ಲಕ್ಷ್ಮೀದೇವಿಗಿಂತ ಪ್ರತ್ಯೇಕಳಲ್ಲ, ಮತ್ತು ಪಾರ್ವತಿಗಿಂತ ಭಿನ್ನಳಲ್ಲ. ಗಾಯತ್ರೀದೇವಿಯೂ ಲಕ್ಷ್ಮೀದೇವಿಯೂ ಒಂದೇ. ಶ್ರೀಗಾಯತ್ರೀದೇವಿಯು ಸರ್ವಸ್ವರೂಪಳಾಗಿದ್ದಾಳೆ.

೩. **ತೈತ್ತಿರೀಯ ಆರಣ್ಯಕ** : ಗಾಯತ್ರೀ ಮಂತ್ರದಿಂದ ಆದಿತ್ಯನ ಧ್ಯಾನ ಮಾಡುವವರಿಗೆ ಸಕಲ ಅಭ್ಯುದಯ–ನಿಃಶ್ರೇಯಸ್ಸುಗಳು ದೊರೆಯುವುದಲ್ಲದೆ ಪರಬ್ರಹ್ಮಪ್ರಾಪ್ತಿರೂಪವಾದ ಮೋಕ್ಷವೂ ದೊರಕುವುದು.

೪. **ವಿಷ್ಣುಧರ್ಮೋತ್ತರ** : ಯಾರು ನಿಷ್ಠೆಯಿಂದ ಸಂಧ್ಯೋಪಾಸನೆಯನ್ನು ಮಾಡುತ್ತಾರೋ ಅವರು ಪಾಪರಹಿತರಾಗಿ ಕಾಲಾಂತರದಲ್ಲಿ ವಿಷ್ಣುಲೋಕವನ್ನು ಹೊಂದುತ್ತಾರೆ.

೫. **ಯಮಸ್ಮೃತಿ** : ಗಾಯತ್ರಿಗಿಂತ ಉತ್ತಮವಾದ ಜಪವಿಲ್ಲ, ತಪವಿಲ್ಲ, ಧ್ಯಾನವಿಲ್ಲ ಮತ್ತು ಶಾಸ್ತ್ರವಿಲ್ಲ. ಮಹರ್ಷಿಗಳು ಸಂಧ್ಯಾಕಾಲಗಳಲ್ಲಿ ಗಾಯತ್ರೀದೇವಿಯ ಉಪಾಸನೆಯನ್ನು ಬಹುಕಾಲದವರೆಗೆ ಶ್ರದ್ಧಾಭಕ್ತಿಗಳಿಂದ ಆಚರಿಸಿದುದರಿಂದಲೇ ಚಿರಾಯುಷ್ಮಂತರಾಗಿಯೂ, ಅಸಾಧಾರಣ ಪ್ರಜ್ಞೆಯುಳ್ಳವರಾಗಿಯೂ, ಅಸದೃಶಕೀರ್ತಿವಂತರಾಗಿಯೂ ಹಾಗೂ ಅನ್ಯಾದೃಶ ತೇಜಸ್ಸುಳ್ಳವರಾಗಿಯೂ ಆದರು.

೬. **ಭಾರದ್ವಾಜ ಸ್ಮೃತಿ**: ಗಾಯತ್ರಿಯೇ ಪರಮ ಪವಿತ್ರವಾದ ಮಂತ್ರ. (೧೨-೪೨). ಅಗ್ನಿಪುರಾಣ (೨೮೪-೧), ಸಂವರ್ತಸ್ಮೃತಿ (೨-೧೪), ಮನುಸ್ಮೃತಿ (೨-೮೩), ಬೃಹದ್ಯೋಗಿಯಾಜ್ಞವಲ್ಕ್ಯಸ್ಮೃತಿ (೨-೬೩), ಬೃಹತ್‌ಪರಾಶರಸ್ಮೃತಿ(೪-೧೬)ಗಳೂ ಸಹಾ ಇದನ್ನೇ ಅನುಮೋದಿಸುತ್ತವೆ.

೭. **ಬೃಹದ್ಯಮ ಸ್ಮೃತಿ**: ಯಾವ ಪ್ರಕಾರದಿಂದ ಗಾಯತ್ರೀ ಜಪ ಮಾಡುವುದರಿಂದ ಸರ್ವಪ್ರಕಾರವಾದ ಪಾಪದಿಂದ ಮುಕ್ತಿಯಾಗುವುದೋ, ಆ ಪ್ರಕಾರ ಕೇವಲ ವೇದಾಧ್ಯಯನದಿಂದ ಆಗಲಾರದು.

೮. **ಸಂಬರ್ತ ಸ್ಮೃತಿ**: ಪಾಪಕರ್ಮಗಳ ಪರಿಮಾರ್ಜನೆಗೆ ಗಾಯತ್ರೀ ಮೂಲಕ ಉಪಾಸನೆ ಮಾಡುವುದಕ್ಕಿಂತ ದೊಡ್ಡ ಮಂತ್ರವಿಲ್ಲ.

೯. (ಅ) **ಮನುಸ್ಮೃತಿ(೨-೭೮,೭೯)**: ಓಂಕಾರ, ವ್ಯಾಹೃತಿಗಳಿಂದ ಕೂಡಿದ ಗಾಯತ್ರಿಯನ್ನು ಪ್ರಾತಃ ಸಾಯಂಕಾಲಗಳಲ್ಲಿ ಜಪಿಸುವ ವಿಪ್ರನು ವೇದದ ಸ್ವಾಧ್ಯಾಯದ ಪುಣ್ಯವನ್ನು ಪಡೆಯುವವನು. ಸಾಧಕನು ಒಂದು ತಿಂಗಳ ಕಾಲ ಏಕಾಂತ ಸ್ಥಳದಲ್ಲಿ ಪ್ರತಿನಿತ್ಯವೂ ಒಂದು ಸಾವಿರ ಗಾಯತ್ರೀ ಮಂತ್ರದ ಜಪಮಾಡಿದರೆ ಅವನು ಸರ್ಪವು ಪೊರೆ ಕಳಚುವಂತೆ ತನ್ನ ಪಾಪಗಳಿಂದ ಮುಕ್ತನಾಗುವನು.

(ಆ) ಯಜ್ಞೋಪವೀತ ಧಾರಣಮಾಡಿದಾಗ ಮನುಷ್ಯನು ಎರಡನೇ ಜನ್ಮ ಪಡೆಯುತ್ತಾನೆ. ಈ ಎರಡನೇ ಜನ್ಮದ ತಾಯಿ ಗಾಯತ್ರಿಯಾಗುತ್ತಾಳೆ.

೧೦. **ಶಂಖಸ್ಮೃತಿ**: ಲೋಕ ಹಾಗೂ ಪರಲೋಕಗಳಲ್ಲಿ ಗಾಯತ್ರಿಗಿಂತಲೂ ಪವಿತ್ರಗೊಳಿಸುವ ಮಹತ್ತರವಾದ ಮಂತ್ರ ಮತ್ತೊಂದಿಲ್ಲ.

೧೧. **ತೈತ್ತಿರೀಯ ಸಂಹಿತೆ**: ಗಾಯತ್ರಿಯನ್ನು ಅರಿತವನು ಪಾಪಗಳನ್ನು ದಹಿಸುವ ಅಗ್ನಿಯ ಶಕ್ತಿಯನ್ನು ಪಡೆಯುತ್ತಾನೆ.

೧೨. **ಆಗ್ನೇಯ ಪುರಾಣ**: ಅಭೀಷ್ಟದಾಯಕಳಾದ ಶ್ರೀಗಾಯತ್ರೀ ದೇವಿಯೇ! ದಯಮಾಡಿ ನನ್ನಲ್ಲಿರು. ಉಪಾಸಿಸುವವರನ್ನು ಸಂರಕ್ಷಿಸುವವಳಾದುದರಿಂದ ನೀನು ಗಾಯತ್ರಿಯೆಂದು ಪ್ರಸಿದ್ಧಳಾಗಿರುವೆ. ವಿವೇಕಿಯಾದವನು ತ್ರಿಸಂಧ್ಯಾಕಾಲದಲ್ಲಿಯೂ ತ್ರಿಮೂರ್ತಿಸ್ವರೂಪಳಾದ ಶ್ರೀಗಾಯತ್ರೀ ದೇವಿಯನ್ನು ಉಪಾಸಿಸಿದರೆ ಸರ್ವಬಂಧನಗಳಿಂದಲೂ ಮುಕ್ತನಾಗಿ ವಿಷ್ಣು

ಪದವನ್ನು ಪಡೆಯುವನು. ಕಾಯಾ, ವಾಚಾ, ಮನಸಾ ಶ್ರೀಗಾಯತ್ರೀ ದೇವಿಯನ್ನು ನಿತ್ಯದಲ್ಲಿಯೂ, ತ್ರಿಕಾಲಗಳಲ್ಲಿಯೂ ಉಪಾಸಿಸಬೇಕು.

೧೩. **ಪದ್ಮ ಪುರಾಣ** (ಸ್ವರ್ಗಖಂಡ ೫೩–೫೮) : ಗಾಯತ್ರಿಯು ಸಮಸ್ತ ಲೋಕಗಳನ್ನೂ ಪಾವನಮಾಡುವವಳು. ಗಾಯತ್ರಿಗಿಂತ ಜಪ ಯೋಗ್ಯವಾದ ಮಂತ್ರ ಮತ್ತೊಂದಿಲ್ಲ. ಈ ರೀತಿ ತಿಳಿಯುವವರು ಮುಕ್ತಿ ಯನ್ನು ಪಡೆಯುವರು. ಇದನ್ನೇ ಕೂರ್ಮಪುರಾಣ (೧೪–೫೮), ಉಶನಃ ಸಂಹಿತಾ (೩–೫೪), ವ್ಯಾಧ್ನಪಾದಸ್ಮೃತಿ(೩೭೯)ಗಳೂ ಹೇಳುತ್ತವೆ.

೧೪. **ಅಗ್ನಿಪುರಾಣ:** ಗಾಯತ್ರೀಗಿಂತ ಪಾಪನಾಶ ಮಾಡುವ ಮಂತ್ರವು ಮರ್ತ್ಯಲೋಕದಲ್ಲಾಗಲಿ, ಸ್ವರ್ಗಲೋಕದಲ್ಲಾಗಲೀ ಬೇರೊಂದಿಲ್ಲ.

೧೫. **ಸ್ಕಂದ ಪುರಾಣ** (ಕಾಶೀಖಂಡ ೪೯–೫೦) : ಅಷ್ಟಾದಶ ವಿದ್ಯೆ ಗಳಲ್ಲಿ ಮಿಮಾಂಸಾಶಾಸ್ತ್ರ, ಮೀಮಾಂಸಾಕ್ಕಿಂತ ತರ್ಕಶಾಸ್ತ್ರ, ತರ್ಕಶಾಸ್ತ್ರ ಕ್ಕಿಂತ ಪುರಾಣಶಾಸ್ತ್ರ, ಪುರಾಣಕ್ಕಿಂತ ಧರ್ಮಶಾಸ್ತ್ರ, ಧರ್ಮಶಾಸ್ತ್ರಕ್ಕಿಂತ ವೇದ, ವೇದಕ್ಕಿಂತ ಉಪನಿಷತ್ತು ಮತ್ತು ಉಪನಿಷತ್ತಿಗಿಂತ ಗಾಯತ್ರಿಯು ಮಹತ್ತ್ವವು ಅಧಿಕವಾದದ್ದು. **ಮತ್ತೊಂದು ಕಡೆ** : ಸಮಸ್ತ ಮಂತ್ರ ಗಳಲ್ಲಿ ಪ್ರಣವದಿಂದ ಕೂಡಿದ ಗಾಯತ್ರೀಗಿಂತ ಉತ್ತಮವಾದ ಮಂತ್ರ ದುರ್ಲಭವು. ಮೂರು ವೇದಗಳಲ್ಲಿಯೂ ಗಾಯತ್ರೀಗಿಂತ ಅಧಿಕವಾದ ಬೇರೊಂದು ಮಂತ್ರವಿಲ್ಲ.

೧೬. **ಕೂರ್ಮ ಪುರಾಣ** : ಗಾಯತ್ರೀ ದೇವಿಯು ವೇದಮಾತೆಯು. ಈ ದೇವಿಯೇ ಲೋಕವನ್ನು ಪಾವನ ಮಾಡುವವಳು. ಇದೇ ಜ್ಞಾನ ಸ್ವರೂಪ.

೧೭. **ಋಗ್ವೇದ** : ಪ್ರಜಾಪತಿ(ಬ್ರಹ್ಮ)ಯ ಮುಖದಿಂದ ಮೊಟ್ಟ ಮೊದಲು ಅಗ್ನಿಯ ಆವಿರ್ಭಾವವಾಯಿತು. ಆ ಅಗ್ನಿಯ ಜೊತೆಗೇ ಗಾಯತ್ರೀಯೂ ಹೊರಬಂದಿತು.

೧೮. **ಸಾಂಖ್ಯದರ್ಶನ** : ತತ್ತ್ವವಿದರು ಗಾಯತ್ರಿಯ ಮಹಿಮೆ ಯನ್ನು ಹೇಳುವಾಗ ಸೃಷ್ಟಿಯ ಮೂಲದಲ್ಲಿರುವ ಇಪ್ಪತ್ತನಾಲ್ಕು ತತ್ತ್ವ ಗಳಿಗೂ ಮತ್ತು ಗಾಯತ್ರೀಯಲ್ಲಿರುವ ಇಪ್ಪತ್ತನಾಲ್ಕು ಅಕ್ಷರಗಳಿಗೂ ಮಧ್ಯೆ ಸಮನ್ವಯ ಮಾಡಿರುತ್ತಾರೆ.

೧೯. **ದೇವೀ ಭಾಗವತ :** ಸರ್ವ ಚೈತನ್ಯಸ್ವರೂಪಳಾದ ಆದ್ಯಾ-ವಿದ್ಯೆಯನ್ನು ಧ್ಯಾನ ಮಾಡುತ್ತೇವೆ. ಅವಳು ನಮ್ಮ ಬುದ್ಧಿಗಳನ್ನು ಪ್ರಚೋದಿಸಲಿ.

೨೦. **ಬೃ.ಪಾ. ಶರ :** ಎಲ್ಲಾ ಮಂತ್ರ ಜಪಗಳಲ್ಲಿ ಓಂಕಾರ ಸಹಿತವಾದ ಗಾಯತ್ರೀಯು ಪರಮ ಉತ್ಕೃಷ್ಟವಾದ ಜಪವು. ಇಂಥ ಮಂತ್ರವು ಅತ್ಯಂತ ದುರ್ಲಭವೆಂದೇ ಹೇಳಬೇಕು.

೨೧. **ಮೈತ್ರೇಯ ಬ್ರಾಹ್ಮಣ ಶಾಖಾ :** ಬ್ರಾಹ್ಮಣನು ಜಪದಿಂದಲೇ ಸಿದ್ಧಿ ಹೊಂದಬೇಕು ಎಂಬ ವಿಷಯದಲ್ಲಿ ಯಾವ ಸಂದೇಹವನ್ನೂ ಪಡಬಾರದು. ಬೇರೆ ಕಾರ್ಯಗಳನ್ನು ಮಾಡಲಿ ಅಥವಾ ಬಿಡಲಿ, ಗಾಯತ್ರೀ ಜಪವನ್ನು ಮಾತ್ರ ಬಿಡಬಾರದು. ಬೇರೆ ಏನನ್ನು ಮಾಡದೇ ಹೋದರೂ ಗಾಯತ್ರೀ ಮಂತ್ರ ಉಪಾಸನೆಯಲ್ಲಿ ಮಾತ್ರ ನಿಷ್ಣಾತನಾದವನು, ಶ್ರದ್ಧಾ ಭಕ್ತಿಯಿಂದ ನಿರತನಾದವನು ಮೋಕ್ಷವನ್ನು ಹೊಂದುತ್ತಾನೆ.

೨೨. **ಯಮಸ್ಮೃತಿ :** ಗಾಯತ್ರೀಗಿಂತಲೂ ಬೇರೆ ಜಪವಿಲ್ಲ. ಗಾಯತ್ರಿಗಿಂತಲೂ ಮಿಗಿಲಾದ ಧನವಿಲ್ಲ. ಗಾಯತ್ರೀಗಿಂತಲೂ ಬೇರೆ ಆಹುತಿಗಳಿಲ್ಲ.

೨೩. **ಮಹಾಭಾರತ (ಶಾಂತಿಪರ್ವ) :** ಯಾವನು ಪವಿತ್ರವಾದ ಸ್ಥಳದಲ್ಲಿ ಕುಳಿತು, ಸಾತ್ತ್ವಿಕವಾದ ಅಲ್ಪ ಆಹಾರವನ್ನು ಸೇವಿಸುತ್ತ, ಅಹಿಂಸಾ ಮಾರ್ಗದಲ್ಲಿ ನಡೆಯುತ್ತಾ, ರಾಗದ್ವೇಷ ಮಾನಾಪಮಾನ ರಹಿತನಾಗಿ ಗಾಯತ್ರೀ ಜಪವನ್ನು ಮಾಡುವನೋ ಅವನು ಸರ್ವಪಾಪಗಳಿಂದ ಮುಕ್ತನಾಗಿ ದೇವತ್ವವನ್ನು ಪಡೆಯುವನು.

೨೪. **ಮನು :** ಪ್ರಣವ ಮತ್ತು ವ್ಯಾಹೃತಿಗಳಿಂದ ಕೂಡಿದ ಗಾಯತ್ರೀ ಮಂತ್ರವನ್ನು ವೇದವಿತ್ತಾದ ವಿಪ್ರನು ಸಂಧ್ಯಾಕಾಲಗಳಲ್ಲಿ ಜಪಿಸುವುದರಿಂದ ವೇದಗಳನ್ನು ಹೇಳಿದ ಪುಣ್ಯವನ್ನು ಪಡೆಯುತ್ತಾನೆ. **ಈತನೇ ಇನ್ನೊಂದು ಕಡೆ :** ಓಂಕಾರಪೂರ್ವಕವಾದ ಮೂರು ವ್ಯಾಹೃತಿಗಳೂ ಮತ್ತು ಮೂರು ಪಾದಗಳಿಂದ ಕೂಡಿದ ಸಾವಿತ್ರೀಯೂ ಪರಮಾತ್ಮಪ್ರಾಪ್ತಿಯ ದ್ವಾರ ಎಂದು ದಾಗಿ ಹೇಳುವುದರ ಮೂಲಕ ಅದು ಪರಿಪೂರ್ಣವಾದ ಬ್ರಹ್ಮಜ್ಞಾನವನ್ನು ಹೊಂದಲು ಶ್ರೇಷ್ಠವಾದ ಸಾಧನ ಎಂದಿದ್ದಾನೆ. **ಇವನೇ ಮತ್ತೊಂದು ಕಡೆ :** ಬರಿಯ ಗಾಯತ್ರೀಯನ್ನು ತಿಳಿದವನಾದರೂ, ನಿಯಮನಿಷ್ಠ ಬ್ರಾಹ್ಮಣನು ಆಚಾರ ವ್ಯವಹಾರ ಮರ್ಯಾದೆಯನ್ನು ಮೀರಿದ

ಚತುರ್ವೇದಿ ಪಂಡಿತನಿಗಿಂತಲೂ ಶ್ರೇಷ್ಠನೂ, ಗೌರವಾನ್ವಿತನೂ ಆಗಿರುತ್ತಾನೆ ಎಂದು ಹೇಳಿದ್ದಾನೆ. (ಮನು–೨–೧೧೮)

**೨೫. ವ್ಯಾಸ ಮಹರ್ಷಿಗಳು** : ಯಾವ ವಿಧದಿಂದ ಉಪಾಸಿಸಿದರೂ ಗಾಯತ್ರೀದೇವಿಯನ್ನು ಪರಬ್ರಹ್ಮನಿಗಿಂತ ಬೇರೆ ಎಂದು ಭಾವಿಸಬಾರದು. ಪರಿಶುದ್ಧವಾದ ಸ್ವಾತ್ಮ ಪದಾರ್ಥವೇ ಆ ಗಾಯತ್ರೀದೇವಿ ಎಂದು ಉಪಾಸಿಸಬೇಕು. ಸವಿತೃ ಮಂಡಲ ಮಧ್ಯದಲ್ಲಿರತಕ್ಕ ಯಾವ ದೇವನು ಜ್ಞಾನ ಕರ್ಮಾದಿಗಳನ್ನು ಪ್ರೇರಿಸುತ್ತಾನೋ ಅಂಥಾ ಜಗತ್ ಪೋಷಕ, ಚಾಲಕನಾದ, ಜ್ಞಾನಿಗಳಿಂದ ಭಜಿಸತಕ್ಕವನಾದ ಮತ್ತು ಸವಿತೃಮಂಡಲ ಮಧ್ಯವರ್ತಿಯಾದ ಭಗವಂತನ ದಿವ್ಯರೂಪದ ಮೂಲಕ ವೇದಮಾತೆಯಾದ ಗಾಯತ್ರಿಯನ್ನು ಪ್ರಾರ್ಥಿಸುತ್ತೇನೆ.

**೨೬. ಋಗ್ವಿಧಾನ** : ಋಷಿ ಶೌನಕರು ಗಾಯತ್ರಿಗಿಂತ ಇಹಲೋಕ, ಪರಲೋಕಗಳಲ್ಲಿ ಉನ್ನತವಾದುದು ಬೇರೆ ಯಾವುದೂ ಇಲ್ಲ.

**೨೭. ವಸಿಷ್ಠ ಮಹರ್ಷಿಗಳು** : ಪ್ರಪಂಚದ ಉತ್ಪತ್ತಿಗೆ ಮೂಲ ಕಾರಣವಾಗಿದ್ದರೂ, ಪ್ರಕೃತಿ ಸಂಬಂಧವಿಲ್ಲದೆ ನಿರ್ಗುಣವಾಗಿ ಜಗಜ್ಜೀವೇಶ್ವರ ರೂಪದಿಂದ ಪ್ರಕಾಶಿಸುತ್ತಿರುವ ಪರಿಶುದ್ಧವಾದ ಚಿಚ್ಛಕ್ತಿಯೇ ಸಂಧ್ಯಾ ಅಂದರೆ ಗಾಯತ್ರೀ ದೇವಿಯು. ತೇಜೋಮಯವಾದ ಸೂರ್ಯಮಂಡಲ ವ್ಯಾಪ್ತಿಯಿಂದ ಸಾವಿತ್ರೀ ಎಂದು ಕರೆಸಿಕೊಳ್ಳುವ ಈ ದೇವತೆಯನ್ನು ದ್ವಿಜರು ತಪ್ಪದೆ ಧ್ಯಾನಿಸಬೇಕು. ಈಕೆಯ ಪ್ರಭಾವದಿಂದ ಮಂದಮತಿಗಳೂ, ಕುಮಾರ್ಗಗಾಮಿಗಳೂ ಹಾಗೂ ಅಸ್ಥಿರಮತಿಗಳೂ ಉಚ್ಚಪದವಿಯನ್ನು ಪಡೆಯುವರು. ಪವಿತ್ರ ಮನಸ್ಸಿನಿಂದ ಈಕೆಯನ್ನು ಜಪಿಸುವವರಿಗೆ ಅಥವಾ ಉಪಾಸಿಸುವವರಿಗೆ ಸ್ಥಿರಬುದ್ಧಿಯುಂಟಾಗಿ ಆತ್ಮಲಾಭವಾಗುವುದು.

**೨೮. ವಿಶ್ವಾಮಿತ್ರರು** : ಶ್ರೀಗಾಯತ್ರೀ ದೇವಿಯು ವರದಾಯಿನಿಯೂ, ಸ್ವಯಂಪ್ರಕಾಶದಿಂದ ಶೋಭಿಸುವವಳೂ, ಅವಿನಾಶಿನಿಯೂ, ಬ್ರಹ್ಮ ಸ್ವರೂಪಳೂ ಆಗಿರುವಳು.

**೨೯. ಗೌತಮರು** : ಶ್ರೀಗಾಯತ್ರೀ ಮಂತ್ರವೇ ವೇದಕ್ಕೆ ಮೂಲಾಧಾರ. ಗಾಯತ್ರೀ ಜಪ ಒಂದರಿಂದಲೇ ಯೋಗದ ಸಂಪೂರ್ಣ ಸಾಧನವಾಗುವುದು.

**೩೦. ಯಾಜ್ಞವಲ್ಕ್ಯರು :** ಹೃದಯಕಮಲದಲ್ಲಿ ಗಾಯತ್ರೀದೇವಿಯನ್ನು ಧ್ಯಾನಿಸುವವನು ಪಾಪಪುಣ್ಯರಹಿತನಾಗಿ ಮೋಕ್ಷ ಪದವಿಯನ್ನು ಪಡೆಯುವವನು. ಯಾವುದು ಸಂಧ್ಯೆಯೋ ಅದೇ ಗಾಯತ್ರೀದೇವಿಯು, ಗಾಯತ್ರಿಯೇ ಸಂಧ್ಯೆಯು. ಯಾವನು ಸಂಧ್ಯೆಯನ್ನು ಉಪಾಸನೆ ಮಾಡುವನೋ ಅವನೇ ವಿಷ್ಣುವನ್ನು ಉಪಾಸನೆ ಮಾಡುವವನು.

**೩೧. ನಾರದ ಮಹರ್ಷಿಗಳು :** ಗಾಯತ್ರೀದೇವಿಯು ಭಕ್ತಿ ಸ್ವರೂಪಳು. ಎಲ್ಲಿ ಭಕ್ತಿರೂಪಳಾದ ಗಾಯತ್ರೀ ಇರುವಳೋ ಅಲ್ಲಿ ನಾರಾಯಣನು ವಾಸವಾಗಿರುವನು. ಯಾರು ಗಾಯತ್ರೀದೇವಿಯ ಉಪಾಸನೆ ಮಾಡುವರೋ ಅವರೇ ವಿಷ್ಣುವನ್ನು ಉಪಾಸನೆ ಮಾಡುವವರು.

**೩೨. ಋಷ್ಯಶೃಂಗರು :** ಯಾವ ಗಾಯತ್ರೀದೇವಿಯು ಸರ್ವಭೂತಗಳಲ್ಲಿಯೂ ಅಂತರ್ಯಾಮಿಯಾಗಿರುವಳೋ ಆ ದೇವಿಯು ಮೋಕ್ಷ ಕಾರಣಳೂ, ಮೋಕ್ಷಸ್ವರೂಪಳೂ ಆಗಿರುವಳು. ಗಾಯತ್ರಿಗಿಂತ ಶ್ರೇಷ್ಠವಾದ ಜಪವಿಲ್ಲ. ಇದೇ ಜ್ಞಾನಸ್ವರೂಪವಾದುದು. ಆದುದರಿಂದ ದ್ವಿಜರು ನಿತ್ಯವೂ ತಪ್ಪದೇ ಈ ದೇವಿಯನ್ನು ಜಪಿಸಬೇಕು.

**೩೩. ಪರಾಶರ ಮುನಿ :** ಎಲ್ಲಾ ಪ್ರಕಾರದ ಜಪಗಳಲ್ಲಿ ಗಾಯತ್ರೀ ಜಪವು ಸರ್ವಶ್ರೇಷ್ಠವಾದುದು.

**೩೪. ಯೋಗಿಯಾಜ್ಞವಲ್ಕ್ಯರು :** ಪ್ರತಿದಿನ ಏಳು ಸಾರಿ ಜಪ ಮಾಡುವುದರಿಂದ ಗಾಯತ್ರೀದೇವಿಯು ಶರೀರವನ್ನು ಶುದ್ಧಿ ಮಾಡುತ್ತಾಳೆ; ಹತ್ತು ಸಾರಿ ಜಪಮಾಡುವುದರಿಂದ ಸ್ವರ್ಗಲೋಕ ಪ್ರಾಪ್ತವಾಗುವುದು ; ಇಪ್ಪತ್ತು ಸಾರಿ ಜಪಮಾಡುವುದರಿಂದ ಶಿವಲೋಕವನ್ನು ಮುಟ್ಟಬಹುದು ; ನೂರೆಂಟು ಸಾರಿ ಜಪಮಾಡುವುದರಿಂದ ಜನ್ಮಸಮುದ್ರದಿಂದ ಪಾರಾಗುತ್ತಾನೆ. ಹೀಗೆ ಪಾರಾದವನಿಗೆ ಪುನರ್ಜನ್ಮವಿಲ್ಲ. ಗಾಯತ್ರಿಯನ್ನು ಹತ್ತು ಸಾರಿ ಜಪಮಾಡುವುದರಿಂದ ಈ ಜನ್ಮದ ಪಾಪವು ಪರಿಹಾರವಾಗುವುದು. ನೂರು ಸಾರಿ ಜಪಮಾಡುವುದರಿಂದ ಪೂರ್ವಜನ್ಮದ ಮತ್ತು ಸಾವಿರ ಸಾರಿ ಜಪ ಮಾಡುವುದರಿಂದ ಮೂರು ಜನ್ಮಗಳ ಪಾಪವೂ ಪರಿಹಾರವಾಗುವುದು.

**೩೫. ಆಶ್ವಲಾಯನರು :** ಧಾರ್ಮಿಕವಾದ ಸರ್ವಕರ್ಮಗಳನ್ನೂ ಬಿಟ್ಟಾಗ್ಯೂ, ಅಧ್ಯಾತ್ಮವಿದ್ಯಾರಹಿತನಾಗಿದ್ದಾಗ್ಯೂ, ಸಂಧ್ಯೋಪಾಸನೆಯಲ್ಲಿ ನಿರತನಾದವನು ಪರಮಾತ್ಮನ ಅನುಗ್ರಹಕ್ಕೆ ಪಾತ್ರನಾಗುತ್ತಾನೆ.

**೩೭. ಧರ್ಮಶಾಸ್ತ್ರಕಾರರು :** ಗಾಯತ್ರೀ ಜಪದಿಂದ ಮನುಷ್ಯನು ತೊಳೆದುಕೊಳ್ಳಲಾಗದ ಪಾಪವೇ ಇಲ್ಲ. ಆದ್ದರಿಂದಲೇ ಎಲ್ಲಾ ಪಾಪಗಳಿಗೂ ಗಾಯತ್ರೀ ಜಪವನ್ನು ಪ್ರಾಯಶ್ಚಿತ್ತವಾಗಿ ವಿಧಿಸಿರುವುದು ಕಂಡುಬರುತ್ತದೆ.

**೩೭. ಗಾಯತ್ರೀ-ಮಂಜರಿಯಲ್ಲಿ :** ಪರಮೇಶ್ವರನು ಪಾರ್ವತಿಗೆ ಹೀಗೆ ಹೇಳುತ್ತಾನೆ: ಗಾಯತ್ರೀಯು ತಪವಾಗಿದೆ, ಯೋಗವಾಗಿದೆ ಮತ್ತು ಸಿದ್ಧಿಗಳ ಮಾತೆಯಾಗಿದೆ. ಈ ಗಾಯತ್ರೀಗಿಂತ ದೊಡ್ಡ ವಸ್ತು ಬೇರೆ ಇಲ್ಲ.

**೩೮. ಯೋಗಿಗಳು :** ಪ್ರಾಣಧಾರಿಣಿಯಾದ ಗಾಯತ್ರೀಯು ಕುಂಡಲಿನೀ ಶಕ್ತಿಯೇ ಸರಿ. ತತ್ತ್ವಸ್ವರೂಪಳಾದ ಗಾಯತ್ರೀಯು ಕುಂಡಲಿನಿಯಿಂದಲೇ ಹುಟ್ಟುತ್ತಾಳೆ.

**೩೯. ಭೀಷ್ಮರು :** ದೀರ್ಘಾಯುಸ್ಸನ್ನು ಪಡೆಯಬೇಕಾದರೆ ಸಂಧ್ಯಾವಂದನೆಯೂ, ಗಾಯತ್ರೀ ಉಪಾಸನೆಯೂ ಅತಿ ಮುಖ್ಯವಾದುವು.

**೪೦. ಶಂಕರ ಭಗವತ್ಪಾದರು :** ಗಾಯತ್ರೀ ಮಂತ್ರವು ಜಗತ್ಕಾರಣವಾದ ಬ್ರಹ್ಮವಸ್ತುವಿನ ತತ್ತ್ವವನ್ನು ತಿಳಿಸುವುದು. ಈ ಅದ್ವಿತೀಯ ಬ್ರಹ್ಮಾತ್ಮೈಕ್ಯವೇ ಈ ತತ್ತ್ವವು. ಈ ಅರ್ಥವನ್ನು ಧ್ಯಾನಮಾಡುತ್ತಾ ಗಾಯತ್ರೀಯನ್ನು ಜಪಮಾಡಬೇಕು.

**೪೧. ವಿದ್ಯಾರಣ್ಯರು :** ತೇಜೋಮಯವಾದ ಸೂರ್ಯಮಂಡಲ ವ್ಯಾಪ್ತಿಯಿಂದ ಸಾವಿತ್ರೀ ಎಂದು ಕರೆಸಿಕೊಳ್ಳುವ ಶ್ರೀಗಾಯತ್ರೀದೇವಿಯನ್ನು ದ್ವಿಜರಾದವರು ತಪ್ಪದೇ ಧ್ಯಾನಮಾಡಬೇಕು.

**೪೨. ಶ್ರೀರಾಮಕೃಷ್ಣ ಪರಮಹಂಸರು :** ಗಾಯತ್ರೀ ಮಂತ್ರ ಚಿಕ್ಕದು. ಆದರೆ ಅಪಾರ ಶಕ್ತಿಯಿಂದ ಕೂಡಿರತಕ್ಕ ಮಂತ್ರ. ಇದರಿಂದ ಸಿದ್ಧಿಗಳು ಲಭ್ಯವಾಗುವುವು. ಗಾಯತ್ರೀ ಜಪಸಾಧನೆ ಮಾಡಿದವರಿಗೆ ಇದರ ಅನುಭವವಾಗುತ್ತದೆ. ನನಗೆ ಮೋಕ್ಷಕ್ಕೆ ಇರುವ ದಾರಿ ಎಂದರೆ ವೇದದಿಂದ ಗಾಯತ್ರೀಗೆ, ಗಾಯತ್ರೀಯಿಂದ ಓಂಕಾರಕ್ಕೆ, ಓಂಕಾರದಿಂದ ಮೋಕ್ಷಕ್ಕೆ. ಗಾಯತ್ರೀ ಜಪದಿಂದ ತುಂಬಾ ಶಕ್ತಿ ಲಭಿಸುತ್ತದೆ.

**೪೩. ಸ್ವಾಮಿ ವಿವೇಕಾನಂದರು :** ಗಾಯತ್ರೀ ಸದ್ಬುದ್ಧಿಯ ಮಂತ್ರ. ಪರಮಾತ್ಮನಲ್ಲಿ ಬೇಡಲು ಯೋಗ್ಯವಾದ್ದು ಸದ್ಬುದ್ಧಿಯೊಂದೇ. ಗಾಯತ್ರೀ ಮಂತ್ರದಲ್ಲಿ 'ಸತ್' ಬುದ್ಧಿಗೆ ಸಾಧ್ಯತೆ ಇರುವುದರಿಂದ ಇದನ್ನು 'ಮಂತ್ರ

ಮುಕುಟಮಣಿ' ಎಂದು ಹೇಳುವುದಲ್ಲದೆ 'ಸತ್' ಬುದ್ಧಿಯಿಂದ, ಸನ್ಮಾರ್ಗದಲ್ಲಿ, ಸತ್ಕರ್ಮಮಾಡುವಂತೆ ಪ್ರೇರಣೆಯುಂಟಾಗುತ್ತದೆ ಮತ್ತು ಸತ್ ಕಡೆಗೆ ಪ್ರಗತಿಯಾಗುವವರೆಗೂ ಯಾವ ರೀತಿಯ ತೊಂದರೆ ಆಗದಂತೆ ಮಾಡುವುದು. ಸದ್ಬುದ್ಧಿಯಿಂದ ಸನ್ಮಾರ್ಗ ಸಿಕ್ಕುತ್ತದೆ ಮತ್ತು ಸತ್ಕರ್ಮ ಉಂಟಾಗುತ್ತದೆ. ಆಗ ಎಲ್ಲಾ ಪ್ರಕಾರದ ಸುಖಗಳೂ ಪ್ರಾಪ್ತ ವಾಗುವುವು.

೪೪. **ಸ್ವಾಮಿ ದಯಾನಂದರು** : ಎಲ್ಲಾ ಮಂತ್ರಗಳಿಗಿಂತ ಶ್ರೇಷ್ಠ ವಾದದ್ದು ಮತ್ತು ನಾಲ್ಕು ವೇದಗಳಿಗೂ ಮೂಲವಾದ ಗುರುಮಂತ್ರವೇ ಈ ಗಾಯತ್ರೀ. ಆದಿಕಾಲದಲ್ಲಿ ಎಲ್ಲಾ ಋಷಿಮುನಿಗಳೂ ಈ ಗಾಯತ್ರೀ ಮಂತ್ರವನ್ನೇ ಜಪಿಸುತ್ತಿದ್ದರು. ಇದರ ಧ್ಯಾನದಿಂದ ಬುದ್ಧಿಯ ಮಲಿನತೆ ದೂರವಾಗುವುದು ಮತ್ತು ಧರ್ಮಾಚರಣೆಯಲ್ಲಿ ಶ್ರದ್ಧೆ ಮತ್ತು ಯೋಗ್ಯತೆ ಹುಟ್ಟುವುದು.

೪೫. **ರಮಣ ಮಹರ್ಷಿಗಳು** : ಯೋಗವಿದ್ಯೆಗೆ ಸೇರಿದಂಥ ಮಂತ್ರ ವಿದ್ಯೆ ಬಹಳ ಪ್ರಬಲವಾದುದು. ಮಂತ್ರಶಕ್ತಿಯಿಂದ ಅದ್ಭುತ ಸಫಲತೆಗಳು ದೊರೆಯುವುವು, ಗಾಯತ್ರೀ ಮಂತ್ರ ಒಂದರಿಂದಲೇ ಆಧ್ಯಾತ್ಮಿಕ ಮತ್ತು ಲೌಕಿಕ ಲಾಭಗಳು ದೊರೆಯುತ್ತವೆ.

೪೬. **ಸ್ವಾಮಿ ಶಿವಾನಂದ ಸರಸ್ವತಿಗಳು** : ಗಾಯತ್ರೀದೇವಿಯು ಸಮಸ್ತ ವೇದಗಳ ಸಾರ, ಪರಬ್ರಹ್ಮವು. ಗಾಯತ್ರೀ ಮಂತ್ರವನ್ನು ವ್ಯಾಹೃತಿಗಳೊಡನೆ ಉಪಾಸಿಸುತ್ತ ಸರ್ವಾತ್ಮಕವಾದ ಬ್ರಹ್ಮವು ನಮ್ಮ ಅಂತಃಕರಣದಲ್ಲಿ ಪ್ರಕಾಶಿಸಲಿ ಎಂದು ಧ್ಯಾನಿಸೋಣ. ಗಾಯತ್ರೀಯು ವೇದ ಜನನೀ ; ಅವಳೇ ಅಜ್ಞಾನ ನಾಶಕಳು.

೪೭. **ಸ್ವಾಮಿ ದಯಾನಂದ ಸರಸ್ವತಿಗಳು** : ಇವರು ತಮ್ಮ ಅಂತಿಮ ಸಮಯ ಪ್ರಾಪ್ತವಾದಾಗ ತಮ್ಮ ಆಸನದಲ್ಲಿ ಥಟ್ಟನೆ ಎದ್ದು ಕುಳಿತು ಶ್ರೀ ಗಾಯತ್ರೀ ಜಪಮಾಡುತ್ತಾ ದೇಹವನ್ನು ತ್ಯಜಿಸಿದರೆಂದು ತಿಳಿದು ಬರುತ್ತದೆ.

೪೮. **ಲೋಕಮಾನ್ಯ ತಿಲಕರು** : ಕುಮಾರ್ಗವನ್ನು ತ್ಯಜಿಸಿ, ಶ್ರೇಷ್ಠ ಮಾರ್ಗದಲ್ಲಿ ನಡೆಯುವ ಪ್ರೇರಣೆ ಗಾಯತ್ರೀ ಮಂತ್ರದಲ್ಲಿದೆ. ಗಾಯತ್ರೀ ಮಂತ್ರದಿಂದ 'ಸತ್' 'ಅಸತ್'ಗಳ ವಿವೇಕವೂ 'ಸನ್ಮಾರ್ಗ' 'ದುರ್ಮಾರ್ಗ'

ಗಳ ತಿಳುವಳಿಕೆಯೂ ಆಗಿ ಶ್ರೇಷ್ಠ ಮಾರ್ಗಗಳ ಪ್ರೇರಣೆಯು ಮನಸ್ಸಿನಲ್ಲಿ ಉಂಟಾಗುತ್ತದೆ. ಇದರಿಂದಲೇ ಆತ್ಮಕ್ಕೆ ಬೆಳಕು ಲಭಿಸುವುದು.

**೪೯. ಮಹಾತ್ಮ ಗಾಂಧಿ:** ಗಾಯತ್ರೀ ಮಂತ್ರದ ನಿರಂತರ ಜಪವು ರೋಗವನ್ನು ಗುಣಪಡಿಸುವುದು ಮತ್ತು ಆತ್ಮೋನ್ನತಿಯ ಕಾರ್ಯದಲ್ಲಿ ಅತ್ಯಂತ ಉತ್ತಮವಾದದ್ದು. ಸ್ಥಿರಚಿತ್ತ ಮತ್ತು ಶಾಂತ ಹೃದಯದಿಂದ ಮಾಡಿದ ಜಪವು ಪ್ರಭಾವ ಬೀರಿ ಕಷ್ಟಗಳು ದೂರವಾಗಬಲ್ಲವು. ಇದು ಆತ್ಮಪೂರ್ವಕವಾದ ಅದ್ಭುತ ಶಕ್ತಿಯುಳ್ಳ, ಅತ್ಯುತ್ತಮ ಫಲ ಕೊಡತಕ್ಕ ಮಂತ್ರವಾಗಿದೆ.

**೫೦. ಬಾಲಗಂಗಾಧರ ತಿಲಕರು :** ಅದ್ಭುತ ಶಕ್ತಿಯುಳ್ಳ ಪರಮ ಪವಿತ್ರವಾದ ಅಸಮಾನ ಮಂತ್ರ ಗಾಯತ್ರಿಯಾಗಿದೆ.

**೫೧. ರವೀಂದ್ರನಾಥ ಠಾಕೂರ್ :** ಆರೋಗ್ಯವನ್ನು ಬಯಸುವವನು ಶುದ್ಧವಾಯು ಸೇವನೆಗಾಗಿ ಸ್ವಚ್ಛಂದ ಬಯಲಿಗೆ ಹೋಗುವಂತೆ ಗಾಯತ್ರೀ ಮಂತ್ರವನ್ನ ಜಪಿಸಿರಿ. ಇದು ಉದಾರವೂ, ಅತ್ಯಂತ ಸರಳವೂ ಆಗಿದೆ. ಇದರಲ್ಲಿ ನಕಲಿತನವಿಲ್ಲ. ಬಾಹ್ಯ ಜಗತ್ತು ಹಾಗೂ ಆಂತರಿಕ ಬುದ್ಧಿ ಇವೆರಡೂ ಅದರಲ್ಲಿವೆ.

**೫೨. ಮಾಜಿ ರಾಷ್ಟ್ರಪತಿ ಡಾ|| ಸರ್ವಪಲ್ಲಿ ರಾಧಾಕೃಷ್ಣನ್ :** ನಾವು ಈ ಸಾರ್ವಭೌಮಪ್ರಾರ್ಥನೆಯಾದ ಗಾಯತ್ರಿಯಬಗೆಗೆ ವಿಚಾರ ಮಾಡಿದರೆ ಇದರಿಂದ ನಮಗೆ ನಿಜಕ್ಕೂ ಸ್ಥಿರವಾದ ಲಾಭವಾಗುವುದೆಂದು ಗೊತ್ತಾಗುತ್ತದೆ. ಗಾಯತ್ರಿಯು ನಮ್ಮ ಒಳಗೆ ಪುನರ್ಜೀವನದ ಸ್ರೋತಸ್ಸನ್ನು ಹುಟ್ಟಿಸಲು ಒಂದು ನಿಜವಾದ ಕಳಕಳಿಯ ಪ್ರಾರ್ಥನೆಯಾಗಿದೆ. ಬೆಳಕನ್ನು ಪಡೆಯಲು ಅಥವಾ ಮಾರ್ಗವನ್ನು ಹುಡುಕಿ ತೆಗೆಯಲು ಇದು ತನ್ನ ಒಳಗಿನಿಂದ ಮಾಡುವ ಒಂದು ಅನ್ವೇಷಣೆ. ಇದು ಜನಸಮೂಹದಲ್ಲಿ ಕುಳಿತು ಮಾಡುವಂತಹುದಲ್ಲ, ಈ ಅನ್ವೇಷಣೆಯನ್ನು ನಡೆಸುತ್ತಿರಬೇಕೆಂಬುದೇ ಗಾಯತ್ರಿಯ ಆಶಯ.

**೫೩. ಮ್ಯಾಕ್ಸ್ ಮುಲ್ಲರ್** (ಜರ್ಮನ್ ತತ್ತ್ವಜ್ಞ): ಪ್ರತಿಯೊಬ್ಬರ ಮನೆಯ ಬಾಗಿಲ ಮೇಲೆ ಗಾಯತ್ರೀ ಮಂತ್ರವನ್ನು ಕೆತ್ತನೆಯ ಕೆಲಸದಿಂದ ಬರೆಸಿರಿ. (Gayathri should be carved on the door of every house)

೫೪. ಫಾದರ್ ಹೊ ನೋರೇ (ಮದ್ರಾಸಿನ ಕ್ರಿಶ್ಚಿಯನ್ ಕಾಲೇಜಿನ ಪ್ರಾಧ್ಯಾಪಕರು) : ಬ್ರಾಹ್ಮಣ ವಿದ್ಯಾರ್ಥಿಗಳ ಐವತ್ತು ವರ್ಷದ ಪರಿಚಯ ದಿಂದ ಹೀಗೆ ಹೇಳುತ್ತೇನೆ: ಈ ಜಾತಿಯ ವಿದ್ಯಾರ್ಥಿಗಳ ಬುದ್ಧಿಯ ತೀಕ್ಷ್ಣತೆಯು ಯುರೋಪಿನ ವಿಶ್ವವಿದ್ಯಾಲಯಗಳ ಸಾಮಾನ್ಯ ಮಟ್ಟ ಕ್ಕಿಂತ ಎಷ್ಟೋ ಹೆಚ್ಚಾಗಿರುವುದು ಮಾತ್ರವಲ್ಲ, ಅಲ್ಲಿನ ಅತಿ ಮೇಲ್ಸ್ತರದ ವಿದ್ಯಾರ್ಥಿವರ್ಗಗಳದಕ್ಕಿಂತ ಹೆಚ್ಚಿನದಾಗಿದೆ. ಇದಕ್ಕೆ ಗಾಯತ್ರೀ ಉಪಾ ಸನೆಯೇ ಕಾರಣ.

ಈಗಿನವರು ಗಾಯತ್ರಿಯನ್ನು ಬಿಟ್ಟಿದ್ದರೂ ರಕ್ತಗತವಾಗಿ ನಮ್ಮಲ್ಲಿ ಬಂದ ಗಾಯತ್ರೀ ಶಕ್ತಿಯು ಕೆಲವು ತಲೆಮಾರುಗಳವರೆಗೂ ಕೆಲಸ ಮಾಡು ವುದು. ಆದರೆ ಇದು ತಲೆಯಿಂದ ತಲೆಗೆ ತನ್ನ ಶಕ್ತಿಯನ್ನು ಕಳೆದುಕೊಳ್ಳು ವುದು.

ಈ ಮಂತ್ರದ ಬಗ್ಗೆ ಜಗತ್ತಿನ ವಿವಿಧ ಭಾಷೆಗಳಲ್ಲಿ ಆಗಿರುವ ಸಾಹಿತ್ಯವು ಬಹು ದೊಡ್ಡದು. ಬೃಹತ್ ಸ್ವರೂಪದಿಂದ ಬೆಳಗುವ ನಮ್ಮ ಭಾರತೀಯ ವಾಙ್ಮಯವನ್ನೆಲ್ಲಾ ಗಾಯತ್ರೀ ಮಂತ್ರವು, ಹಿಮಾಲಯದಂತಹ ಪರ್ವತ ವನ್ನೇ ಅಂಗೈ ಅಗಲದ ಕನ್ನಡಿಯು ತನ್ನಲ್ಲಿ ಪ್ರತಿಬಿಂಬಿಸಿಕೊಳ್ಳುವಂತೆ ಬಿಂಬಿಸಿಕೊಂಡಿದೆ. ಗಾಯತ್ರೀ ಮಂತ್ರದ ಅರ್ಥಗಳು ವಿಶ್ವವಾಙ್ಮಯದೊಳಗೆ ಓತಪ್ರೋತವಾಗಿ ಸೇರಿಕೊಂಡಿವೆ ಅಥವಾ ವಿಶ್ವವಾಙ್ಮಯವನ್ನೆಲ್ಲಾ ಕರತಲಾ ಮಲಕವಾಗಿಸಿದ ಮಹಿಮನಾರೋ ಅವನೇ ಗಾಯತ್ರೀಮಂತ್ರದ ಸರ್ವಾರ್ಥ ಗಳನ್ನೂ ಹೇಳಬಲ್ಲನಲ್ಲದೆ ಅನ್ಯರು ಹೇಳಲಾರರು. ಅನ್ಯರು ಹೇಳಿದರೆಂದರೆ ಅನೆಲ್ಲವೂ ಅಪೂರ್ಣ. ಆದುದರಿಂದ ಈ ಕೃತಿಯು ಪೂರ್ಣತ್ವವನ್ನು ಹೊಂದಿದೆ ಎಂದಾಗಲೀ, ಗಾಯತ್ರೀ ಮಂತ್ರದ ಅರ್ಥವು ಇಷ್ಟೇ ಎಂದಾಗಲೀ ತಿಳಿಯುವುದು ಸಮಂಜಸವಲ್ಲ. ವೇದಗಳ ಮಹಿಮೆಯ ವರ್ಣನೆಯೇ ಅತ್ಯಂತ ಕಠಿಣ. ವೇದಮಾತೆಯ ಪರಿಭಾಷೆ, ವ್ಯಾಖ್ಯಾನ, ಅವುಗಳ ಗರ್ಭ ದಲ್ಲಿ ಅಡಗಿರುವ ಮಹಾಶ್ರೇಯಗಳ ವರ್ಣನೆಯಂತು ಅಸಾಧ್ಯ. ಇಲ್ಲಿರುವುದು ಕೇವಲ ಆ ಶಕ್ತಿಯ ಕಡೆ ಬೆರಳು ತೋರಿಸಿದಂತೆ ಮಾತ್ರ. ಎಷ್ಟೋ ಸಹಸ್ರ ವರ್ಷಗಳಿಂದ ವಿದ್ವಾಂಸರೂ, ಮತಾಚಾರ್ಯರುಗಳೂ, ಮಹರ್ಷಿಗಳೂ, ಸಮಾಜ ಶ್ರೇಷ್ಠರೂ ಶ್ರೀಗಾಯತ್ರಿಯನ್ನು ಪೂಜಿಸಿಕೊಂಡು ಬಂದಿದ್ದಾರೆ. ಅನೇಕ ಮಹನೀಯರೂ, ಮಹರ್ಷಿಗಳೂ, ಶ್ರುತಿ ಸ್ಮೃತಿ ಪುರಾಣಾದಿಗಳೂ ಹಾಡಿ ಹೊಗಳಿವೆ. ಹೀಗೆ ಬಹು ವಿಧದಲ್ಲಿಬಹುಪ್ರಖ್ಯಾತವಾಗಿರುವ ಗಾಯತ್ರಿ

ಯಲ್ಲಿ ಏನೋ ಒಂದು ವಿಶೇಷವಿರಲೇಬೇಕು ಎಂಬ ಪೂರ್ಣ ವಿಶ್ವಾಸ ನಮಗಿರಬೇಕು. ಯಾವ ಸತ್ಯವು ನಮಗೆ ಪ್ರತ್ಯಕ್ಷ ವಸ್ತುವಲ್ಲವೋ, ಯಾವ ಸತ್ಯವು ಆತ್ಮರೂಪದಲ್ಲಿ ಅನುಭೂಯಮಾನವಾಗಿದ್ದರೂ ರಹಸ್ಯವಾಗಿ ಅನೂಹ್ಯವಾಗಿದೆಯೋ ಅದರ ವಿಷಯದಲ್ಲಿ ಶ್ರುತಿ ಪ್ರಮಾಣವನ್ನು ಬಿಟ್ಟರೆ ನಮಗೆ ಗತ್ಯಂತರವಿಲ್ಲ. ತತ್ತ್ವ, ದೈವ ಮೊದಲಾದ ಸೂಕ್ಷ್ಮಪವಿತ್ರ ವಿಚಾರಗಳ ಬಗ್ಗೆ ವಿವರಿಸುವ ಯೋಗ್ಯತೆಯಾಗಲೀ, ಅಂಥ ವಿಚಾರಕ್ಕೆ ಅವಶ್ಯಕವಾದ ಜ್ಞಾನವಾಗಲೀ, ಅನುಷ್ಠಾನ–ಅನುಭವವಾಗಲೀ, ನನ್ನ ಪಾಲಿಗೆ ಇಲ್ಲ. ಮಹಾಭಾರತದಲ್ಲಿ ವ್ಯಾಧನಿಗೆ ಧರ್ಮೋಪದೇಶ ಮಾಡುವ ಕರ್ತವ್ಯ ಒದಗಿದ ಹಾಗೆ ಈ ಕೆಲಸ ಒದಗಿ ಬಂತು. ಈ ಕೃತಿಯನ್ನು ಇಷ್ಟು ವಿವರವಾಗಿ ಬರೆದಿದ್ದರೂ, ಗಾಯತ್ರೀಯ ವಿಷಯವನ್ನೆಲ್ಲಾ—ಅದರಲ್ಲಿ ಅಡಗಿಕೊಂಡಿರುವ ಸೂಕ್ಷ್ಮ ವಿಚಾರಗಳನ್ನೆಲ್ಲಾ ಸಮಗ್ರವಾಗಿ ಚರ್ಚಿಸಿ ವಿವರಿಸಿರುವೆನೆಂದು ನನಗನಿಸಿಲ್ಲ. ಇದು ದಿಗ್ದರ್ಶನ ಮಾತ್ರದ್ದೆ. ಈ ಕೃತಿಯಲ್ಲಿ ದೊರೆಯದ್ದನ್ನು ವಾಚಕರ ಅಂತರ್ಮುಖತ್ವದ ಅಭ್ಯಾಸ, ಸ್ವಬುದ್ಧಿಯಿಂದಾಗುವ ಮನನ, ವಿಮರ್ಶೆ, ಅನುಸಂಧಾನಗಳು ದೊರಕಿಸಿಕೊಟ್ಟಾವು. ಈ ಮಂತ್ರದ ಸರ್ವತೋಮುಖವಾದ ವಿಚಾರಗಳಲ್ಲಿ ಸ್ವಲ್ಪವನ್ನಷ್ಟೇ ಸಂಗ್ರಹಿಸಿ, ನನ್ನ ಬುದ್ಧಿಯ ಇತಿಮಿತಿಗಳಿಗೆ ಅನುಗುಣವಾಗಿ ಇದನ್ನು ಬರೆದಿರುತ್ತೇನೆ.

ದಿವ್ಯ ಮಹರ್ಷಿಗಳಿಂದ ಪಡೆದ ಈ ಪವಿತ್ರವಾದ ಗಾಯತ್ರೀ ಮಂತ್ರದ ಪದಗಳ ಅರ್ಥ, ಸ್ವರೂಪ ಮತ್ತು ಸಂಧ್ಯೋಪಾಸನೆಯ ಮಂತ್ರಗಳನ್ನು ಕಿಂಚಿತ್ ತಿಳಿದುಕೊಂಡಿರುವ ದ್ವಿಜರಾದ ನಮ್ಮೆಲ್ಲರಿಗೂ ಶ್ರೀಗಾಯತ್ರೀ ಮಾತೆಯು ಸನ್ಮಾರ್ಗದಲ್ಲಿ ಪ್ರಚೋದನೆಯನ್ನುಂಟುಮಾಡಲಿ ಎಂಬುವೇ ನನ್ನ ಪ್ರಾರ್ಥನೆ.

## ವೈಜ್ಞಾನಿಕ ವಿವರಣೆ

**ಸಾಮಾನ್ಯ ವಿವರಣೆ:** ಆದಿಯಲ್ಲಿ (ಕೃತಯುಗದಲ್ಲಿ) ದೇವಾಸುರರು ಬೇರೆ ಬೇರೆ ಲೋಕಗಳಲ್ಲಿ (ದೇವಲೋಕ ಮತ್ತು ಅಸುರಲೋಕ) ಇದ್ದರು; ತ್ರೇತಾಯುಗದಲ್ಲಿ ಈ ಭೂಲೋಕದಲ್ಲಿಯೇ ಬೇರೆಬೇರೆ ಭಾಗಗಳಲ್ಲಿ (ಅಯೋಧ್ಯೆ ಮತ್ತು ಲಂಕಾ)ದ್ದರು ; ದ್ವಾಪರಯುಗದಲ್ಲಿ ಒಂದೇ ಕುಟುಂಬದಲ್ಲಿ (ಪಾಂಡವರು ಮತ್ತು ಕೌರವರು)ಇರುತ್ತಿದ್ದರು. ಈ ಕಲಿಯುಗದಲ್ಲಿ

ಒಂದೇ ಶರೀರದಲ್ಲಿ (ಸನ್ಮಾರ್ಗ ಮತ್ತು ದುರ್ಮಾರ್ಗಕ್ಕೆ ಎಳೆಯುವ 'ವಾಸನಾ'ಗಳು) ವಾಸವಾಗಿದ್ದಾರೆ. ಇದನ್ನು ನಾವು ಪ್ರತಿದಿನವೂ ಅನುಭವಿಸುತ್ತಿದ್ದೇವೆ.

ಕೊಳೆ ಕಶ್ಮಲಗಳು ತುಂಬಿದ ಜಾಗದಲ್ಲಿ ರೋಗಾಣುಗಳ ಉತ್ಪತ್ತಿ ಆಗುವಂತೆ ಅಜ್ಞಾನ ತುಂಬಿದ ಮನಸ್ಸಿನಲ್ಲಿ ಅಸಂಗತ ವಿಷಯಗಳು ಮನೆಮಾಡುವುವು. ಮನುಷ್ಯನ ಮನಸ್ಸೇ ಆತನ ಅಭಿವೃದ್ಧಿ ಅಭ್ಯುದಯಕ್ಕೂ, ದುಃಖ ದುರಂತಕ್ಕೂ ಕಾರಣವೆಂಬುದು ಹಳೆಯ ಮಾತಾದರೂ ಅದು ಹೇಳುವ ಸತ್ಯ ನಿತ್ಯನೂತನ. ತನ್ನಂತೆ ಇತರರು ಎಂಬ ವಿಶ್ವಭ್ರಾತೃತ್ವದ ವಿಶಾಲ ಮನೋಭಾವ ಮನಸ್ಸಿನಲ್ಲಿ ಮೂಡಿದರೆ, ಕಳ್ಳತನ, ಕೊಲೆ, ಸುಲಿಗೆ, ಅನ್ಯಾಯ, ಅನಾಚಾರಗಳ ಯಾವ ಸಾಂಕ್ರಾಮಿಕ ರೋಗವೂ ಬಂದು ತಟ್ಟದು. ಮನಸ್ಸಿನಲ್ಲಿ ಮೂಡಿ ಮಾಯವಾಗುವ ಯೋಚನಾ ತರಂಗಗಳು, ಭಾವನೆಗಳು ರಕ್ತಪ್ರವಾಹ ಹಾಗೂ ಹೃದಯದ ಆಳಕ್ಕೂ ಇಳಿಯಬಲ್ಲುವು ; ನಮ್ಮ ಆರೋಗ್ಯದ ಔನ್ನತ್ಯಕ್ಕೂ, ಅನಾರೋಗ್ಯದ ಸಂಕಟಕ್ಕೂ ಕಾರಣವಾಗಬಲ್ಲುವು. ನಿಷೇಧಾತ್ಮಕ ಅಥವಾ ದುಷ್ಟ ಆಲೋಚನೆಗಳು ಕೆಟ್ಟ ಪರಿಣಾಮವನ್ನುಂಟುಮಾಡಿದರೆ, ಸದಾಲೋಚನೆ,ಸದ್ಭಾವನೆಗಳು ಒಳ್ಳೆಯ ಪ್ರಭಾವವನ್ನು ಬೀರುತ್ತವೆಂಬುವ ಮಾತು ಬರಿಯ ಕಲ್ಪನೆಯ ಅಥವಾ ಧಾರ್ಮಿಕ ಮುಖಂಡರ ಸವಕಲು ಬೋಧನೆಯಲ್ಲ. ರಷ್ಯಾದೇಶದ ತಜ್ಞರಿಂದ ಸಂಶೋಧನೆಗಳಿಂದ ಕಂಡುಹಿಡಿದಿರುವ ಸತ್ಯಸಂಗತಿ. ವ್ಯಕ್ತಿಯೊಬ್ಬನ ಮನಸ್ಸಿಗೆ ಚಿಂತೆ, ಭಯ, ಉದ್ವೇಗಗಳನ್ನುಂಟುಮಾಡುವ ಯೋಚನೆ, ಭಾವನೆಗಳನ್ನು ಬಿತ್ತಿದಾಗ ರೋಗಾಣುಗಳಿಂದ ನಮ್ಮನ್ನು ರಕ್ಷಿಸುವ ರಕ್ತ ಪ್ರವಾಹದಲ್ಲಿನ ಬಿಳಿರಕ್ತಕಣಗಳು ನಿರ್ದಿಷ್ಟಾವಧಿಯಲ್ಲಿ ನಾಶವಾಗುವುವು ; ಹಾಗೂ ಉತ್ಸಾಹ, ಧೈರ್ಯ, ಸಂತೋಷಗಳನ್ನುಂಟುಮಾಡುವ ಭಾವನೆಗಳನ್ನು ಹರಿಯಬಿಟ್ಟಾಗ ಅಂಥ ಬಿಳಿರಕ್ತಕಣಗಳು ವೃದ್ಧಿಯಾಗುವುವು ಎಂಬುದನ್ನು ರಷ್ಯಾತಜ್ಞರು ಸಂಶೋಧನೆಯಿಂದ ಕಂಡುಹಿಡಿದಿದ್ದಾರೆ. ಬೇರೆ ಬೇರೆ ಭಾವನೆಗಳಿಂದ ಶರೀರದಲ್ಲಾಗುವ ಪರಿಣಾಮಗಳನ್ನು ಗಮನಿಸಬಹುದು. ಉದಾ : ಕೋಪ ಬಂದಾಗ ಹುಬ್ಬು ಗಂಟಾಗುವುದು. ಕಣ್ಣು ಕೆಂಪಾಗುವುದು, ಧ್ವನಿ ಗಡಸಾಗುವುದು. ಇವು ಶರೀರದ ಹೊರಭಾಗದಲ್ಲಿ ಕಂಡುಬರುವ ಲಕ್ಷಣಗಳು. ಆದರೆ ಶರೀರದ ಒಳಗಡೆ ರಕ್ತದ ಒತ್ತಡ ಅಧಿಕವಾಗುವುದು, ಎದೆ ಬಡಿತ ಏರುವುದು ಇತ್ಯಾದಿ ಕಾರ್ಯಗಳು ನಡೆಯುವುವು.

ಹಾಗೆಯೇ ಭಯ ನಮ್ಮನ್ನು ಆವರಿಸಿದಾಗ ಎದೆಬಡಿತ ಏರುತ್ತದೆ, ಉಸಿರಾಡಲು ಕಷ್ಟನೆನಿಸುತ್ತದೆ, ನಡುಕ ಉಂಟಾಗುತ್ತದೆ, ಮೈ ಬೆವರುತ್ತದೆ, ಭಯಗ್ರಸ್ತನು ಕರ್ತವ್ಯವಿಮೂಢನಾಗುತ್ತಾನೆ. ಮಾನಸಿಕವಾಗಿ ದುರ್ಬಲವಾಗುತ್ತಾನೆ, ಆತನ ಆತ್ಮವಿಶ್ವಾಸ ಅಲುಗಾಡುತ್ತದೆ, ಮಾಡುವ ಕಾರ್ಯಕ್ಕೆ ತಡೆಯುಂಟಾಗುತ್ತದೆ, ಇಚ್ಛಾಶಕ್ತಿ, ಸ್ಮೃತಿಶಕ್ತಿಗಳು ದುರ್ಬಲಗೊಳ್ಳುತ್ತವೆ, ಸದ್ಭಾವನೆ, ಪ್ರೀತಿ, ವಿಶ್ವಾಸ, ಸ್ನೇಹ ಇತ್ಯಾದಿಗಳು ಇಲ್ಲವಾಗುತ್ತವೆ, ಕೀಳರಿಮೆ ಬೆಳೆಯುತ್ತದೆ, ನಿದ್ರಾಹೀನತೆ, ಬುದ್ಧಿಭ್ರಮಣೆ, ರಕ್ತದ ಒತ್ತಡ ಇತ್ಯಾದಿಗಳಿಂದ ರೋಗಕ್ಕೆ ಆಹ್ವಾನವಾಗುತ್ತದೆ. ಇವು ಎಲ್ಲರೂ ಸಾಮಾನ್ಯವಾಗಿ ನೋಡಬಹುದಾದಂಥ ಕ್ರಿಯೆಗಳು.

ಪ್ರೀತಿ, ಸದ್ಭಾವನೆ ಮೊದಲಾದುವು ಆರೋಗ್ಯಕರ ರಾಸಾಯನಿಕ ಪರಿಣಾಮಗಳನ್ನು ರಕ್ತದಲ್ಲಿ ಉಂಟುಮಾಡುತ್ತವೆ. ಪ್ರೀತಿಯ ಸ್ಪಂದನ ರೇಡಿಯೋ ಅಲೆಗಳಂತೆ ಚಲಿಸಿ, ಅದಕ್ಕೆ ಕಾತರಿಸುವ ಹೃದಯವನ್ನು ಮುಟ್ಟಬಲ್ಲುದು, ತಟ್ಟಬಲ್ಲುದು ಎಂಬುದು ಈಗ ಕಂಡುಹಿಡಿದಿರುವ ಸಂಗತಿ.

ಅಮೆರಿಕದ ಟ್ರಾನ್ಸ್‌ಪರ್ಸನಲ್ ಸೈಕಾಲಜೀ ವಿಭಾಗದ ತಜ್ಞರು ಮನುಷ್ಯನ ಮನಸ್ಸು ಮಿದುಳಿಗಿಂತ ಭಿನ್ನವಾದುದು ಎನ್ನುತ್ತಾರೆ. ಮನಸ್ಸಿನ ನಿಯಂತ್ರಣದಿಂದ ನರಮಂಡಲ ಹಾಗೂ ದೈಹಿಕ ಚಟುವಟಿಕೆಗಳನ್ನು ನಿಯಂತ್ರಿಸಬಹುದು ಎಂದು ಅವರು ಒಪ್ಪುತ್ತಾರೆ. ನಾವು (ಭಾರತೀಯರು)ಯಾವುದನ್ನು ತತ್ತ್ವ ಅಥವಾ ಜೀವಾತ್ಮ ಎಂದು ಕರೆಯುತ್ತೇವೆಯೋ, ಅದೊಂದು ನಿರ್ದಿಷ್ಟವಾದ ಶಕ್ತಿ ಮಾತ್ರವಲ್ಲ, ದೇಹ ನಾಶವಾದರೂ, ನಾಶವಾಗದ ಆತ್ಮ' ಎಂಬ ತಥ್ಯವನ್ನು ತಿಳಿಯುವ ಕಾಲ ದೂರವಿಲ್ಲ ಎಂಬುದು ಅವರ ಅಭಿಪ್ರಾಯ. ಎಲುಬು, ರಕ್ತ, ಮಾಂಸ, ನರವ್ಯೂಹಗಳಿಂದ ಕೂಡಿದ ಮನುಷ್ಯನ ಶರೀರದ ಹಿನ್ನೆಲೆಯಲ್ಲಿ ಸಾಮಾನ್ಯ ದೃಷ್ಟಿಗೆ ಗೋಚರಿಸದ, ನಮ್ಮ ಮಹರ್ಷಿಗಳು ನೋಡಿದ್ದಾರೆ ಎನ್ನಲಾದ, ಅತ್ಯಂತ ಸೂಕ್ಷ್ಮವಾದ ಒಂದು ಚೈತನ್ಯಮಯ ಶರೀರವಿದೆ ಎಂಬ ಸೂಚನೆ ರಷ್ಯ ತಜ್ಞರಿಗೆ 1939ರ ವೇಳೆಗೆ ತಿಳಿಯಿತು. ಸೂರ್ಯಗ್ರಹಣ ಕಾಲದಲ್ಲಿ ಸೂರ್ಯಮಂಡಲವನ್ನು ಚಂದ್ರಬಿಂಬವು ಮರೆಮಾಡಿ ಮುಸುಕುಗೊಳಿಸುವಂತೆ ನಮ್ಮ ದೇಹವನ್ನೆಲ್ಲಾ ಸೂಕ್ಷ್ಮವಾಗಿ ಬೆಳಗುತ್ತಿರುವ ಆ ಅತ್ಯಂತ ಸೂಕ್ಷ್ಮವಾದ ಚೈತನ್ಯಮಯ ಶರೀರವನ್ನು ನಮ್ಮ ಸ್ಥೂಲ ದೇಹವು ಮರೆಮಾಡಿದೆ ಎಂಬುದನ್ನು ಸೋವಿಯತ್ ವಿಜ್ಞಾನಿಗಳು ಕೀರ್‌ಲಿಯನ್ ಉಪಕರಣಗಳ

ಮೂಲಕ ಪ್ರತ್ಯಕ್ಷವಾಗಿ ನೋಡಿದ್ದಾರೆ ; ನೋಡಬಹುದು ಎನ್ನುತ್ತಾರೆ. ಆ ಚೈತನ್ಯಮಯ ಶರೀರದಿಂದ ಹೊರಹೊಮ್ಮುವ ಪ್ರತಿಭೆಯ ವಿವಿಧ ವರ್ಣ (ಬಣ್ಣ)ಗಳನ್ನು ಅಧ್ಯಯನ ಮಾಡಿದ್ದಾರೆ. ವ್ಯಕ್ತಿಯು ಭಾವೋದ್ವೇಗಗಳಿಗೆ ಸಿಲುಕಿದಾಗ, ಸಂತಪ್ತನಾದಾಗ ಆ ವರ್ಣ(ಬಣ್ಣ)ಗಳಲ್ಲಿ ಸ್ಪಷ್ಟ ವ್ಯತ್ಯಾಸ ಕಂಡುಬಂದಿದೆ. ಈ ಬಣ್ಣಗಳ ಆಧಾರದಿಂದ ವ್ಯಕ್ತಿಯ ಆರೋಗ್ಯವನ್ನು ಗುರುತಿಸಬಹುದು, ಮಾತ್ರವಲ್ಲದೆ ಮುಂದೆ ರೋಗ ಇತ್ಯಾದಿಗಳು ಬರುವ ಸಾಧ್ಯತೆಯನ್ನು ಕಂಡುಕೊಳ್ಳಬಹುದು ಎಂಬುದನ್ನು ಪ್ರಯೋಗಗಳಿಂದ ಕಂಡುಹಿಡಿದಿದ್ದಾರೆ. ಪ್ರಾಣಿಗಳು ಸಾವಿನ ಅಂಚನ್ನು ಸಮೀಪಿಸಿದಾಗ ಚೈತನ್ಯಮಯ ಶರೀರದಿಂದ ಜ್ವಾಲೆಗಳು ಸ್ಥೂಲ ಶರೀರವನ್ನು ಬಿಟ್ಟು ಆಕಾಶದಲ್ಲಿ ಮಾಯವಾಗುವುದನ್ನೂ ಅವರು ನೋಡಿದ್ದಾರೆ. ವಿಜ್ಞಾನದ ಅನ್ವೇಷಣೆಗಳಿಂದ ಉದ್ಭವಿಸಿದ ಸಂದೇಹಗಳನ್ನು ಎದುರಿಸಿನಿಲ್ಲುವಸಾಮರ್ಥ್ಯ ಭಾರತದ ಸನಾತನ ತತ್ತ್ವಗಳಿಗಿದೆ ಎಂದವರು ತಿಳಿದುಕೊಂಡಿದ್ದಾರೆ. ನಮ್ಮ ಜಾಗ್ರತ ಮನಸ್ಸಿನ ಆಚೆ ಸುಪ್ತಮನಸ್ಸಿದೆ. ನಮ್ಮ ಜೀವನದ ಎಲ್ಲಾ ನೆನಪುಗಳ ಉಗ್ರಾಣ ಅದಾಗಿದೆ. ನಮ್ಮ ವರ್ತನೆ, ಸ್ವಭಾವ, ಭಾವನೆಗಳನ್ನು ಸುಪ್ತ ಮನಸ್ಸುಆಳುತ್ತಿರುತ್ತದೆ ಅಥವಾ ನಿಯಂತ್ರಿಸುತ್ತದೆ ಎಂದು ಮನೋವಿಜ್ಞಾನಿಗಳು ಹೇಳುತ್ತಾರೆ. ನಾವು ಯಾವುವನ್ನು ತೀವ್ರವಾಗಿ ಯೋಚಿಸುತ್ತೇವೋ ಅವು ನಮ್ಮ ಸುಪ್ತಮನಸ್ಸಿನಲ್ಲಿ ಮುದ್ರಿತವಾಗಿ, ಮೆಲ್ಲಗೆ ಅಂಕುರಿಸಿ, ಪಲ್ಲವಿಸಿ, ಪುಷ್ಪವಾಗತೊಡಗುತ್ತವೆ ; ನಂತರ ತಕ್ಕ ಫಲವನ್ನೂ ಕೊಡುತ್ತವೆ. ಜಾಗ್ರತ ಮನಸ್ಸಿನ ಮೂಲಕ ನಾವು ಪಡೆದ ಅನುಭವಗಳು, ನಡೆಸುವ ವಿಚಾರಗಳು, ನಂತರ ಮರೆಯಾದಂತೆ ಕಂಡರೂ ನಮ್ಮ ಸುಪ್ತ ಮನಸ್ಸಿನಲ್ಲಿ ನಾಶವಾಗದೆ ಉಳಿದುಕೊಂಡಿರುತ್ತವೆ. ಒಂದು ಜೀವನದ ಅನುಭವಗಳು ಮಾತ್ರವಲ್ಲ, ಹಿಂದೆ ಬದುಕಿದ್ದ ಎಲ್ಲಾ ಜೀವನಗಳ ಅನುಭವಗಳೂ ಈ ಸುಪ್ತಮನಸ್ಸಿನ (unconcious mind) ಬಹಳ ಆಳದಲ್ಲಿ ಸಂಸ್ಕಾರರೂಪವಾಗಿ ಹುದುಗಿರುತ್ತವೆ ಎಂಬುದು ಮನೋವಿಜ್ಞಾನಿಗಳ ಅಭಿಪ್ರಾಯ.

ಮಾನವನ ಶರೀರದ ವ್ಯವಸ್ಥೆಯಲ್ಲಿ ಮನಸ್ಸಿನ ಸ್ಥಾನ ಅತ್ಯಂತ ಪ್ರಧಾನವಾದುದು. ಇಲ್ಲಿ ಸಮುದ್ರದ ಅಲೆಗಳಂತೆ ಆಲೋಚನೆಗಳು ಸದಾ ಏಳುತ್ತಲೇ ಇರುತ್ತವೆ ; ಕಾಮ ಕ್ರೋಧಾದಿಗಳು ತುಂಬಿಕೊಳ್ಳುತ್ತವೆ. ಜೀವನದ ಒತ್ತಡ(Stresses)ಗಳಿಂದ ಅವನು ಮೊದಲು ಗಾಬರಿಗೊಳ್ಳುತ್ತಾನೆ.

ಅವುಗಳನ್ನು ಎದುರಿಸುತ್ತಾನೆ. (alarm-reaction). ನಂತರ ಆ ಒತ್ತಡ ಗಳಿಂದ ತೊಂದರೆಯಾಗದಂತೆ ತಡೆಯಲು ಪ್ರಯತ್ನಿಸುತ್ತಾನೆ (resistance). ಕೊನೆಗೆ ಸೋತು ನಿತ್ರಾಣಗೊಂಡು ಕಾಯಿಲೆಗಳಿಗೆ (Stress disceases) ತುತ್ತಾಗುತ್ತಾನೆ. ಮೆದುಳಿನಿಂದ ಹೊರಟು ದೇಹದಾದ್ಯಂತವೂ ವ್ಯಾಪಿಸಿರುವ ನರಮಂಡಲಗಳ ಮೂಲ ಸ್ಥಾನದಲ್ಲಿ, ಮೆದುಳಿನ ಬುಡದಲ್ಲಿರುವ ಪೈನಿಯಲ್ ಗ್ರಂಥಿ ಮತ್ತು ಪಿಟ್ಯೂಟರಿ ಗ್ರಂಥಿಗಳ ಮೇಲೆ ದುಷ್ಪರಿಣಾಮ ಬೀರುತ್ತದೆ. ಇದರಿಂದ ದೇಹವು ರೋಗ ನಿರೋಧಕ ಶಕ್ತಿಯನ್ನು ಕಳೆದುಕೊಳ್ಳುತ್ತದೆ ಎಂದು ವಿಜ್ಞಾನಿಗಳು ಕಂಡುಹಿಡಿದಿದ್ದಾರೆ. ಈ ಒತ್ತಡದಿಂದ ಬರಬಹುದಾದ ಕಾಯಿಲೆಗಳೆಂದರೆ—ಮಾನಸಿಕ ವ್ಯಥೆ, ಜಠರದ ಹುಣ್ಣು, ಕರುಳಿನ ಬೇನೆ, ಹೃದಯದ ರೋಗಗಳು ಮತ್ತು ಮನೋವಿಕಾರಗಳು. ಆದರೆ ನೈತಿಕ ಗುಣಗಳನ್ನು ಬೆಳೆಸಿಕೊಂಡಿರುವ ವ್ಯಕ್ತಿಯು ಮನಸ್ಸು ಈ ಒತ್ತಡದ ತುಳಿತಗಳನ್ನು (Tensions), ಅಡ್ಡಿ ಆತಂಕಗಳನ್ನು (Stress), ದಣಿವು-ಆಯಾಸಗಳನ್ನು (distress) ಎದುರಿಸಿ ಸ್ಥಿರತೆಯನ್ನೂ, ಶಾಂತಿಯನ್ನೂ ಕಾಪಾಡುವುದಲ್ಲದೆ ಅವುಗಳಿಗೆ ಪರಿಹಾರವನ್ನೂ ಕಂಡುಹಿಡಿಯಬಲ್ಲದು. ಆತಂಕಗಳ ಸಮಯದಲ್ಲಿ ಥೈರಾಯ್ಡ್ ಗ್ರಂಥಿಗಳು ಚುರುಕುಗೊಂಡು ರಕ್ಷಣೆಗೆ ಬೇಕಾದ ಶಕ್ತಿಯನ್ನು ಕೊಡುತ್ತವೆ. ಸುಸಂಸ್ಕೃತ ಮನಸ್ಸು ಉದ್ರೇಕಗೊಳ್ಳುವುದಿಲ್ಲ, ಪ್ರಲೋಭನೆಗೆ ವಶವಾಗುವುದಿಲ್ಲ. ಪ್ರತಿಯೊಂದನ್ನು ಚೆನ್ನಾಗಿ ವಿವೇಚಿಸಿ ಸರಿಯಾದುದನ್ನು ಮಾತ್ರ ಸ್ವೀಕರಿಸುತ್ತದೆ.

ವಿಜ್ಞಾನಿಗಳು ಪ್ರಾಣಾಯಾಮಾದಿ ಧ್ಯಾನದಲ್ಲಿ ನಿರತನಾದ ವ್ಯಕ್ತಿಯು ಮೆದುಳನ್ನು ಇ ಇ ಜ (Electro encephalograph) ಪರೀಕ್ಷೆಗೆ ಒಳಪಡಿಸಿದಾಗ ಅವನ ಪ್ರಧಾನವಾದ ಆಲ್ಫ ತರಂಗಗಳೊಡನೆ (Alpha waves) ಮಿದುಳಿನಲ್ಲೇಳುವ ಭಾವತರಂಗಗಳು ಮಿಳಿತವಾಗಿ ಪ್ರಶಾಂತವಾದ ಮನಸ್ಸು ಇರುತ್ತದೆ ಎಂದು ದೃಢಪಡಿಸಿದ್ದಾರೆ. ಹೈದರಾಬಾದಿನ N.G.R.T ವಿಜ್ಞಾನಿ ಡಾ॥ ಆರ್. ಶ್ರೀನಿವಾಸನ್‌ರವರು ಹೀಗೆ ಹೇಳಿದ್ದಾರೆ—"Two eminent Scientists, Dr. Robert Wallace and Dr. Herbert Beuson, attached to Harword Medical School, after series of researches have found that constant repetition of Mantra with slight-

Meditation produces a sort of wakeful rest which does immense good to ones nerves, heart and lungs."

ಜಪ ಧ್ಯಾನಗಳಲ್ಲಿ ನಿರತರಾದವರು ಕ್ರಮಕ್ರಮವಾಗಿ ಹೊಗೆಸೊಪ್ಪು, ಮದ್ಯ ಸೇವನೆ, ಚರಸ್, ಹೆರೋಯಿನ್ ಇತ್ಯಾದಿ ದುಶ್ಚಟಗಳಿಂದ ಮುಕ್ತರಾಗುತ್ತಾರೆ; ಜೂಜು, ಜುಗಾರಿಗಳು ಬಿಟ್ಟುಹೋಗುತ್ತವೆ; ರಕ್ತದ ಒತ್ತಡ ಸಮಸ್ಥಿತಿಯಲ್ಲಿರುತ್ತದೆ. ಇದರಿಂದ ರಕ್ತದಲ್ಲಿ ಹೆಚ್ಚಿರುವ ಮೇದಸ್ಸಿನ ಕಣಗಳು (plasmacortisol) ಇಳಿಮುಖವಾಗುತ್ತವೆ. ಹಾಗೂ ಲವಣಾಂಶವು ಕಡಿಮೆಯಾಗುತ್ತದೆ. ಹೃದಯದ ಬಡಿತ ಸುಮುಖವಾಗುತ್ತದೆ ಎಂಬುದೂ ಸಹ ವೈಜ್ಞಾನಿಕ ಪ್ರಯೋಗಗಳಿಂದ ದೃಢಪಟ್ಟಿದೆ.

ದಿನಾಂಕ 17–7–1997 ರ ಭವಾನ್ಸ್ ಜರ್ನಲ್‌ನಲ್ಲಿ ಡಾ॥ ಎಮ್. ಪಿ. ಪೈರವರು ಈ ಕೆಳಗಿನ ವಿಷಯಗಳನ್ನು ಹೇಳಿದ್ದಾರೆ:

"Dr. Udupa of Banaras Hindu University conducted studies on 'DHYANA.' A group of Indian and European students practiced 'VIPASANA DHYANA' for ten days. There was significant reduction of plosma cortisol. The meditators enjoyed calm collectedness' They were active and creative than others."

"Dr. B. Rama Murthy has shown that 'DHYANA' state of yoga can be mechanically transfered to patients suffering from EPILEPSY, mentaldepression and other types of mental deseases."

ಮೂರ್ಛೆ ಮತ್ತು ಮನೋವಿಕಾರಗಳಿಂದ ಬಳಲುವ ರೋಗಿಗಳಿಗೆ ಯೋಗಿಯು ಧ್ಯಾನದಲ್ಲಿದ್ದಾಗ ಆತನ ಮೆದುಳಿನಿಂದ ಹೊರಡುವ ತರಂಗಗಳನ್ನು ಎಲೆಕ್ಟ್ರಾನಿಕ್ ಉಪಕರಣಗಳ ನೆರವಿನಿಂದ ರೋಗಿಯ ಮೆದುಳಿಗೆ ವರ್ಗಾವಣೆ ಮಾಡಿದರೆ ಯೋಗಿಯ ಆಲ್ಫಾ ತರಂಗಗಳು ರೋಗಿಯ ಮೆದುಳನ್ನು ವ್ಯಾಪಿಸಿ ಅವನು ಶಾಂತನೂ ಸಮಾಧಾನಿಯೂ, ಉತ್ತಮನೂ ಆಗುವಂತೆ ಮಾಡುತ್ತವೆ ಹಾಗೂ ಅವನ ಕಾಯಿಲೆಗಳನ್ನೂ ಗುಣಪಡಿಸಬಹುದೆಂದು ನರರೋಗ ತಜ್ಞರು ಸಾಕ್ಷಾಧಾರ ಸಹಿತ ಸಾದರಪಡಿಸಿರುತ್ತಾರೆ.

ಅಸಿಲ ಸ್ಥಿತಿಗಿಂತಲೂ ಸೂಕ್ಷ್ಮವಾದ ಹಾಗೂ ಹಗುರವಾದ ನಾಲ್ಕು

ಅತಿವಾಯುಗಳ ಸ್ಥಿತಿಯಲ್ಲಿರುವ ವಸ್ತುಗಳಿಂದ ನಮ್ಮ ಪ್ರಾಣಮಯ ಕೋಶವು ರಚಿತವಾಗಿದೆ. ಆದರೆ ಇದು ಸ್ಥೂಲ ದೇಹದ ಇಂದ್ರಿಯಗಳಿಗೆ ಗೋಚರವಾಗುವುದಿಲ್ಲ. ಕೀರ್ಲಿಯಾನ್ ಫೋಟೋಗಳಲ್ಲಿ ಶಕ್ತಿವಲಯವಾಗಿ ಕಾಣಿಸಿಕೊಳ್ಳುವುದು ಈ ಪ್ರಾಣಮಯಕೋಶದ ಒಂದು ಭಾಗ ಮಾತ್ರ. ಗುಪ್ತವಿದ್ಯೆಯ ಪ್ರಕಾರ ಈ ಕೋಶದಲ್ಲಿ ಏಳು ಚಕ್ರಗಳಿವೆ.

ಮಾನವನ ಸ್ಥೂಲ ಶರೀರದ ಸುತ್ತಲೂ ಸ್ಪಂಧಿಸುತ್ತಿರುವ ಒಂದು ಶಕ್ತಿ ವಲಯ (energy field) ಇದೆ ಎಂಬುದನ್ನು ಕೀರ್ಲಿಯಾನ್ ಫೋಟೋಗ್ರಫಿ ತೋರಿಸುತ್ತದೆ. ಈ ಶಕ್ತಿವಲಯ ಜೀವಂತ ವಸ್ತುಗಳೆಲ್ಲದರಲ್ಲಿಯೂ ಕಂಡುಬರುತ್ತದೆ. ಹೀಗಾಗಿ ಈ ಪ್ರಪಂಚವೆಲ್ಲವೂ ಸ್ಪಂದನಮಯವಾಗಿದೆ. ನಮ್ಮ ಜೀವನಾಧಾರಕ್ಕೆ ಅಗತ್ಯವಾದ ಪ್ರಾಣಶಕ್ತಿಯೂ ಸೂರ್ಯನಿಂದಲೇ ಲಭಿಸುತ್ತದೆ.

ಅನ್ನಮಯಕೋಶವೆನಿಸಿದ ನಮ್ಮ ಸ್ಥೂಲದೇಹದ ಆರೋಗ್ಯವು ಪ್ರಾಣಮಯ ಕೋಶವನ್ನು ಅವಲಂಬಿಸಿದೆ. ಈ ಪ್ರಾಣಮಯಕೋಶವು ಸೂರ್ಯನಿಂದ ಬರುವ ಪ್ರಾಣಶಕ್ತಿಯನ್ನು (vitality) ಹೀರಿಕೊಂಡು ತನ್ನ ಇತರ ಚಕ್ರಗಳ ಮೂಲಕ ವಿಭಾಗಿಸಿ ಅದನ್ನು ಅಲ್ಲಿರುವ ನಾಡಿಗಳಿಗೆ ನೀಡುತ್ತದೆ. ಯಾವುದಾದರೊಂದು ಚಕ್ರವು ಸರಿಯಾಗಿ ಕೆಲಸ ಮಾಡದಿದ್ದರೆ ಅಥವಾ ನಾಡಿಯಲ್ಲಿ ಪ್ರಾಣಶಕ್ತಿಯು ಸಂಚರಿಸಲು ಅಡ್ಡಿಯಾದರೆ ಸ್ಥೂಲದೇಹದ ಭಾಗಕ್ಕೆ ಮತ್ತು ಅದಕ್ಕೆ ಸಂಬಂಧಿಸಿದ ಇತರ ಇಂದ್ರಿಯಗಳಿಗೆ ರೋಗ ಬರುತ್ತದೆ. ದೇಹಕ್ಕೂ ಪ್ರಾಣಮಯಕೋಶಕ್ಕೂ ಇರುವ ಸಂಬಂಧವು ತಪ್ಪಿದರೆ ಸ್ಥೂಲದೇಹಕ್ಕೆ ಸಾವು ಸಂಭವಿಸುತ್ತದೆ.

ಪ್ರತಿಯೊಂದು ಅಕ್ಷರವೂ ತನ್ನದೇ ಆದ ವಿಶಿಷ್ಟಶಕ್ತಿ ಅಥವಾ ಸಾಮರ್ಥ್ಯವನ್ನು ಅಂತರ್ಗತವಾಗಿ ಪಡೆದಿದೆ. ಈ ಅಕ್ಷರಗಳನ್ನು ಪ್ರತಿನಿಧಿಸುವ ಶಬ್ದಗಳು ಸೌರಬ್ರಹ್ಮಾಂಡದ ಎಲ್ಲಾ ಲೋಕಗಳಲ್ಲಿಯೂ ಪರಿಣಾಮಕಾರಿಯಾಗಿ ಕೆಲಸ ಮಾಡಬಲ್ಲವು. ಈ ತತ್ತ್ವದ ಆಧಾರದ ಮೇಲೆ ಶಬ್ದಗಳ ಮತ್ತು ಅವುಗಳ ಸಂಯೋಜನೆಗಳ ಪರಿಣಾಮವನ್ನು ತಿಳಿದು, ಅಕ್ಷರಗಳನ್ನು ಕೆಲವು ವಿಶಿಷ್ಟ ವಿಧಾನಗಳಲ್ಲಿ ಜೋಡಿಸಿ, ಅವುಗಳ ಕರಾರುವಾಕ್ಕಾದ ಉಚ್ಚಾರಣೆಗೆ ಬೇಕಾದ ಸೂಚನೆಗಳನ್ನೂ ಸೇರಿಸಿ, ಯೋಗಿಗಳು ಮತ್ತು ಜೀವನ್ಮುಕ್ತರು ಮಂತ್ರಗಳನ್ನು ರಚಿಸಿರುವರು. ಈ ಮಂತ್ರಗಳನ್ನು ಬಾಯಿಯಿಂದ ಅಥವಾ ಮನಸ್ಸಿನಲ್ಲಿ ಉಚ್ಚರಿಸಿದಾಗ ಬೇರೆಬೇರೆ ಲೋಕಗಳಲ್ಲಿ ಸ್ಪಂದನಗಳು ಉತ್ಪತ್ತಿ

ಯಾಗುತ್ತವೆ. ಈ ಸ್ಪಂದನಗಳು ಸಾಧಕನ ಶರೀರಗಳ ಅಥವಾ ಕೋಶಗಳ ಮೇಲೆ ಪ್ರಭಾವ ಬೀರುತ್ತವೆ. ಇದರ ಪರಿಣಾಮವಾಗಿ ಸಾಧಕನಿಗೆ ತನ್ನ ಪ್ರಜ್ಞೆಯ ಆಳವಾದ ಪದರಗಳನ್ನು ತಲುಪಲು ಸಾಧ್ಯವಾಗುತ್ತದೆ. ಈ ಸ್ಪಂದನಗಳು ವಿವಿಧ ಕೋಶಗಳ ಪ್ರಕೃತಿಯನ್ನು ಬೇರೆಬೇರೆ ರೀತಿಯಲ್ಲಿ ಜೋಡಿಸುತ್ತವೆ. ಅಲ್ಲದೆ ಆ ಕೋಶಗಳು ಪರಸ್ಪರ ಸಮರಸವಾಗಿರುವಂತೆ ಮಾಡುತ್ತವೆ; ಅವನ ಆಧ್ಯಾತ್ಮಿಕ ಪ್ರಜ್ಞೆಯು ಸೂಕ್ಷ್ಮ ಪದರಗಳಿಗೆ ಹೆಚ್ಚು ತೀವ್ರವಾಗಿ ಓಗೊಡುವಂತೆ ಮಾಡುತ್ತವೆ.

ಮಂತ್ರವನ್ನು ಗಟ್ಟಿಯಾಗಿ ಉಚ್ಚರಿಸಿದಾಗ ಅದರ ಭೌತಿಕ ಶಬ್ದಗಳು ನಮ್ಮ ಸ್ಥೂಲಕೋಶದ ಮೇಲೆ ಪರಿಣಾಮ ಬೀರುತ್ತವೆ. ಮೌನವಾಗಿ ಉಚ್ಚರಿಸಿದಾಗ ನಮ್ಮ ಪ್ರಾಣಮಯಕೋಶದ ಮೇಲೆ ಪರಿಣಾಮ ಬೀರುತ್ತವೆ. ಅರ್ಥದ ಮೇಲೆ ಗಮನವಿಟ್ಟು ಮಂತ್ರವನ್ನು ಮಾನಸಿಕವಾಗಿ ಉಚ್ಚರಿಸಿದಾಗ ಸಹಜವಾಗಿಯೇ ಅದು ಮನಸ್ಸಿನ ಮೇಲೆ ಪರಿಣಾಮವನ್ನುಂಟು ಮಾಡುತ್ತದೆ. ಮಂತ್ರದ ಪದಗಳು ತಾತ್ಪರ್ಯ(ಅರ್ಥದ, ತತ್ತ್ವದ)ದ ಹಿನ್ನೆಲೆಯಲ್ಲಿರುತ್ತವೆ. ಸಾಧಕನು ಮಾನಸಿಕ ಲೋಕದಲ್ಲಿ ನೆಲೆಸಿರುವ ಮಂತ್ರದ ತಾತ್ಪರ್ಯಭಾವವನ್ನು ದಾಟಿ, ಮನಸ್ಸಿನ ಕ್ಷೇತ್ರದಿಂದ ಆಚೆ ಇರುವ ಮಂತ್ರದ ಹಿಂದಿರುವ ಸತ್ಯದೊಡನೆ ಸಂಪರ್ಕ ಪಡೆಯಬೇಕು. ಅಲ್ಲಿಗೆ ಅವನು ಯೋಗದ ಕ್ಷೇತ್ರವನ್ನು ಪ್ರವೇಶಿಸುತ್ತಾನೆ. ಇದನ್ನೇ 'ಮಂತ್ರಸಿದ್ಧಿ' ಎಂದು ಕರೆದಿದ್ದಾರೆ.

ಎಲ್ಲಿ ಚಲನೆಯಿದೆಯೋ ಅಥವಾ ಸ್ಪಂದನಗಳವೆಯೋ ಅಲ್ಲಿ ಶಬ್ದ ಉತ್ಪತ್ತಿಯಾಗುತ್ತದೆ. ಇದು ವೈಜ್ಞಾನಿಕ ಸಿದ್ಧಾಂತ. ಭೂಮಿ ಮತ್ತು ಇತರ ಗ್ರಹಗಳು ಸೂರ್ಯನ ಸುತ್ತ ತಿರುಗುವಾಗ ಶಬ್ದ ಉಂಟಾಗುತ್ತದೆ. ಇದನ್ನು 'ಗೋಳಗಳ ಗಾನ' (Music of the spheres) ಎನ್ನುತ್ತಾರೆ. ಇದು ನಮಗೆ ಕೇಳಿಸುವುದಿಲ್ಲ, ಆದರೆ ಯೋಗಿಗಳಿಗೆ ಕೇಳಿಸುತ್ತದೆ. ವಿಶ್ವದ ಸೃಷ್ಟಿಗೆ ನಾದವೇ ಕಾರಣ. ನಾದದಿಂದ (ಶಬ್ದದಿಂದ) ಸ್ಪಂದನಗಳು ಉಂಟಾಗುತ್ತವೆ. ಯೋಚನೆಗಳು ಮನೋಮಯ ಕೋಶದಲ್ಲಿ ಸ್ಪಂದನಗಳನ್ನು ಉತ್ಪತ್ತಿ ಮಾಡುತ್ತವೆ. ಇದು 'ಟೆಲಿಪತಿ' ಅಥವಾ 'ದೂರ ಮನಸ್ಪರ್ಶನ'ದ ವಿಷಯವಾಗಿ ಅತೀಂದ್ರಿಯ ಶಕ್ತಿಗಳ ಸಂಶೋಧನಾ ಸಂಸ್ಥೆಗಳು ನಡೆಸಿರುವ ವೈಜ್ಞಾನಿಕ ಸಂಶೋಧನೆಯಿಂದ ಕಂಡುಬಂದಿದೆ. ಈ ಸ್ಪಂದನಗಳಿಂದ ರೂಪವು (Form) ಮತ್ತು ಶಬ್ದವೂ ಉಂಟಾಗುತ್ತವೆ. ಆದರೆ ಆ ಸೂಕ್ಷ್ಮ

ಶಬ್ದಗಳು ನಮ್ಮ ಸ್ಥೂಲ ಕಿವಿಗೆ ಕೇಳಿಸುವುದಿಲ್ಲ. ತಂಬೂರಿಯ ಒಂದು ತಂತಿಯನ್ನು ಮೀಟಿದಾಗ, ಅದೇ ಸ್ವರದ ಇನ್ನೊಂದು ತಂತಿ ತಾನಾಗಿ ಮಿಡಿದು ಶಬ್ದವನ್ನು ಕೊಡುತ್ತದೆ. 'ಇದನ್ನು 'ಅನುರಣನ' (Response) ಎನ್ನುತ್ತಾರೆ. ಶಬ್ದಶಾಸ್ತ್ರದಲ್ಲಿ ಇದೊಂದು ಮುಖ್ಯ ತತ್ತ್ವ. ಸ್ಪಂದನವನ್ನು ಬದಲಾಯಿಸಿದಾಗ ರೂಪವೂ ಬದಲಾಗುತ್ತದೆ. ಇದೇ ರೀತಿಯಾಗಿ ನಮ್ಮ ಒಂದು ಯೋಚನೆ ಒಂದು ವಿಶಿಷ್ಟ ತರಂಗ ವೇಗದ ಸ್ಪಂದನಗಳನ್ನು ಮನೋಮಯಕೋಶದ ಪ್ರಕೃತಿಯಲ್ಲಿ ಉತ್ಪತ್ತಿ ಮಾಡಿದಾಗ, ಅದೇ ಸ್ಪಂದನದ ವೇಗಕ್ಕೆ (ಅಥವಾ ಶಬ್ದಕ್ಕೆ) ಓಗೊಡುವ ಪ್ರಕೃತಿ ಮತ್ತೊಬ್ಬರಲ್ಲಿದ್ದರೆ, ಅವರನ್ನು ಈ ಸ್ಪಂದನಗಳು ತಾಕಿದಾಗ, ನಮ್ಮ ಯೋಚನೆಯೇ (ಅಥವಾ ಅದೇ ವರ್ಗದ ಯೋಚನೆ) ಅವರಲ್ಲಿಯೂ ಅನುರಣನದಿಂದ ಉತ್ಪತ್ತಿಯಾಗುತ್ತದೆ. ಸತ್ಪುರುಷರ ಸಹವಾಸದಲ್ಲಿರುವ ವ್ಯಕ್ತಿ ಸಜ್ಜನನಾಗುವುದೂ ಸಹ ಅವರ ಈ ಸ್ಪಂದನಗಳ ತಾಡನದಿಂದಲೇ. ಶ್ರೀಗಾಯತ್ರೀ ಮಂತ್ರದ ಸರಿಯಾದ ಉಚ್ಚಾರಣೆಯಿಂದ, ಸ್ಥೂಲದೇಹ, ಪ್ರಾಣಮಯಕೋಶ, ಮನೋಮಯಕೋಶಾದಿ ಉಳಿದ ಉನ್ನತ ಕೋಶಗಳಲ್ಲಿ ಉನ್ನತ ಮಟ್ಟದ ಸ್ಪಂದನಗಳು (ಇಲ್ಲಿ ನೀಚ ಪ್ರಕೃತಿಯೇ ಇಲ್ಲ) ಉತ್ಪನ್ನವಾಗುತ್ತವೆ. ಈ ಸ್ಪಂದನಗಳು ನಮ್ಮಲ್ಲಿ ಉತ್ತಮ ಗುಣಗಳನ್ನು ಉತ್ಪತ್ತಿ ಮಾಡುತ್ತವೆ. ಹಾಗೂ ನಮ್ಮ ಸುತ್ತಲೂ ಉತ್ತಮ ಸ್ಪಂದನಗಳು ಹರಡುತ್ತವೆ.

ಧ್ಯಾನ ಮಾಡುವಾಗ ಮನಸ್ಸು ಆರಾಮವಾಗಿರಬೇಕು. ಹಾಗಿದ್ದರೆ, ಸ್ಥೂಲದೇಹದ ಮೆದುಳು 'ಆಲ್ಫ' ಅಲೆಗಳನ್ನು ಉತ್ಪತ್ತಿ ಮಾಡುವುದು. (ಇದನ್ನು EEG ಯಂತ್ರದಲ್ಲಿ ಗುರುತಿಸಿ ನೋಡಬಹುದು.) ಆಗ ಸ್ಥೂಲದೇಹದ ಉಸಿರಾಟ ನಿಧಾನವಾಗುತ್ತದೆ, ಅಧಿಕ ರಕ್ತದ ಒತ್ತಡ ಇದ್ದರೆ ಅದು ಕಡಿಮೆಯಾಗುತ್ತದೆ. ಓಂಕಾರ ಮತ್ತು ಸೂಕ್ತಮಂತ್ರಗಳನ್ನು ಜಪ ಅಥವಾ ಧ್ಯಾನ ಮಾಡುವುದರಿಂದ ಸಾಧಕನ ಎಡ-ಬಲ ಮೆದುಳುಗಳ ನಡುವೆ ಸಾಮರಸ್ಯವೇರ್ಪಡುತ್ತದೆ. (ಇದನ್ನೂ ಪ್ರಯೋಗದ ಮೂಲಕ ಕಂಡುಹಿಡಿದಿದ್ದಾರೆ) ಶ್ರೀಗಾಯತ್ರೀ ಮಂತ್ರದ ಜಪದಿಂದ ಮನಸ್ಸಿನಲ್ಲಿ ಉತ್ತಮ ಶಕ್ತಿ (Intelligence) ಮತ್ತು ಬುದ್ಧಿಶಕ್ತಿ (Intuition) ಬೆಳೆಯುತ್ತವೆ. ಕೊನೆಗೆ ಈಶ್ವರನ ಪ್ರಜ್ಞೆಯೊಡನೆ ತನ್ನ ಪ್ರಜ್ಞೆಯನ್ನು ಒಂದುಗೂಡಿಸಲು ಸಾಧನವಾಗುತ್ತದೆ. 'ಪ್ರಜ್ಞೆ' ಎಂದರೆ ಅಭೇದ್ಯವಾದ, ಸ್ಥಿರವಾದ ನಿರ್ಗುಣ ಸತ್ಯ. ಈ ಉನ್ನತಮಟ್ಟದ ಪ್ರಜ್ಞೆಗೆ ಈ ಮೂರು ಅಂಶಗಳು ಅಗತ್ಯ—

(೧) ಕೋಶಗಳಲ್ಲಿ ಸಾತ್ತ್ವಿಕ ವಸ್ತುವು ಅಧಿಕವಾಗಿರಬೇಕು, (೨) ರಸಭಾವ ಮತ್ತು ಆಕಾಂಕ್ಷೆ ತುಂಬಿ ಆತ್ಮಾರ್ಪಣೆ ತೀವ್ರ ಮಟ್ಟಕ್ಕೆ ಮುಟ್ಟಬೇಕು, (೩) ವಿವಿಧ ಕೋಶಗಳು ಪರಸ್ಪರ ಸಾಮರಸ್ಯದಿಂದ ಕೆಲಸ ಮಾಡಬೇಕು. ಇವು ಫಲಿಸಬೇಕಾದರೆ ಸಾಧಕನು ಶೀಲವನ್ನು ಬೆಳೆಸಿಕೊಳ್ಳಬೇಕು, ಪರಿಶುದ್ಧತೆ ಇರಬೇಕು. (ಸದ್ಗುಣವೃತ್ತನೇರ್ಪಡುವ Virtuous circle), ಹಾಗೂ ಪರಿಪೂರ್ಣ ಶ್ರದ್ಧೆ ಬೇಕು. (ಪರಿಶುದ್ಧತೆ ಎಂದರೆ—ಕೋಶಗಳನ್ನು ಸೂಕ್ಷ್ಮಗೊಳಿಸುವುದು, ಸಮರಸಗೊಳಿಸುವುದು ಮತ್ತು ಅವುಗಳ ಮೂಲಕ ಆಧ್ಯಾತ್ಮಿಕ ಶಕ್ತಿಯು ಹರಿಯುವಂತೆ ಮಾಡುವುದು.)

ಒಂದೊಂದು ಸಜೀವರೂಪದ ಹಿಂದೆಯೂ ಒಂದು ವಿಶಿಷ್ಟ ಸ್ಪಂದನವಿದೆ. ಇದನ್ನು ಭಾರತ ಮತ್ತು ಯೂರೋಪುಗಳಲ್ಲಿ ಮಾಡಿರುವ ಅನೇಕ ಪ್ರಯೋಗ ಗಳಿಂದ ಕಂಡುಹಿಡಿದಿದ್ದಾರೆ. ಹಾಗೆಯೇ ಪ್ರಜ್ಞೆಗೂ ಸ್ಪಂದನವೇ ಆಧಾರ. ಈ ಬಾಹ್ಯಪ್ರಪಂಚದ ಅರಿವು ನಮಗೆ ವಿವಿಧ ಸ್ಪಂದನಗಳ ಮೂಲಕ ಉಂಟಾಗುತ್ತದೆ ಎಂಬುದು ವಿಜ್ಞಾನದ ಸಿದ್ಧಾಂತ. ಈ ಸ್ಪಂದನಗಳನ್ನು ಸಂಪೂರ್ಣವಾಗಿ ತಡೆದುಬಿಟ್ಟರೆ, ಪ್ರಜ್ಞೆಯು ಈ ಸ್ಥೂಲದೇಹವನ್ನು ಬಿಟ್ಟು ಮುಂದಿನ ಸೂಕ್ಷ್ಮಶರೀರಕ್ಕೆ ಹಿಂದಿರುಗುತ್ತದೆ ಈ ಸ್ಥಿತಿ ಸಮಾಧಿ ಕಾಲ ದಲ್ಲಿಯೂ ಔಷಧಿಯಿಂದ ಜ್ಞಾನ ತಪ್ಪಿಸಿದಾಗಲೂ ಸಂಭವಿಸುತ್ತದೆ. ಇದರಿಂದ ಸಿದ್ಧವಾಗುವುದೇನೆಂದರೆ ಸ್ಪಂದನ, ರೂಪ ಮತ್ತು ಪ್ರಜ್ಞೆಗಳು ಪರಸ್ಪರ ಅತಿ ನಿಕಟವಾದ ಸಂಬಂಧವನ್ನು ಹೊಂದಿವೆ. ಹಾಗೂ ಅವು ಎಲ್ಲಾ ಬಗೆ ಯಲ್ಲಿಯೂ ಪರಸ್ಪರ ಪ್ರಭಾವ ಬೀರಬಲ್ಲವು. ಈ ಮೂರನ್ನೂ ಸಾಧಾರಣ ವಾಗಿ ಬೇರ್ಪಡಿಸಲು ಸಾಧ್ಯವಿಲ್ಲ. ಅವುಗಳ ಪರಸ್ಪರ ವರ್ತನೆಯಿಂದ ಈ ಸಮಸ್ತ ವ್ಯಕ್ತವಿಶ್ವವೂ ಸೃಷ್ಟಿಯಾಗಿದೆ.

ಪರಮಾತ್ಮನ ಅರಿವು ನಮಗೆ ಪ್ರತ್ಯಕ್ಷವಾಗಿಲ್ಲದಿದ್ದರೂ, ಅವನನ್ನು ಕುರಿತು ಚಿಂತಿಸುವುದರಿಂದಲೇ ನಮಗೂ, ಅವನಿಗೂ ಕೂಡಲೇ ತಾತ್ಕಾಲಿಕ ವಾಗಿ ಒಂದು ಸಂಬಂಧ ಏರ್ಪಡುತ್ತದೆ. ಈ ಗೂಢ ಸಂಬಂಧದ ಗಾಢತೆಗನು ಗುಣವಾಗಿ ಶಕ್ತಿ ಮನಸ್ಸಿನೊಳಕ್ಕೆ ಪ್ರವಹಿಸುತ್ತದೆ. ಈ ಸಂಪರ್ಕದ ಫಲ ವಾಗಿ ಈ ಶಕ್ತಿಯು ಮನಸ್ಸಿನ ಮೇಲೆ ಪ್ರಭಾವ ಬೀರುತ್ತದೆ. ಹೀಗಾಗಿ ನಾವು ಅವನಿಂದ ಶಕ್ತಿ ಮತ್ತು ಸ್ಫೂರ್ತಿಗಳನ್ನು ಪಡೆಯುತ್ತೇವೆ ; ಅವನ ಸಮೀಪಕ್ಕೆ ಸರಿಯುತ್ತೇವೆ.

ಯಾವ ಕೆಲಸವನ್ನಾದರೂ ಕ್ರಮವರಿತು, ನಿಯಮಿತವಾಗಿ ಮಾಡುತ್ತಾ

ಬಂದರೆ ಅದು ಅಭ್ಯಾಸವಾಗುವುದು ; ಅದನ್ನು ಬಿಡಲಾಗುವುದಿಲ್ಲ. ನಮ್ಮ ಶ್ರದ್ಧೆಯನ್ನನುಸರಿಸಿ ಒಳಿತು, ಕೆಡಕುಗಳ ವಿಷಯದಲ್ಲಿ ನಾವು ಒಂದು ನಿಶ್ಚಿತ ಅಭಿಪ್ರಾಯವನ್ನು ಮಾಡಿಕೊಳ್ಳುತ್ತೇವೆ. ಈಭಾವನೆಯನ್ನನುಸರಿಸಿ ನಮ್ಮ ವರ್ತನೆ ಅಭಿವ್ಯಕ್ತವಾಗುತ್ತದೆ. ಇದು ಅಂತರಿಕ, ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಜೀವನದಲ್ಲಿ ಪ್ರಕಟವಾಗುತ್ತದೆ. ದಿನನಿತ್ಯವೂ ಮಾಡುವ ಕ್ರಮಬದ್ಧ ಜಪ(ಪ್ರಾರ್ಥನೆ)ದಿಂದ ದೇಹದ ಸರ್ವತೋಮುಖದ ಏಳಿಗೆ ಸುಲಭಸಾಧ್ಯವಾಗಿ, ಅಂತರಿಕ ಶಕ್ತಿ, ಚೈತನ್ಯ ಹಾಗೂ ಸ್ಥಿರತೆ ಹೆಚ್ಚುತ್ತದೆ. ಸದ್ಭಾವನೆಯಿಂದ ಆರೋಗ್ಯ ವೃದ್ಧಿಯಾಗುತ್ತದೆ. ಮಾನಸಿಕ ಪಾವಿತ್ರ್ಯಕ್ಕೆ ಯೋಗಶಾಸ್ತ್ರ ವಿಶೇಷ ಪ್ರಾತಿನಿಧ್ಯ ನೀಡಿದೆ.

ನಮ್ಮ ಹೃದಯಾಂತರಾಳದಲ್ಲಿ ದೈವತ್ವವನ್ನು ಜಾಗ್ರತಗೊಳಿಸುವುದೇ ಜಪ(ಪ್ರಾರ್ಥನೆ)ದ ಉದ್ದೇಶ ದೂರವಾಣಿಯ ಮೂಲಕ ನಮ್ಮ ತಂದೆ ತಾಯಿಗಳಿಗೆ ವಿಚಾರವನ್ನು ತ್ವರಿತವಾಗಿ ತಿಳಿಸುವಂತೆ ದೇವರಲ್ಲಿ ಜಪ (ಪ್ರಾರ್ಥನೆ) ಮಾಡಿ ನಮ್ಮ ಅಂತರಂಗವನ್ನು ಬಯಲು ಮಾಡುತ್ತೇವೆ. ಇದೇ ದೇವರೊಡನೆ ನಮ್ಮ ಪವಿತ್ರ ಸಂಭಾಷಣೆ.

ದೈವದ ಹಾಗೂ ಆತ್ಮದ ಮಹಿಮೆಯನ್ನು ಅರಿತರೆ ದುರ್ಬಲನಿಗೂ ಧೈರ್ಯ, ಸ್ಥೈರ್ಯ ಮೂಡುತ್ತದೆ ; ದುಷ್ಟನಿಗೂ ಉಜ್ವಲ ಭವಿಷ್ಯದ ರೂಪುರೇಖೆಗಳು ಕಂಡುಬರುತ್ತವೆ. ಭಗವಂತನು ಎಲ್ಲವನ್ನೂ ನೋಡುತ್ತಾನೆ ಎಂದು ಮನಸ್ಸಿಗೆ ದೃಢವಾದರೆ ನಾವು ಜಾಗರೂಕರಾಗಿರುತ್ತೇವೆ. ಅವನು ನಮ್ಮ ಸಹಾಯಕ್ಕಿದ್ದಾನೆ ಎಂಬ ವಿಶ್ವಾಸ ಉಂಟಾದರೆ ಹೃತ್ಪೂರ್ವಕವಾಗಿ ಸಾಧನೆ ಮಾಡುತ್ತೇವೆ. ಆತನು ಸರ್ವಶಕ್ತ, ದಯಾಮಯ ಎಂಬ ನಂಬಿಕೆ ಉಂಟಾದರೆ ನಾವು ಎಲ್ಲಾ ಚಿಂತೆ ಭೀತಿಗಳಿಂದ ದೂರವಾಗಿರುತ್ತೇವೆ. ಅವನ ಕೃಪೆ, ದಯೆಯಿಂದ ಎಲ್ಲವೂ ಸಾಧ್ಯ ಎಂದು ಮನಸ್ಸಿಗೆ ಬಂದರೆ ಅದನ್ನು ಪಡೆಯಲು ಪ್ರಯತ್ನಿಸುತ್ತೇವೆ.

ಮನಸ್ಸು ರೋಗವನ್ನು ಸೃಷ್ಟಿಸಬಲ್ಲದು, ಗುಣಪಡಿಸಲೂಬಲ್ಲುದು. ಮನಸ್ಸೇ ದೇಹವನ್ನು ತನ್ನ ಉದ್ದೇಶ ಸಾಧನೆಗಾಗಿ ಬಳಸಿಕೊಳ್ಳುತ್ತದೆ. ಮನಸ್ಸಿನಲ್ಲಿ ಉದಯಿಸುವ ಯೋಚನೆ ಎಂಬ ದ್ರವ್ಯದಿಂದ ವಿಷವನ್ನೂ ತಯಾರಿಸಬಹುದು; ಅಮೃತವನ್ನೂ ತಯಾರಿಸಬಹುದು.

ಸೌರ ಬ್ರಹ್ಮಾಂಡದೊಳಗೆ ಜೀವಿಸಲು ಅಗತ್ಯವಾದ ಎಲ್ಲಾ ವಿಧವಾದ ಶಕ್ತಿಗಳಿಗೂ ಪ್ರತ್ಯಕ್ಷವಾಗಿಯಾಗಲೀ ಅಥವಾ ಪರೋಕ್ಷವಾಗಿಯಾಗಲೀ,

ಸೂರ್ಯನೇ ಮೂಲನೆಂಬುದು ವಿಜ್ಞಾನದ ಸಿದ್ಧಾಂತ. ಜೀವನದ ಎಲ್ಲಾ ಮುಖಗಳಿಗೂ ಅವನೇ ಕೇಂದ್ರ. ನಾವು ಅಕ್ಷರಶಃ ಅವನಲ್ಲಿ ಜೀವಿಸುತ್ತೇವೆ, ಚಲಿಸುತ್ತೇವೆ ಮತ್ತು ನಮ್ಮ ಅಸ್ತಿತ್ವವನ್ನು ಹೊಂದಿದ್ದೇವೆ.

ಹಾಲಿನಲ್ಲಿ ಕರಗಿದ ಸಕ್ಕರೆ ಕಣ್ಣಿಗೆ ಕಾಣದು. ಆದರೆ ರುಚಿ ನೋಡಿದಾಗ ಸಕ್ಕರೆಯ ಸಿಹಿ ಅನುಭವವಾಗುತ್ತದೆ. ಆ ರುಚಿಯನ್ನು ಅನುಭವಿಸಿಯೇ ತಿಳಿಯಬೇಕು. ನೀರಿನ ಕೊಳವೆಯಲ್ಲಿ ನೀರು ಸದಾ ಹರಿಯುತ್ತಿದ್ದರೂ ಮನೆಯಲ್ಲಿರುವವರು ನಲ್ಲಿಯನ್ನು ತಿರುಗಿಸಿ, ನಲ್ಲಿಯ ಕೆಳಗೆ ಪಾತ್ರೆಯನ್ನಿಟ್ಟಾಗ ಮಾತ್ರಾ ನೀರು ತುಂಬುವುದು. ಹಾಗೆಯೇ ನಮ್ಮ ಸನಾತನ ಆಚರಣೆಗಳು. ಜಪ(ಪ್ರಾರ್ಥನೆ) ಕೇವಲ ಕೆಲವು ಶಬ್ದಗಳನ್ನು ಮಾತ್ರಾ ಉಚ್ಚರಿಸುವುದಲ್ಲ. ಅದು ತ್ರಿಕರಣಪೂರ್ವಕವಾದ ಅಭೀಪ್ಸೆ, ಶ್ರದ್ಧೆ ಮತ್ತು ಭಕ್ತಿಗಳಿಂದ ಮಾಡುವ ದೀರ್ಘಕಾಲದ ಸ್ಮರಣೆಯ ಫಲಿತಾಂಶ ಭೂಮ್ಯಾಕರ್ಷಣಶಕ್ತಿ ಎಷ್ಟು ಸತ್ಯವೋ, ಜಪ(ಪ್ರಾರ್ಥನೆ)ದಿಂದ ಬರುವ ಬಲ-ಸಂವರ್ಧನೆ ಅಷ್ಟೇ ಸತ್ಯ. 'ನಾನು'ವಿನ ನಾಶಕ್ಕೆ ಪ್ರಾರ್ಥನೆಯೇ ಪ್ರಬಲ ಅಸ್ತ್ರ. 'ನನ್ನನ್ನಳಿಸು, ಬಂದು ನೆಲಸು ಹೃದಯ ಪದ್ಮದಲ್ಲಿ' ಈ ಕಳಕಳಿಯ ಬೇಡಿಕೆಯು ನಮ್ಮ ಎಷ್ಟೋ ವಿಧದ ದೌರ್ಬಲ್ಯಗಳನ್ನು ದೂರಮಾಡುತ್ತದೆ. ಸಂಶಯರಹಿತವಾದ ಅನುಭೂತಿಯಿಂದ ಸಾಧಕನಲ್ಲಿ ಅಪೂರ್ವ ಸ್ಥೈರ್ಯ, ಸ್ಫೂರ್ತಿ ಹಾಗೂ ಮಾರ್ಗದರ್ಶನ ಲಭಿಸುವುದು. ಪ್ರವಾಹವನ್ನು ದಾಟಲು ಹರಿಗೋಲೆಂದು ಮೊಸಳೆಯ ಬೆನ್ನೇರಿ ಕುಳಿತುಕೊಂಡಂತೆ ಆಗಬಾರದು. ಉರಿಯುವ ದೀಪವನ್ನು ನೋಡಲು ಪ್ರತ್ಯೇಕವಾದ ಬೆಳಕು ಬೇಕಿಲ್ಲ. ಇದೇ ಬುದ್ಧಿಯ ಬೆಳವಣಿಗೆ. ಶ್ರೀಗಾಯತ್ರೀ ಮಂತ್ರದ ಅಂತರಾರ್ಥವೂ ಇದೇ.

ಶ್ರದ್ಧಾರಹಿತ ಪ್ರಾರ್ಥನೆ ಸ್ಟ್ಯಾಂಪ್‌ರಹಿತ ಪತ್ರದಂತೆ ;
ಭಕ್ತಿರಹಿತ ಪ್ರಾರ್ಥನೆ ವಿಳಾಸರಹಿತ ಪತ್ರದಂತೆ,
ಶ್ರದ್ಧಾ ಭಕ್ತಿ ಸಹಿತ ಪ್ರಾರ್ಥನೆ ಟೆಲಿಗ್ರಾಂ ಕೊಟ್ಟಂತೆ !

ಮೇಲಿನ ಎಲ್ಲಾ ವಿಷಯಗಳ ಹಿನ್ನೆಲೆಯಲ್ಲಿ ಶ್ರೀಗಾಯತ್ರೀ ಮಂತ್ರವನ್ನು ವೈಜ್ಞಾನಿಕವಾಗಿ ವಿವರಿಸಲು ಪ್ರಯತ್ನಿಸಿದ್ದೇನೆ.

ಗಾಯತ್ರೀ ಜಪಮಾಡುವುದಕ್ಕೆ ಮೊದಲು ಆಸನ, ಆಚಮನ, ಪ್ರಾಣಾಯಾಮ ಮತ್ತು ಸಂಕಲ್ಪಾದಿಗಳನ್ನು ಮಾಡಬೇಕೆಂಬುದು ನಿಯಮ. ಇದರಿಂದ ಪೂರ್ಣಫಲ ದೊರೆಯುವುದೆಂಬುದು ನಂಬಿಕೆ. ಇವೆಲ್ಲವನ್ನೂ ಸಂಕ್ಷೇಪ

ವಾಗಿ ವೈಜ್ಞಾನಿಕ ದೃಷ್ಟಿಯಿಂದ ವಿವರಿಸಿ ನಂತರ ಗಾಯತ್ರೀ ಮಂತ್ರವನ್ನು ನೈಜ್ಞಾನಿಕ ದೃಷ್ಟಿಯಿಂದ ವಿವರಿಸಲು ಪ್ರಯತ್ನಿಸುತ್ತೇನೆ. ವಿಜ್ಞಾನವೆಂದರೆ ಕಾರಣ ಕಾರ್ಯ ಸಂಬಂಧ ಪರಾಮರ್ಶೆಯಿಂದ ಉತ್ಪನ್ನವಾದ ಜ್ಞಾನ, ವಿಚಾರಸಿದ್ಧವಾದ ಜ್ಞಾನ.

೧ ಆಸನ : ಇದರಲ್ಲಿ ಎರಡು ವಿಧ. ೧. ಪೀಠ ಮತ್ತು ೨. ಶರೀರ ಭಂಗಿ.

**(ಅ) ಆಸನ–ಪೀಠ :** ಇದಕ್ಕೆ ಸಂಬಂಧಪಟ್ಟ ಸ್ವಲ್ಪ ವಿಷಯವನ್ನು ಹಿಂದೆ ವಿವರಿಸಿದೆ. ಇಲ್ಲಿ ವೈಜ್ಞಾನಿಕ ವಿವರಣೆಯನ್ನು ಮಾತ್ರ ವಿವರಿಸ ಲಾಗುವುದು. ದರ್ಭೆ, ಮುಂಜ ಅಥವಾ ನೊದೆಹುಲ್ಲು, ಉಣ್ಣೆ ಇವುಗಳಿಂದ ತಯಾರಿಸಿದ ಚಾಪೆ ಮತ್ತು ಮರದ ಮಣೆ ಇವು ದೇಹಾರೋಗ್ಯದ (ವಾತ ಪಿತ್ತ ಮತ್ತು ಶ್ಲೇಷ್ಮಗಳ ದೋಷ ನಿವಾರಣೆ) ಮೇಲೆ ಉತ್ತಮ ಪರಿಣಾಮ ಬೀರುತ್ತವೆ. ಭೌತಿಕವಾಗಿ ಇಂದ್ರಿಯಗಳಿಗೆ ಬಲವನ್ನು ಕೊಡುವ ಗುಣವನ್ನು ಹೊಂದಿರುತ್ತವೆ. ಬುದ್ಧಿಗೆ (ಸಾತ್ತ್ವಿಕ) ಪೋಷಕವಾಗಿರುತ್ತವೆ. ಸ್ಥೈರ್ಯ ಮತ್ತು ಸೌಖ್ಯಗಳೆರಡಕ್ಕೂ ಪೋಷಕವಾಗಿವೆ. ಜೀರ್ಣಕಾರಿಯೂ ಮತ್ತು ಮಲಶೋಧಕವೂ ಆಗಿವೆ.

ಇವುಗಳ ಉಪಯೋಗ ಹೀಗಿದೆ—ಕೃಷ್ಣಾಜಿನ ಮುಕ್ತಿ, ಪ್ರಕಾಶಕ್ಕೆ ಸಹಕಾರಿ. ಹುಲಿಚರ್ಮ–ಮೋಕ್ಷಸಾಧನ (ಸಂನ್ಯಾಸಿಗಳು ಇದನ್ನು ಹಾಕಿ ಕೊಳ್ಳುವುದು ಹೆಚ್ಚು). ಕುಶಾಸನ–ಜ್ಞಾನ ಪ್ರಕಾಶಕ, ರೋಗ ನಿವಾರಕ, ಆಯುಸ್ಸು ಹಾಗೂ ಬುದ್ಧಿಯು ವೃದ್ಧಿಯಾಗುವುದು. ಕಂಬಳಿ–ಸರ್ವ ಕಾಮಸಿದ್ಧಿ. ಪತ್ರ–ಆರೋಗ್ಯಪ್ರದ. ಕಲ್ಲು, ಇಟ್ಟಿಗೆ–ದುಃಖಕಾರಕ, ವ್ಯಾಧಿ ಕಾರಕಗಳು.

ಮಂತ್ರ ಜಪಿಸುವಾಗ ಮತ್ತು ವೃತ್ತಿಗಳನ್ನು ಏಕಾಗ್ರ ಮಾಡುವಾಗ ಶರೀರದ ಒಳಗೆ ಒಂದು ವಿಧವಾದ ವಿದ್ಯುತ್‌ಶಕ್ತಿಯು ಆವಿರ್ಭೂತವಾಗು ವುದು. ಭೂಮಿಗೆ ತನ್ನ ಸಂಪರ್ಕಕ್ಕೆ ಬಂದ ವಸ್ತುವಿಗೆ ತನ್ನ ಶಕ್ತಿಯನ್ನು ಕೊಡುವುದು ಮತ್ತು ಅದರಿಂದ ಶಕ್ತಿಯನ್ನು ಹೀರುವುದು ಸಹಜ ಗುಣ ವಾಗಿದೆ. ಆದ್ದರಿಂದ ನಮ್ಮ ಶಕ್ತಿಯು ನಷ್ಟದಿಂದ(ಭೂಮಿ ಹೀರುವಿಕೆಯಿಂದ) ಪಾರಾಗಿ ಶಕ್ತಿಸಂಗ್ರಹಕ್ಕೆ ಪೋಷಕವಾದ ಅಳವಡಿಕೆಯನ್ನು ಮಾಡಿ ಕೊಳ್ಳುವುದೇ ಆಸನದ ಗುರಿಯಾಗಿದೆ. ಭೂಮಿಯು ಈ ವಿದ್ಯುತ್ ಶಕ್ತಿ ಯನ್ನು ಆಕರ್ಷಿಸಿ ಸೆಳೆಯದಂತೆ ಹಾಗೂ ಶರೀರ ಮತ್ತು ಮನಸ್ಸಿನ

ಸ್ವಾಸ್ಥ್ಯವು ಕೆಡದಂತೆ ಮಾಡುವುದೇ ಇದರ ಉದ್ದೇಶ.

(ಆ) **ಆಸನ-ಶರೀರಭಂಗಿ** : (Posture) ಅಷ್ಟಾಂಗ ಯೋಗಗಳಲ್ಲಿ ಆಸನವು ಮೂರನೆಯದು. ಆಸನಗಳು ಮೆದುಳಿನ ಕ್ರಿಯಾಶಕ್ತಿಯು ಬೆನ್ನೆಲುಬುಗಳ ಮೇಲೆ ಚಲ್ಲಲ್ಪಟ್ಟಿರುವುದರಿಂದ ಅದರ ಹೆಚ್ಚಿನ ಕ್ರಿಯಾ ಭಾಗವು ನರಗಳನ್ನು ಆಶ್ರಯಿಸಿದೆ. ಆದಕಾರಣ ಬೆನ್ನೆಲುಬುಗಳಿಗೆ ಒಂದಿಷ್ಟೂ ಅಡಚಣೆಯಾಗದಂತೆ, ಜ್ಞಾನತಂತುವಿಗೆ ಒಂದಿಷ್ಟೂ ತಡೆಯಾಗದಂತೆ ಎದೆ, ಕತ್ತು ಮತ್ತು ತಲೆ ಇವುಗಳನ್ನು ಒಂದೇ ಸರಳರೇಖೆಯಲ್ಲಿರುವಂತೆ ಮಾಡಿ ಕೊಂಡು ನಿಸ್ಪಂದವಾಗಿ ಕುಳಿತುಕೊಳ್ಳಬೇಕು. ಆಸನಾಭ್ಯಾಸದಿಂದ ಶರೀರದ ನರಗಳು ಹೆಚ್ಚು ಬಲಗೊಳ್ಳುತ್ತವೆ; ಒಳ ಅಂಗಗಳು ಮತ್ತು ಗ್ರಂಥಿಗಳು ಬಲಗೊಳ್ಳುತ್ತವೆ. ಶರೀರದ ಆರೋಗ್ಯ ಮತ್ತು ಚೈತನ್ಯವು ಹೆಚ್ಚುತ್ತದೆ. ಇದರಿಂದ ರೋಗಗಳನ್ನು ತಡೆಗಟ್ಟಲು ಸಹಾಯವಾಗುತ್ತದೆ. ಆಸನಗಳನ್ನು ಮಾಡುವಾಗ ದೇಹದ ಉಷ್ಣತೆ ಸ್ವಲ್ಪ ಜಾಸ್ತಿಯಾಗುತ್ತದೆ. ಈ ಹೆಚ್ಚು ಉಷ್ಣಾಂಶವು ಸಾಂಕ್ರಾಮಿಕ ಕೀಟಾಣುಗಳನ್ನು ನಾಶಮಾಡುವುದೆಂದು ಸಂಶೋಧನೆಯಿಂದ ತಿಳಿದುಬಂದಿದೆ.

೨. **ಆಚಮನ** : ಮನುಷ್ಯನ ಕುತ್ತಿಗೆಯ ಒಳಭಾಗ ಮತ್ತು ಮುಂಭಾಗ(ಕಂಠ)ದಲ್ಲಿ ಧ್ವನಿಯನ್ನು ಉತ್ಪಾದಿಸುವ 'ಸ್ವರಯಂತ್ರ' (ಧ್ವನಿಪೆಟ್ಟಿಗೆ-Sound Box) ಎಂಬ ಒಂದು ಅವಯವವಿದೆ. ಈ ಧ್ವನಿ ಪೆಟ್ಟಿಗೆಯಲ್ಲಿ ವಿವಿಧ ರೀತಿಯಿಂದ ಧ್ವನಿತರಂಗಗಳು (vibrations) ಉಂಟಾಗಿ ವಿವಿಧ ವರ್ಣಗಳು ಉತ್ಪನ್ನವಾಗುತ್ತವೆ. ಶುದ್ಧವಾದ ಶಬ್ದ ಬರುವುದಕ್ಕೆ ಬಾಯಿ ಮತ್ತು ಮೂಗಿನಗೂಡು ಸಹಕಾರಿಯಾಗಿವೆ. ನಾಲಿಗೆ ಮತ್ತು ತುಟಿಗಳು ಶಬ್ದಗಳ ಉಚ್ಚಾರಣೆಯನ್ನು ನವೀನಗೊಳಿಸುತ್ತವೆ. ಶಬ್ದೋಚ್ಚಾರಣೆಗೆ ಕಂಠ, ನಾಲಿಗೆ ಮತ್ತು ತುಟಿಗಳು ಬಹುಮುಖ್ಯ ವಾದುವು. ಶಬ್ದವು ಗಂಟಲಿನಿಂದ ಬರುತ್ತದೆ. ಅದು ಹಾಗೆ ಬರುವಾಗ— ವಾಯುವು ಹೊರಕ್ಕೆ ಬರುವಾಗ—ತೊಂದರೆಯಾಗದಿರಲಿ ಮತ್ತು ಶಬ್ದವು ಸುಗಮವಾಗಿ ಬರಲಿ ಎಂಬ ಉದ್ದೇಶದಿಂದ ನೀರನ್ನು ಕುಡಿಯುತ್ತೇವೆ. ಈ ರೀತಿ ಕುಡಿದ ನೀರು ಈ ಭಾಗಗಳನ್ನು ತೇವ (libricate) ಮಾಡುತ್ತದೆ. ಆಗ ಶಬ್ದಗಳ ಉಚ್ಚಾರಣೆ ಶುದ್ಧವಾಗಿಯೂ, ಸ್ಫುಟವಾಗಿಯೂ ಇರುತ್ತದೆ. ಹಾಗೂ ಕಂಠದಲ್ಲಿನ ಕಫ ಮತ್ತು ಪಿತ್ತ ನಿವೃತ್ತಿಯಾಗಿ ಮಂತ್ರೋಚ್ಚಾರಣೆ ಸುಗಮವಾಗುತ್ತದೆ.

ಮನುಷ್ಯನ ಶರೀರವು ಒಂದು ಪರಿಪೂರ್ಣ ಯಂತ್ರ ; ವಿದ್ಯುತ್ ಕೇಂದ್ರ. ಈ ಶರೀರದಲ್ಲೆಲ್ಲಾ ವಿದ್ಯುತ್ ಇದ್ದೇ ಇರುತ್ತದೆ. ಕಣ್ಣು, ಎದೆ, ಹೊಟ್ಟೆ, ನಾಭಿ, ಪುರುಷಜನನೇಂದ್ರಿಯ, ಕಿಬ್ಬೊಟ್ಟೆ, ಮಿದುಳು-ಮತ್ತು ಬ್ರಹ್ಮಾಂಡ ಇವು ವಿದ್ಯುತ್ ಕಿರಣಗಳ ಉಗಮಸ್ಥಾನಗಳಲ್ಲಿ ಮುಖ್ಯವಾದುವು. ಶರೀರ ದಲ್ಲಿ ಸದಾಕಾಲವೂ ವಿದ್ಯುತ್ ಉತ್ಪಾದನೆ ಮತ್ತು ವಿಸರ್ಜನೆ ಆಗುತ್ತಿರು ತ್ತದೆ. ಇದು ಪ್ರಕೃತಿ ನಿಯಮ. ಮಂತ್ರೋಚ್ಚಾರಣೆಯಿಂದ ಸಂಬಂಧಪಟ್ಟ ನರಗಳು ಕೆಲಸಮಾಡಿ ದೇಹದಲ್ಲಿ ವಿದ್ಯುತ್ತನ್ನು ಉತ್ಪಾದಿಸುತ್ತವೆ. ದೇಹ ದಲ್ಲಿರುವ ವಿದ್ಯುತ್ ವಿಸರ್ಜನೆಯಾಗಬೇಕಾದರೆ ಕೇವಲ ಕೆಲವು ಅಂಗಗಳ ಮೂಲಕ ಮಾತ್ರ ಸಾಧ್ಯ. ನಾವು ಅಂಗೈಗೆ ನೀರು ಹಾಕಿಕೊಂಡಾಗ ಅಂಗೈ ನಲ್ಲಿರುವ ಸ್ವಲ್ಪಭಾಗ ವಿದ್ಯುತ್ತನ್ನು ಆ ನೀರು ಹೀರಿಕೊಳ್ಳುವುದು. ಅದನ್ನು ಕುಡಿದಾಗ ಅದು ಹೊಟ್ಟೆಗೆ ಹೋಗಿ ಅಲ್ಲಿರುವ ವಿದ್ಯುತ್ತಿನೊಡನೆ ಬೆರೆತು ಅದು ಶರೀರದಾದ್ಯಂತ ಒಂದೇ ಸಮನಾಗಿರುವಂತೆ ಮಾಡುತ್ತದೆ. ಈ ನೀರು ಗಂಟಲಿನ ಮೂಲಕ ಹೊಟ್ಟೆಗೆ ಹೋಗುವಾಗ ಅಲ್ಲಿರುವ ನರಗಳಿಗೂ, ಸ್ನಾಯುಗಳಿಗೂ ಈ ವಿದ್ಯುತ್ ಪ್ರವಹಿಸಿ ಉತ್ತೇಜನವಾಗುತ್ತದೆ. ಇದರಿಂದ ಇವುಗಳಿಗೆ ಸಂಬಂಧಪಟ್ಟ ಉಪದ್ರವಗಳು ತಡೆಯಲ್ಪಡುತ್ತವೆ. 'ಕೇಶವಾಯ ಸ್ವಾಹಾ' ಎಂದು ಗಂಟಲಿನಿಂದಲೂ 'ನಾರಾಯಣಾಯಸ್ವಾಹಾ' ಎಂದು ನಾಲಿಗೆಯಿಂದಲೂ, 'ಮಾಧವಾಯ ಸ್ವಾಹಾ' ಎಂದು ತುಟಿಗಳ ಸಹಾಯ ದಿಂದಲೂ ನಾಮಗಳು ಹೊರಡುವಾಗ ಆ ಪ್ರದೇಶಗಳಿಗೆ ಸಂಬಂಧಪಟ್ಟ ಸ್ನಾಯುಗಳಿಗೆ ವ್ಯಾಯಾಮವಾದಂತಾಗಿ ಶಬ್ದಗಳ ಉಚ್ಚಾರಣೆಯು ಶುದ್ಧ ವಾಗಿಯೂ, ಸ್ಫುಟವಾಗಿಯೂ ಆಗುವುದೆಂದು ಶರೀರ ಶಾಸ್ತ್ರಜ್ಞರು ಹೇಳು ತ್ತಾರೆ. ನಾವು ಅಂಗನ್ಯಾಸ ಮಾಡುವಾಗ ಒದ್ದೆಯಾದ ಕೈಬೆರಳುಗಳ ಮೂಲಕ ಆಯಾಯಾ ಅಂಗಗಳನ್ನು ಮುಟ್ಟಿದರೆ (ನ್ಯಾಸ ಮಾಡಿದರೆ) ಸ್ವಲ್ಪ ಭಾಗ ವಿದ್ಯುತ್ ಆ ಅಂಗಗಳಿಂದ ವಿಸರ್ಜನೆಯಾಗುತ್ತದೆ. ಮತ್ತು ಆ ಅಂಗಗಳ ಶಕ್ತಿಯು ವೃದ್ಧಿಯಾಗುತ್ತದೆ. ಪರಮಾತ್ಮನ ದಿವ್ಯ ನಾಮ ಗಳನ್ನು ಉಚ್ಚಾರಣೆ ಮಾಡುವುದರಿಂದ ಮನಸ್ಸಿಗೆ ಒಂದು ವಿಧವಾದ ನೆಮ್ಮದಿಯುಂಟಾಗುತ್ತದೆ. ಇದು ಮನಸ್ಸಿನ ಮೇಲೆ ಒಳ್ಳೆಯ ಪ್ರಭಾವ ಬೀರುತ್ತದೆ. ಆಚಮನದಿಂದ ಮನಸ್ಸಿನ ಉದ್ವೇಗವು ಶಾಂತವಾಗುವುದು. ಶೀತಕಣಗಳು ಶರೀರವನ್ನು ಸ್ಪರ್ಶಿಸಿದೊಡನೆ ಕಾಯಾಗ್ನಿಯು ಅಂದರೆ ಶರೀ ರಾಗ್ನಿಯು ಜಾಗ್ರತವಾಗುವುದು. ಪ್ರಾತಃ ಸ್ನಾನವು (ತಣ್ಣೀರಿನ ಸ್ನಾನ)

ಶರೀರಾಗ್ನಿಯನ್ನು ಇಳಿಮುಖ ಮಾಡುವುದು. ಒದ್ದೆಯಾದ ಕೈಬೆರಳು ಗಳಿಂದ ಅಂಗಗಳನ್ನು ಮುಟ್ಟಿದಾಗ ಅಗ್ನಿಯು ಹೊರಕ್ಕೆಬ್ಬಿಸಲ್ಪಡುವುದು. ಈ ಅನ್ಯೋನ್ಯ ಕ್ರಿಯೆಯಿಂದ ಶರೀರದ ಎಲ್ಲಾ ಅಂಗಗಳ ಒಳಹೊರ ಭಾಗ ಗಳಲ್ಲಿ ಕಾಯಾಗ್ನಿಯ ಚಲನವಲನಗಳುಂಟಾಗಿ ಶರೀರವುಶುದ್ಧವಾಗುವುದು.

**೩. ಪ್ರಾಣಾಯಾಮ :** 'ಪ್ರಾಣ'ವೆಂದರೆ ಶರೀರದಲ್ಲಿ ಸಂಚರಿಸುವ 'ವಾಯು.' 'ಆಯಾಮ'ವೆಂದರೆಅದರ 'ನಿಶ್ಚಲೀಕರಣ'ವೆಂದು ಒಂದು ಉಪ ನಿಷತ್ತು ವಿವರಿಸುತ್ತದೆ. ಮತ್ತೊಂದು ಉಪನಿಷತ್ತು—ಶರೀರದಲ್ಲಿ ನಡೆಯುವ ವೃತ್ತಿ ಅಥವಾ ವ್ಯಾಪಾರಗಳೆಲ್ಲವನ್ನೂ ತಡೆಯುವುದು 'ಪ್ರಾಣಾಯಾಮ' ಎಂದು ಕರೆಸಿಕೊಳ್ಳುತ್ತದೆ ಎಂದು ವರ್ಣಿಸುತ್ತದೆ. ಪ್ರಾಣಾಯಾಮವು ಮನಃಶುದ್ಧಿಗಾಗಿಮಾಡುವಕರ್ಮಾಂಗ. ಶ್ವಾಸೋಚ್ಛ್ವಾಸಗಳನ್ನು ನಿರೋಧ ಮಾಡಿ ವ್ಯಾಯಾಮ ಮಾಡುವುದರಿಂದ ಮನಸ್ಸು ಸ್ತಿಮಿತಕ್ಕೆ ಬರುತ್ತದೆ. ವೀರ್ಯವು ಸ್ಥಿರವಾಗುತ್ತದೆ. ಆಚಮನ ಪ್ರಾಶನಗಳಿಂದ ಪಾನಮಾಡಲ್ಪಟ್ಟ ಜಲವು ಆಸನಾಭ್ಯಾಸ ಮತ್ತು ಪ್ರಾಣಾಯಾಮಾದಿಗಳಿಂದ ದೇಹವನ್ನು ಶುದ್ಧ ಮಾಡುವ ಧೌತಿ ಕ್ರಿಯೆಗಳಾಗಿ ಪರಿಣಮಿಸಿ ದೇಹದೊಳಗೆ ಕಟ್ಟಿರತಕ್ಕ ಪಾಪರೂಪವಾದ (ರಜಸ್ತಮೋಗುಣಗಳ) ಕಲ್ಮಷಗಳನ್ನು ಹೋಗಲಾಡಿಸಿ ಪುಟವಿಟ್ಟ ಅಪರಂಜಿಯ ಚಿನ್ನದಂತೆ ಅಂಗಗಳನ್ನು ಪ್ರಕಾಶ ಮತ್ತು ನೈರ್ಮಲ್ಯವುಳ್ಳವುಗಳನ್ನಾಗಿ ಮಾಡುವುದು ; ಮನಸ್ಸಿಗೆ ನಿರ್ಮಲ ಶಕ್ತಿ ಯನ್ನುಂಟುಮಾಡುವುದು.

ನಿಯಮಬದ್ಧವಾಗಿ ಪ್ರಾಣಾಯಮದ ಮೂಲಕ ಉಸಿರನ್ನು ಎಳೆದು ಕೊಂಡರೆ ದೇಹದೊಳಗಿರುವ ಎಲ್ಲಾ ಅಂಗಗಳ ಮೇಲೂ ಗಾಳಿಯ ಒತ್ತಡದ ಪ್ರಭಾವ ಬೀಳುವುದು. ಪಪೆ (Diaphram) ಚಪ್ಪಟೆಯಾಗುವುದು. ಇತರ ಅಂಗಗಳೂ ಚುರುಕಾಗುವುವು. ಇದರಿಂದ ಅವುಗಳಿಗೆ ಸಂಬಂಧಪಟ್ಟ ನರಗಳು ಚುರುಕಾಗಿ ರಕ್ತಸಂಚಾರ ಚುರುಕಾಗುವುದು. ಈ ರೀತಿ ಆಗಾಗ್ಗೆ ಈ ಅಂಗಾಂಗಗಳನ್ನು ಉತ್ತೇಜಿಸುತ್ತಿದ್ದರೆ ಅವು ಬಲಗೊಂಡು ರೋಗ ಗಳನ್ನು ತಡೆಯುವ ಶಕ್ತಿಯನ್ನು ಪಡೆಯುತ್ತವೆ.

ಪ್ರಾಣಾಯಾಮದಿಂದ ಈ ಕೆಳಗಿನ ಪ್ರಯೋಜನಗಳುಂಟು : ೧. ಉಸಿ ರಾಟದ ವ್ಯಾಯಾಮಗಳು ಶ್ವಾಸಕೋಶಗಳನ್ನು ಸ್ವಚ್ಛಗೊಳಿಸಿ, ಹೃದಯ ವನ್ನು ಸ್ಥಿರಗೊಳಿಸಿ, ರಕ್ತವನ್ನು ಶುದ್ಧಮಾಡಿ, ಇಡೀ ನರವ್ಯವಸ್ಥೆಯನ್ನು

ಸ್ವಸ್ಥ ಸ್ಥಿತಿಗೆ ತರುತ್ತವೆ. ಸಮಸ್ತ ಶರೀರದಲ್ಲಿ ಪ್ರಾಣಾಯಾಮದ ಪ್ರವಾಹವು ಬಹಳ ತೀವ್ರಗತಿಯಿಂದ ಆರಂಭವಾಗುತ್ತದೆ. ೨. ಸೌಮ್ಯವಾದ ದೃಷ್ಟಿಯುಂಟಾಗುತ್ತದೆ. ೩. ಶ್ರೋತ್ರೇಂದ್ರಿಯ ಮತ್ತು ಚಕ್ಷುರಿಂದ್ರಿಯಗಳು ಬಲಗೊಳ್ಳುತ್ತವೆ. ೪. ಮನಸ್ಸಿನ ದೃಢತೆ ಹೆಚ್ಚುತ್ತದೆ. ೫. ಬುದ್ಧಿ ಶಕ್ತಿಯು ಹೆಚ್ಚಾಗುತ್ತದೆ. ೬. ಮನಶ್ಶಾಂತಿಯುಂಟಾಗುತ್ತದೆ. ೭. ಶ್ವಾಸ ಕೋಶಗಳಿಗೆ ಸಂಬಂಧಪಟ್ಟ ರೋಗಗಳು ತಡೆಯಲ್ಪಡುತ್ತವೆ. ೮. ಕೆಲಸ ದಲ್ಲಿ ಸ್ಫೂರ್ತಿಯುಂಟಾಗುತ್ತದೆ. ೯. ಯೋಚನಾಶಕ್ತಿಯುಂಟಾಗುತ್ತದೆ. ೧೦. ಮಲಬದ್ಧತೆಯು ನಿವಾರಣೆಯಾಗುತ್ತದೆ. ೧೧. ಶ್ರವಣ ಶಕ್ತಿಯು ಹೆಚ್ಚುತ್ತದೆ. ೧೨. ಹೃದಯ ದೌರ್ಬಲ್ಯವು ನಿವಾರಣೆಯಾಗುತ್ತದೆ. ೧೩. ಮೂಲವ್ಯಾಧಿ ಮತ್ತು ಅಂಡವಾಯುವು ತಡೆಯಲ್ಪಡುತ್ತವೆ. ೧೪. ದೃಷ್ಟಿಮಾಂದ್ಯವು ಹೋಗುತ್ತದೆ. ೧೫. ಗ್ರಹಣಶಕ್ತಿಯು ವೃದ್ಧಿಯಾಗುತ್ತದೆ. ೧೬. ಆಯುರ್ವೃದ್ಧಿಯಾಗುವುದಲ್ಲದೆ ನಾವು ನಮ್ಮ ದೈನಂದಿನ ವ್ಯವಹಾರಗಳಲ್ಲಿ ದೃಢ ಮನಸ್ಸಿನಿಂದ, ಸ್ಥಿರ ಸಂಕಲ್ಪದಿಂದ ಕೆಲಸ ಮಾಡುವ ಅಭ್ಯಾಸ ಉಂಟಾಗುತ್ತದೆ.

ಒಬ್ಬ ಮಹರ್ಷಿಯರು ಪ್ರಾಣಾಯಾಮದ ಉಪಯೋಗವನ್ನು ಈ ಕೆಳಗೆ ಕಂಡಂತೆ ಸಂಗ್ರಹಿಸಿದ್ದಾರೆ: The advantages of Pranayama are seven fold. 1. Physical 2. Emotional 3. Intellectual 4. Intuitional 5. Creative 6. Volitional and 7. Eternal.

ಸೂಚನೆ: ಪ್ರಾಣಾಯಾಮದ ವಿಷಯದಲ್ಲಿ ಇನ್ನೂ ಹೆಚ್ಚು ತಿಳಿಯ ಬಯಸು ವವರು ಈ ಸಂಗ್ರಹಕಾರರೇ ಸಂಗ್ರಹಿಸಿ ಬರೆದಿರುವ 'ಪ್ರಾಣಾಯಾಮ ಯೋಗ' ಎಂಬ ಪುಸ್ತಕವನ್ನು ಓದಿರಿ.

೮. **ಸಂಕಲ್ಪ:** ಸಂಕಲ್ಪವೆನ್ನುವುದೇ ಮನಶ್ಶಕ್ತಿಯಾಗಿದೆ ಸಂಕಲ್ಪದಿಂದ ಇದು ವೃದ್ಧಿಗೊಳ್ಳುತ್ತದೆ. ಇದನ್ನೇ ತಪಶ್ಶಕ್ತಿ ಎನ್ನುವರು. ಎಷ್ಟೇ ಕಷ್ಟ ಗಳು ಮತ್ತು ವಿಘ್ನಗಳು ಬಂದರೂ ಹಿಡಿದ ಕೆಲಸವನ್ನು ಬಿಡದೆ ಸಾಧಿಸಿಯೇ ಸಾಧಿಸುತ್ತೇನೆಂಬ ದೃಢ ವಿಶ್ವಾಸ, ನಿರ್ಧಾರ ಮನಸ್ಸಿನಲ್ಲಿ ಚೆನ್ನಾಗಿ ಬೇರೂರಿ ಕಾರ್ಯವನ್ನು ಸಂಪೂರ್ಣವಾಗಿ ಮಾಡಿ ಮುಗಿಸುವ ಧೈರ್ಯ, ಸ್ಥೈರ್ಯ ಸಂಕಲ್ಪದಿಂದ ಉಂಟಾಗುತ್ತದೆ. ಇದಲ್ಲದೆ ನಾವು ಯಾವ ದೇಶ, ಕಾಲ, ಸಂವತ್ಸರದಲ್ಲಿದ್ದೇವೆ ಇತ್ಯಾದಿಗಳನ್ನು ತಿಳಿಸುವುದೂ ಇದರ ಉದ್ದೇಶ

ಗಳಲ್ಲೊಂದು. ಹಾಗೂ ಖಗೋಳ ಶಾಸ್ತ್ರ ಪರಿಚಯ ಹೊಂದಿ, ಸೂರ್ಯ ಚಂದ್ರರ ಚಲನೆಗಳನ್ನು ಅರಿತು, ಅದರ ಪರಿಣಾಮವನ್ನು ತಿಳಿದು, ಆ ದಿವಸ ಗಳಲ್ಲಿ ನಾವು ಯಾವ ರೀತಿ ನಡೆದುಕೊಂಡರೆ ಅವುಗಳ ಕೆಟ್ಟಪರಿಣಾಮ ನಮ್ಮ ಮೇಲೆ ಉಂಟಾಗುವುದಿಲ್ಲವೆಂಬುದನ್ನು ಮನವರಿಕೆಮಾಡಿಕೊಂಡು ಅದರಂತೆ ನಡೆದುಕೊಳ್ಳಲು ಇದು ಸಹಕಾರಿಯಾಗಿದೆ. ಸಂಕಲ್ಪವು ಖಗೋಳ ಮತ್ತು ಜ್ಯೋತಿಷ ಇತ್ಯಾದಿಗಳ ಪರಿಚಯವನ್ನುಂಟು ಮಾಡುವುದು. ಇದು ಆರೋಗ್ಯದ ದೃಷ್ಟಿಯಿಂದ ಆಯಾ ದಿವಸಗಳಲ್ಲಿ ನಾವು ಆಚರಿಸಬೇಕಾದ ಆಚರಣೆಗಳನ್ನು ತೋರಿಸಿಕೊಡುವುದಾಗಿದೆ. (ಉದಾ : ಏಕಾದಶಿ ದಿವಸ ಉಪವಾಸ, ಯುಗಾದಿಯಂದು ಬೇವು ಬೆಲ್ಲ, ಸಂಕ್ರಾಂತಿಯಲ್ಲಿ ಎಳ್ಳು ಬೆಲ್ಲ, ಧನುರ್ಮಾಸದಲ್ಲಿ ಹುಗ್ಗಿ, ಗರುಡ ಪಂಚಮಿ ದಿವಸ ಕರಿದ ತಿಂಡಿತಿನಸುಗಳು ಕೂಡದು, ಸುಬ್ರಹ್ಮಣ್ಯ ಷಷ್ಠಿಯಲ್ಲಿ ಕರಿದ ತಿನಸುಗಳೇ ಬೇಕು, ಇತ್ಯಾದಿ) ನ್ಯಾಯಾಧೀಶರ ಸ್ಥಾನ, ಪದವೀದಾನ, ವಿಧಾನಸಭೆ, ಮಂತ್ರಿಮಂಡಲ ರಚನೆ ಮುಂತಾದ ಸಂದರ್ಭಗಳಲ್ಲಿ ಮಾಡುವ ಸಂಕಲ್ಪಗಳೂ ಸಹ ಇವೇ ವಿಧಾನ ದಲ್ಲಿವೆ.

೫. **ನ್ಯಾಸ** : ಶರೀರದಲ್ಲಿ ಉತ್ಪತ್ತಿಯಾಗುವ ವಿದ್ಯುತ್ತು ಅಂಗಗಳನ್ನು ಸ್ಪರ್ಶ ಮಾಡುವಾಗ ವಿಸರ್ಜನೆಯಾಗಿ ಶರೀರದ ಶಾಖವು ಸಮಧಾತುವಾಗಿ ರುವಂತೆ ಮಾಡುತ್ತದೆ. ಮನಸ್ಸಿನಲ್ಲಿ ಏಕಾಗ್ರತೆ ಹಾಗೂ ಮನಶ್ಶಾಂತಿ ಯುಂಟಾಗುತ್ತದೆ. ಈ ಮನಶ್ಶಾಂತಿ ಮತ್ತು ಏಕಾಗ್ರತೆಯಿಂದ ಒಂದು ವಿಧವಾದ ಶಕ್ತಿಯು ದೇಹವನ್ನು ತುಂಬಿ, ಆತ್ಮಶಕ್ತಿಯು ಬೆಳೆದು ಎಲ್ಲಾ ಕೆಲಸದಲ್ಲಿಯೂ ಧೈರ್ಯ, ಸ್ಥೈರ್ಯ ಮತ್ತು ಉತ್ಸಾಹ ಉಂಟಾಗಿ ಆ ಕೆಲಸ ಅಡೆತಡೆಯಿಲ್ಲದೆ ಚೆನ್ನಾಗಿಯೂ, ನ್ಯಾಯವಾಗಿಯೂ ನಡೆಯುವು ದಲ್ಲದೆ ಆರೋಗ್ಯ ಹಾಗೂ ಆಯುಷ್ಯವೃದ್ಧಿಗೆ ಕಾರಣವಾಗುವುದು.

## ಗಾಯತ್ರೀ ಜಪ

ಶ್ರೀಗಾಯತ್ರೀ ಮಾತೆ ನಮಗೆ ಯಾವ ವಿಧದ ಸಹಾಯ ಮಾಡುತ್ತಾಳೆ? ವರಕೊಡುತ್ತಾಳೆ? ಇದು ಭಕ್ತನ ಪ್ರಶ್ನೆ. ಇದಕ್ಕೆ ಉತ್ತರವನ್ನು ಅಥರ್ವಣ ವೇದವು (೧೯-೭೧-೧) ಈ ರೀತಿ ಕೊಡುತ್ತದೆ. ಈಕೆ ಪ್ರಾಪಂಚಿಕ ಸುಖ ಕ್ಕಾಗಿ ನಮಗೆ ಆರು ವರಗಳನ್ನು ಕೊಡುತ್ತಾಳೆ. ಅವು ಯಾವುವೆಂದರೆ ಆಯುಸ್ಸು, ಸ್ವಾಸ್ಥ್ಯ (ಆರೋಗ್ಯ), ಮಕ್ಕಳು, ಹಸುಗಳು, ಕೀರ್ತಿ, ಧನ.

ಇವುಗಳ ಜೊತೆಗೆ ಇವುಗಳನ್ನೂ ಕೊಡುತ್ತಾಳೆ. ಅವು ಪ್ರಾಪಂಚಿಕ ಸುಖಾನುಭವ ಮಾಡುವುದೇ ಅಲ್ಲದೆ ಸಾಧಕನು ಕ್ಷೀಣಿಸದಂತೆ ತಡೆಯುತ್ತವೆ. ಅವೇ ಬ್ರಹ್ಮವರ್ಚಸ್ಸು ಮತ್ತು ಬ್ರಹ್ಮಲೋಕ. ಮನುಷ್ಯನಿಗೆ ಇವಕ್ಕಿಂತ ಮತ್ತಿನ್ನೇನು ಬೇಕು ? ಶ್ರೀಗಾಯತ್ರೀ ಉಪಾಸನೆಯಿಂದ ಮನಸ್ಸಿನ ಪರಿಶುದ್ಧತೆ ಬೆಳೆಯುವುದು. ಆಗ ಆರೋಗ್ಯ ಕೆಡಿಸುವ ಕೆಟ್ಟ ಅಭ್ಯಾಸಗಳು ಕಡಮೆಯಾಗಿ ಆರೋಗ್ಯ ಮತ್ತು ಆಯುಸ್ಸು ಹೆಚ್ಚುವುವು. ಜ್ಞಾನವೇ ಮುಖ್ಯವಾದ ಐಶ್ವರ್ಯ. ಅದೂ ದೊರೆಯುವುದು. ಇದರಿಂದ ಕೀರ್ತಿ ಉಂಟಾಗುವುದು. ಆರೋಗ್ಯ ಚೆನ್ನಾಗಿದ್ದರೆ ವಂಶಾಭಿವೃದ್ಧಿಯಾಗುವುದು. ಸುಖ ಶಾಂತಿ ಲಭಿಸುವುವು. ಇವುಗಳಿಂದ ಮುಖದಲ್ಲಿ ಬ್ರಹ್ಮತೇಜಸ್ಸುಂಟಾಗುವುದು. ಆದರೆ ಒಂದು ವಿಷಯ :ಉಜ್ಜಿದ ಕೂಡಲೇ ನಮಗೆ ಬೇಕಾದ್ದನ್ನೆಲ್ಲಾ ಕೊಡುವ ಅಲ್ಲಾವುದೀನನ ಲಾಂದ್ರವೆಂದು ಇದನ್ನು ಭಾವಿಸಬಾರದು. ಚಿನ್ನವನ್ನು ಒರೆಗಲ್ಲಿನ ಮೇಲೆ ತಿಕ್ಕಿ ನೋಡಿದಾಗತಾನೇ ಗೊತ್ತಾಗುವುದು, ಅದು ಅಪರಂಜಿಯೆ ಅಥವಾ ಸಾಮಾನ್ಯ ಲೋಹವೆ ಎಂದು ? ಬೀಜದಿಂದ ವೃಕ್ಷನೆಲ್ಲವೂ ಬಂದಿದೆಯೋ ಎಂದು ತಿಳಿಯಬೇಕಾದರೆ ಬೀಜವನ್ನು ನೆಟ್ಟು, ಅದನ್ನು ಸರಿಯಾಗಿ ಪೋಷಿಸಿ, ಅದರ ವಿಕಾಸ ಹೇಗಾಗುವುದೆಂಬುದನ್ನು ಕಾದು ನೋಡಬೇಕು. ಕನ್ನಡಿಯೇನೋ ಮುಂದೆ ಇದೆ ; ಆದರೆ ಕಣ್ಣುಗಳೇ ಇಲ್ಲದಿದ್ದರೆ ಕನ್ನಡಿಯನ್ನು ದೂಷಿಸುವುದು ಯಾವ ನ್ಯಾಯ ? ಹೊಲದಲ್ಲಿ ಬೆಳೆಯುವುದು ರೈತನ ಮುಖ್ಯಗುರಿ. ಅದಕ್ಕಾಗಿ ಸಸಿಗಳನ್ನು ನೆಡುವುದೇ ಅವನ ಮುಖ್ಯ ಕೆಲಸ. ಆದರೆ ಹೊಲದಲ್ಲಿ ಮಾಡಬೇಕಾದ ಇತರ ಸಾಧನ ಸಂಸ್ಕಾರಗಳನ್ನು ಮಾಡದೆ ಕೇವಲ ಸಸಿಗಳನ್ನು ನೆಡುವುದರಿಂದ ಅದು ಬೆಳೆಯಬಲ್ಲುದೆ ? ಉಳುವುದು, ಅಗೆಯುವುದು, ನೀರು, ಗೊಬ್ಬರ ಹಾಕುವುದು, ಕಳೆ ತೆಗೆಯುವುದು ಮುಂತಾದ ಇತರ ವಿಧದ ಸಾಧನಗಳಿಂದ ಹೊಲವನ್ನು ಸಿದ್ಧಗೊಳಿಸಿ ಬೀಜವನ್ನು ಬಿತ್ತುವುದರಿಂದ ಮತ್ತು ಕ್ರಮವರಿತು ಪೋಷಿಸುವುದರಿಂದ ಮಾತ್ರ ಆ ಕೃಷಿಗೆ ಫಲ ದೊರೆಯುವುದು. ನೀರಿನಲ್ಲಿ ಉಪ್ಪು ಪ್ರತ್ಯಕ್ಷವಾಗಿ ಕಾಣದಿದ್ದರೂ ನೀರಿನ ಕಣಕಣಗಳಲ್ಲಿಯೂ ಅದರ ವ್ಯಾಪ್ತಿಯನ್ನು ನಾವು ಅನುಭವಿಸಬಲ್ಲೆವು. ವೀಣೆಯ ತಂತಿಗೆ ತುಕ್ಕು ಹಿಡಿದಿದ್ದರೆ ಅದು ಉತ್ತಮ ಸ್ವರಕ್ಕೆ ಬೇಕಾದ ಸೂಕ್ಷ್ಮ ಕಂಪನ ಹೇಗೆ ಕೊಟ್ಟೀತು ? ಸಾಧಕನ ಕ್ರಮವು ಬಹುಕಾಲದ ಚಿತ್ತದಾರ್ಢ್ಯವನ್ನೂ, ಬಹು ವಿಧದ ಸತತ ಪ್ರಯತ್ನವನ್ನೂ ಅಪೇಕ್ಷಿಸುತ್ತದೆ. ತತ್ತ್ವ

ಶ್ರವಣ ಮಾಡದ ಅಥವಾ ಅರ್ಥವಿಲ್ಲದೆ, ಕ್ರಮವಿಲ್ಲದೆ ಜಪಿಸಿದ ಮಾತ್ರದಿಂದ ಉದ್ದೇಶಸಿದ್ಧಿಯಾಗುವುದೆಂದು ಭಾವಿಸತಕ್ಕದ್ದಲ್ಲ. ತತ್ತ್ವವಾಕ್ಯಗಳು ಬುದ್ಧಿಗೆ ಅರ್ಥವಾಗಿ ಗ್ರಾಹ್ಯವಾಯಿತೆಂದರೂ ಅದು ಫಲಪ್ರಾಪ್ತಿಯಲ್ಲ. ವಾದಕ್ಕಾಗಿ ಹುಟ್ಟಿದ್ದಲ್ಲ ವೇದಶಾಸ್ತ್ರ ;ಅದು ಅನುಷ್ಠಾನಕ್ಕಾಗಿ ಹುಟ್ಟಿದ್ದು. ಯಾರಿಗೆ ಅನುಷ್ಠಾನವಿಲ್ಲವೋ ಅವರಿಗೆ ಗಾಯತ್ರಿಯ ಜ್ಞಾನ ಆಗಲಾರದು ಎಂದು ಹೇಳಬೇಕು. ಏಕೆಂದರೆ ಜ್ಞಾನವೆಂಬ ವಸ್ತು ಒಂದು ಸಂಕಲ್ಪ ಬಿಂದುವಲ್ಲ, ಒಂದು ಕಾರ್ಯ ವಿಧಾನ ; ಒಂದು ಚುಕ್ಕೆಯಲ್ಲ; ಒಂದು ಗೆರೆ. ಆದ್ದರಿಂದ ಶಾಸ್ತ್ರವಿಧಿಗಳಿಗನುಸಾರವಾಗಿ, ಕ್ರಮಬದ್ಧವಾದ ರೀತಿಯಲ್ಲಿ ಈ ಗಾಯತ್ರಿಯನ್ನು ಶ್ವಾಸ-ಪ್ರಶ್ವಾಸಗಳ ಸಂಗೀತದಲ್ಲಿ ಕೂಡಿಸಿ ಮಾನವನು ತನ್ನ ಜೀವನವನ್ನು, ಜೀವನದ ಮುಖಂಡ ಗಾಯುತ್ರಿಯು ಎಲ್ಲಿಗೆ ಒಯ್ಯುವುದೋ ಅಲ್ಲಿಗೆ ಹೋಗೊಣ. ಅದರ ಹಿಂದೆಹಿಂದೆಯೇ (ಅನುಸರಿಸಿ) ನಡೆಯುತ್ತಾ, ನಡೆಯುತ್ತಾ ಅದು ನಿಲ್ಲುವ ಸ್ಥಳದಲ್ಲಿ ನಿಲ್ಲೋಣ. ಹಾಗಾದಲ್ಲಿ ಮಾತ್ರ ನಾವು ಗಾಯತ್ರಿಯ ಅನು + ಸ್ಥಾನ = ಅನುಷ್ಠಾನ ಮಾಡಿದಂತಾಗುವುದು.

ಈ ಮಂತ್ರದ ಅಕ್ಷರ ಸಂಯೋಜನೆ, ಸ್ವರವಿಜ್ಞಾನಗಳಲ್ಲಿ ಶಬ್ದಶಾಸ್ತ್ರದ ಹಿನ್ನೆಲೆಯಲ್ಲಿ ರಹಸ್ಯ ತುಂಬಿದೆ. ಇದರ ಉಚ್ಚಾರಣೆಯಿಂದ ಸೂಕ್ಷ್ಮದೇಹದೊಳಗಿರುವ ಅನೇಕ ಶಕ್ತಿಕೇಂದ್ರಗಳು ಒಮ್ಮೆಲೇ ಜಾಗೃತವಾಗುವುವು.

ನಮ್ಮ ಸೂಕ್ಷ್ಮ ದೇಹದಲ್ಲಿ, ಪ್ರತ್ಯಾಂಗಗಳಲ್ಲಿ ಅನೇಕ ಚಕ್ರ, ಉಪಚಕ್ರ, ಗ್ರಂಥಿಗಳು ಮುಂತಾದ ಅನೇಕ ಗುಪ್ತ ಭಾಗಗಳಿವೆ. ಇವುಗಳು ವಿಕಾಸಗೊಂಡರೆ ಸಾಧಾರಣ ವ್ಯಕ್ತಿ ಅಸಾಧಾರಣ ವ್ಯಕ್ತಿಯಾಗುವನು. ಈ ಮಂತ್ರ ಅಲೌಕಿಕ ಶಕ್ತಿಗಳ ರತ್ನಭಂಡಾರ.

ಈ ಮಹಾಮಂತ್ರವು ೨೪ ಅಕ್ಷರಗಳ ಅದ್ಭುತ ಸಂಘಟನೆಯಾಗಿದೆ. ಇದನ್ನು ಮಾನಸಿಕವಾಗಿ ಅಥವಾ ಮಾತಿನ ಮೂಲಕ ಮಾಡುವ ಉಚ್ಚಾರಣೆಯಿಂದ, ವೀಣೆಯ ತಂತಿಯನ್ನು ಮಿಟಿದಾಗ ಉಂಟಾಗುವ ಮಧುರ ಸ್ವರದಂತೆ, ವಿಶೇಷ ದಿವ್ಯ ತರಂಗಗಳು ಎದ್ದು ಬುದ್ಧಿ–ಮಂಡಲ, ಮನ–ಮಂಡಲ, ಹೃದಯ, ಮೂಲಾಧಾರಚಕ್ರ ಹಾಗೂ ಅನ್ಯಅಂಗಗಳಿಗೆ ಹೋಗಿ ಅಲೌಕಿಕ, ವೈಜ್ಞಾನಿಕ ಪ್ರಭಾವ ಬೀರುತ್ತವೆ. ಇದು ಎಷ್ಟು ಸೂಕ್ಷ್ಮ ಪ್ರತಿಕ್ರಿಯೆ ಎಂದರೆ ಇದನ್ನು ಪೂರ್ಣ ಸಾವಧಾನ ಹಾಗೂ ಸಮಾಹಿತ ಚಿತ್ತನಾದ ಸಾಧಕನೇ ಅನುಭವಿಸಬಲ್ಲನು. ಗಾಯತ್ರೀ ಜಪ ಹಾಗೂ ತದನು

ಕೂಲ ಆಚರಣೆ ಮಾಡಬಲ್ಲ ಸಾಧಕನ ಹೃದಯಕಮಲ ಅರಳತೊಡಗು ತ್ತದೆ. ಅವನಿಗೆ ಜೀವನದಲ್ಲಿ ಸ್ವಲ್ಪಸ್ವಲ್ಪ ಮಾಧುರ್ಯವು ಪ್ರತೀತವಾಗ ತೊಡಗುವುದು.

ಈ ಉಚ್ಚಾರಣಾ ಕ್ರಿಯೆ ನಡೆಯುವಾಗ ಬುದ್ಧಿಯ ಸ್ಥೂಲತ್ವ ದೂರ ವಾಗುತ್ತಾ ಅದು ಸೂಕ್ಷ್ಮ–ತೀಕ್ಷ್ಣವಾಗತೊಡಗುತ್ತದೆ. ಒಂದೇ ಪ್ರಕಾರ ಶಬ್ದ ಹಾಗೂ ವಿಚಾರಗಳನ್ನು ಪದೇಪದೇ ಮನನ ಮಾಡುವುದರಿಂದ ಅವು ಮನಸ್ಸಿನ ಮೇಲೆ ಸ್ಥಾಯಿ ಪ್ರಭಾವ ಬೀರುತ್ತವೆ ಹಾಗೂ ಅವು ಜೀವನದಲ್ಲಿ ಓತಪ್ರೋತವಾಗುತ್ತವೆ. ಇದರಿಂದ ಬುದ್ಧಿ–ಹೃದಯಗಳೆರಡರ ಮಾಲಿನ್ಯ ತೊಲಗಲು ಸಹಾಯವಾಗುತ್ತದೆ—ಎಂದು ಮನೋವಿಜ್ಞಾನಿಗಳೂ ಅಭಿ ಪ್ರಾಯಪಡುತ್ತಾರೆ. ಬುದ್ಧಿಯ ಮಲಿನತೆ ದೂರವಾದ ಮೇಲೆ ಧನ ಸಂಪಾದನೆ, ಸಾಂಸಾರಿಕ ವೈಭವಗಳು ಹಾಗೂ ಇತರ ಲೌಕಿಕ ವ್ಯವಹಾರ ಗಳಲ್ಲಿ ಕುಶಲತೆ ಪ್ರಾಪ್ತವಾಗುತ್ತದೆ. ನಿರ್ಮಲ ಬುದ್ಧಿಯಿಂದ ಆತ್ಮ ದರ್ಶನವೂ ದೊರೆಯುತ್ತದೆ.

ಸ್ತುತಿಯಿಂದ ಪರಮೇಶ್ವರನಲ್ಲಿ ಪ್ರೀತಿ, ಅವನ ಗುಣ, ಕರ್ಮ, ಸ್ವಭಾವ ಗಳ ಅರಿವಿನಿಂದ ತನ್ನ ಗುಣ, ಕರ್ಮ, ಸ್ವಭಾವಗಳಲ್ಲಿ ಸುಧಾರಣೆ, ಪ್ರಾರ್ಥನೆ ಯಿಂದ ನಿರಭಿಮಾನತ್ವ, ಉತ್ಸಾಹ ಹಾಗೂ ಸಹಾಯ ಮತ್ತು ಉಪಾಸನೆ ಯಿಂದ ಪರಮಾತ್ಮನೊಡನೆ ಮಿಲನ ಹಾಗೂ ಆತನ ಸಾಕ್ಷಾತ್ಕಾರ ಉಂಟಾಗುತ್ತವೆ.

ಶ್ರೀಗಾಯತ್ರಿಯ ಉಪಾಸನೆಯಿಂದ ಸತ್ತ್ವಗುಣವು ವೃದ್ಧಿಯಾಗುತ್ತದೆ. ಪರಿಣಾಮವಾಗಿ ಸುಧಾರಣೆ ತನಗೆತಾನೇ ಕಂಡುಬರುತ್ತದೆ. ಹಾಗೂ ಅನಿಷ್ಟಗಳು ದೂರವಾಗಿ ಶಾಂತಿ, ಸಮಾಧಾನ ತೃಪ್ತಿ ಸಿಕ್ಕುತ್ತದೆ. ಕರುಣೆ, ಸೇವಾಮನೋಭಾವ, ಸಂಯಮ, ಸ್ಫೂರ್ತಿ, ಸತ್ಯನಿಷ್ಠೆ, ಪ್ರೇಮ ಇತ್ಯಾದಿ ಗುಣಗಳು ಸಾಧಕನ ಹೃದಯ ಉದ್ಯಾನದಲ್ಲಿ ಹೂವಾಗಿ ಅರಳುತ್ತವೆ. ಈ ಸದ್ಗುಣಗಳೇ ನಿಜವಾದ ಸಂಪತ್ತು. ಈ ದೈವೀಸಂಪತ್ತು, ಆತ್ಮಬಲ ಮತ್ತು ದೈವಿಕ ಶಕ್ತಿ ಕುಗ್ಗದಂತೆಯೂ ಸಿದ್ಧಿಗಳು ದುರುಪಯೋಗವಾಗ ದಂತೆಯೂ ಮಾಡುತ್ತದೆ; ಆಮಿಷಗಳ ಜೇಡನ ಬಲೆಯಿಂದ ದೂರ ಸರಿಸು ತ್ತದೆ.

ಈಕೆಯ ಉಪಾಸನೆ ಆರಂಭಿಸಿದರೆ ಆಹಾರ–ವಿಹಾರಗಳ ಬಗ್ಗೆ ಹತೋಟಿ ಹೊಂದಲು ಸಾಧ್ಯವಾಗುತ್ತದೆ. ಇದರಿಂದ ರೋಗ-ರುಜಿನ ದೌರ್ಬಲ್ಯ,

ನಿರುತ್ಸಾಹ, ಬೇಸರ ಇತ್ಯಾದಿ ದೋಷಗಳು ಮಾಯವಾಗುತ್ತವೆ. ಈ ಸಾಧನೆ ಒಂದು ದಿವ್ಯೌಷಧಿ.

ಶ್ರೀಗಾಯತ್ರೀ ಆರಾಧಕನಲ್ಲಿ ಸತ್ತ್ವಗುಣವಿರುವುದರಿಂದ ಸಂಸಾರದಲ್ಲಿಯೂ ಶಾಂತಿ ಸಮಾಧಾನ ನೆಲೆಸಿರುತ್ತದೆ. ಗಂಡ-ಹೆಂಡಿರಲ್ಲಿ ಅನ್ಯೋನ್ಯ ಸಹಕಾರವೂ, ಯೋಗ್ಯ ವಿಚಾರಗಳೂ ಇರುತ್ತವೆ. ಇದರಿಂದ ಅವರ ಮಕ್ಕಳೂ ಸಹ ಗುಣ ಕರ್ಮ, ಸ್ವಭಾವಗಳಲ್ಲಿ ಅವರಂತೆಯೇ ಯೋಗ್ಯರಾಗಿರುತ್ತಾರೆ. ಮಕ್ಕಳೇ ಮನೆಗೆ ಮಾಣಿಕ್ಯವೆಂಬ ಮಾತನ್ನು ದೃಢಪಡಿಸುತ್ತಾ ಸುಪುತ್ರರಾಗಿ ಬೆಳೆಯುತ್ತಾರೆ.

ನಮ್ಮ ಮಹರ್ಷಿಗಳು ಅನೇಕ ಶಾಸ್ತ್ರಗಳನ್ನು ತಿಳಿದವರಾಗಿದ್ದರು. ಅವರು ಮನುಷ್ಯನ ದೇಹ ಮತ್ತು ಮನಸ್ಸಿನ ಆರೋಗ್ಯಕ್ಕೆ ಸಹಕಾರಿಯಾದ ಕೆಲವು ನಿಯಮಗಳನ್ನೂ, ವಿಧಿವಿಧಾನಗಳನ್ನೂ, ವ್ರತಜಪಾದಿಗಳನ್ನೂ ಗೊತ್ತು ಮಾಡಿದರು. ಏಕೆಂದರೆ : ಮನುಷ್ಯನ ದೇಹವು ಪಂಚಭೂತಗಳಿಂದ ನಿರ್ಮಿತವಾಗಿದೆ ಎಂದು ಶಾಸ್ತ್ರಗಳು ಹೇಳುತ್ತವೆ. ಅವು ಯಾವುವೆಂದರೆ ೧. ಭೂತತ್ತ್ವ–ಗಟ್ಟಿಯಾಗಿರುವುದು ೨. ಅಗ್ನಿತತ್ತ್ವ–ಪ್ರಕಾಶವಾಗಿರುವುದು ೩. ವಾಯುತತ್ತ್ವ–ಚಲನೆಯಿಂದ ಕೂಡಿರುವುದು ೪. ಜಲತತ್ತ್ವ ದ್ರವವಾಗಿರುವುದು ಮತ್ತು ೫. ಆಕಾಶತತ್ತ್ವ–ಪೊಳ್ಳಾಗಿರುವುದು. ಈ ಪಂಚಭೂತಗಳ ಗುಣಗಳು ಹೀಗಿವೆ. ಆಕಾಶ–ಶ್ರವಣಶಕ್ತಿ ; ವಾಯು–ಸ್ಪರ್ಶ ಮತ್ತು ಶ್ರವಣಶಕ್ತಿ ; ಅಗ್ನಿ–ರೂಪಗ್ರಹಣ, ಸ್ಪರ್ಶ ಮತ್ತು ಶ್ರವಣಶಕ್ತಿ ; ಜಲ–ರಸಗ್ರಹಣ, ರೂಪಗ್ರಹಣ, ಸ್ಪರ್ಶ ಮತ್ತು ಶ್ರವಣಶಕ್ತಿ ; ಪೃಥ್ವಿ–ಗಂಧ (ವಾಸನೆ) ರಸ, ರೂಪ, ಸ್ಪರ್ಶ ಮತ್ತು ಶ್ರವಣಶಕ್ತಿಗಳು. ಪ್ರಾಣದ ಭೌತಿಕ ರೂಪವೇ ವಾಯು. ವಾಯುವಿನ ಸೂಕ್ಷ್ಮ ರೂಪವೇ ಪ್ರಾಣ. ಈ ರೀತಿ ಬ್ರಹ್ಮಾಂಡದಲ್ಲಿರುವ ಪಂಚಭೂತಗಳು ಮನುಷ್ಯನ ಶರೀರದಲ್ಲಿಯೂ(ಪಿಂಡಾಂಡ)ಇವೆ ಎಂದು ಹೇಳಿದಂತಾಯಿತು. ಈ ಶರೀರದಲ್ಲಿರುವ ಪಂಚಭೂತಶಕ್ತಿಗಳೂ, ಪ್ರಕೃತಿಯಲ್ಲಿರುವ ಪಂಚಭೂತಶಕ್ತಿಗಳೂ ಹೊಂದಾಣಿಕೆಯಿಂದಿರಬೇಕು. ಮನುಷ್ಯನ ದೇಹದಲ್ಲಿ ಪ್ರಕೃತಿಗನುಸಾರವಾಗಿ(body constitution)ವಿದ್ಯುತ್ ವೋಲ್ಟೇಜ್ ಗೊತ್ತಾದ ಪ್ರಮಾಣದಲ್ಲಿರುತ್ತದೆ. ಹಾಗಿದ್ದರೆಮಾತ್ರಆರೋಗ್ಯ ಸರಿಯಾಗಿರುತ್ತದೆ. ಪಂಚಭೂತಗಳಿಂದನಿರ್ಮಿತವಾದ ದೇಹಕ್ಕೆ ಪಂಚಭೂತಗಳಿಂದಲೇಉಪಚಾರ ಸಾಧ್ಯ. ಪ್ರಕೃತಿಯಲ್ಲಿರುವ ಪಂಚಭೂತಶಕ್ತಿಗಳು ಋತುಗಳಿಗನುಸಾರವಾಗಿ ಬದಲಾವಣೆಯಾಗುತ್ತಿರು

ತ್ತವೆ. ಈಬದಲಾವಣೆಗನುಸಾರವಾಗಿ ದೇಹದ ಪಂಚಭೂತಗಳನ್ನು ಹೊಂದಿಸಿ ಕೊಂಡು ಹೋಗುವ ಸಲುವಾಗಿಯೇ ಕೆಲವು ನಿಯಮಗಳನ್ನು (ಧರ್ಮಾಚರಣೆಗಳನ್ನು), ವಿಧಿವಿಧಾನಗಳನ್ನು ನಿರೂಪಿಸಿದ್ದಾರೆ ಈ ಧರ್ಮಾಚರಣೆ ಮೊದಲಾದವುಗಳು ಮನುಷ್ಯನ ಜೀವನದಲ್ಲಿ ಎಲ್ಲಾ ಕಾಲಗಳಿಗೂ ಅನ್ವಯಿಸುತ್ತವೆ. ಆದ್ದರಿಂದ ಪ್ರಕೃತಿಗೆ ವಿರುದ್ಧವಾಗಿ ನಡೆದುಕೊಳ್ಳದೆ ಅದಕ್ಕೆ ಅನುಸಾರವಾಗಿ ನಡೆದುಕೊಳ್ಳುವುದೇ ಧರ್ಮವೆನಿಸುತ್ತದೆ.

ಪ್ರಕೃತಿಯಲ್ಲಿ ಪಂಚಭೂತ ಶಕ್ತಿಗಳಿಂದ ಆಗುವ ಬದಲಾವಣೆಗಳು ಹೇಗೆಂಬುದನ್ನು ಈ ರೀತಿ ವಿಮರ್ಶಿಸಲಾಗಿದೆ ; ಬ್ರಹ್ಮಾಂಡದಲ್ಲಿ ಲಕ್ಷಾಂತರ ನಕ್ಷತ್ರಗಳು ಇದ್ದರೂ ಭೂಮಿಯ ಮೇಲೆ (ಮನುಷ್ಯರ ಮೇಲೆ) ತಮ್ಮ ಪ್ರಭಾವವನ್ನು ಬೀರಬಲ್ಲ ಕೇವಲ ಇಪ್ಪತ್ತೇಳು ನಕ್ಷತ್ರಗಳನ್ನೂ ಮತ್ತು ಒಂಬತ್ತು ಗ್ರಹಗಳನ್ನೂ ಗಣನೆಗೆ ತೆಗೆದುಕೊಳ್ಳಲಾಗಿದೆ. ಚಂದ್ರನು ಭೂಮಿಯ ಸುತ್ತ ತಿರಗುವಾಗ ಇಪ್ಪತ್ತನಾಲ್ಕು ಗಂಟೆಗಳ ಅಂತರದಲ್ಲಿ ಸುಮಾರು ಹನ್ನೆರಡು ಡಿಗ್ರಿಗಳಷ್ಟು ಸಂಚರಿಸುತ್ತಾನೆ. ಇವನು ಭೂಮಿಗೆ ಅತಿ ಸಮೀಪದಲ್ಲಿರುವ ಗ್ರಹ. ಇವನು ಸಂಚರಿಸುವಾಗ ನಕ್ಷತ್ರಗಳ ಸಮೂಹಗಳಿಂದ ಹೊರದೂಡಲ್ಪಟ್ಟ (Radiated) ಕಿರಣಗಳು (cosmic rays) ಚಂದ್ರನ ಮೂಲಕ ಭೂಮಿಯ ಮೇಲೂ ಮತ್ತು ಅಲ್ಲಿರುವ ಮನುಷ್ಯರ ಮೇಲೂ ಪ್ರಭಾವ ಬೀರುತ್ತವೆ. ನವಗ್ರಹಗಳ ಪೈಕಿ ಅತಿ ವೇಗವಾಗಿ ಚಲಿಸುವ ಗ್ರಹಗಳಲ್ಲಿ ಚಂದ್ರ ಮೊದಲನೆಯವನು. ರವಿ ಎರಡನೆಯವನು. ಚಂದ್ರನು ಭೂಮಿಯ ಸುತ್ತ ಪೂರ್ತಿಯಾಗಿ ಸುತ್ತಿ ಬರುವುದಕ್ಕೆ ಕೇವಲ ಮೂವತ್ತು ದಿವಸಗಳನ್ನು ತೆಗೆದುಕೊಂಡರೆ (360 ಡಿಗ್ರಿಗಳಷ್ಟು ಸಂಚಾರ ಮಾಡುವುದಕ್ಕೆ), ರವಿಯು ಮೂರು ನೂರ ಅರವತ್ತು ದಿನಗಳನ್ನು (ನಿಖರವಾಗಿ 365¼ ದಿನಗಳನ್ನು) ತೆಗೆದುಕೊಳ್ಳುತ್ತಾನೆ. ಚಂದ್ರನು ಒಂದು ರಾಶಿಯಿಂದ ಇನ್ನೊಂದು ರಾಶಿಗೆ ಹೋಗುವ ಕಾಲ ಕೇವಲ 2¼ ದಿವಸಗಳಾದರೆ, ರವಿಗೆ 30 ದಿವಸಗಳು ಬೇಕು. ಇದು ಖಗೋಳಶಾಸ್ತ್ರದ ವಿವರಣೆ. ಭೂಮಿ ಸೂರ್ಯನ ಸುತ್ತ ತಿರುಗುವಾಗ ಉತ್ತರ ಧ್ರುವದಿಂದ ಉಂಟಾದ ಕೋನ (angle)ಗಳ ವ್ಯತ್ಯಾಸದಿಂದ ಋತುಗಳುಉಂಟಾಗುತ್ತವೆ. ಅಂದರೆಬೇಸಿಗೆ, ಛಳಿ, ಮಳೆ ಇತ್ಯಾದಿಯಾಗಿ ಹವಾ ಬದಲಾವಣೆಯಾಗುತ್ತದೆ. ಈ ಬದಲಾವಣೆಯು ಮನುಷ್ಯನ ಶರೀರದಲ್ಲಿರುವ ಮತ್ತು ಸದಾ ಕೆಲಸ ಮಾಡುತ್ತಿರುವ ಅಂಗಗಳ ಮೇಲೆ ಪ್ರಭಾವ ಬೀರಿ ಆರೋಗ್ಯಕ್ಕೆ ಧಕ್ಕೆಯುಂಟಾಗಬಹುದು,

ಹಾಗೆಯೇ ರವಿಯು ನಕ್ಷತ್ರಗಳಲ್ಲಿ ಸಂಚರಿಸುವಾಗ ಆ ನಕ್ಷತ್ರಗಳಿಗೆ ಮತ್ತು ಅಧಿದೇವತೆಗಳಿಗೆ ಹೇಳಿರುವ ಗುಣಗಳ ಪ್ರಭಾವವು ಮನುಷ್ಯರ ಮೇಲೆ ಬೀಳುವುದು ಸಹಜ ಮತ್ತು ಅದೇ ಕಾಲದಲ್ಲಿ ಚಂದ್ರನ ಪ್ರಭಾವವೂ ಮನುಷ್ಯರ ಮೇಲೆ ಬೀಳುತ್ತದೆ ಇದರಿಂದ ಋತುಧರ್ಮಕ್ಕನುಗುಣವಾಗಿ ರೋಗಗಳು ಬರುವ ಅವಕಾಶವಿರುತ್ತದೆ. ಅಮಾವಾಸ್ಯೆ ಮತ್ತು ಪೌರ್ಣಮಿ ದಿವಸಗಳಲ್ಲಿ ಚಂದ್ರನ ಸ್ಥಾನಬಲದಿಂದ, ಅಂದರೆ ರವಿ, ಚಂದ್ರ ಮತ್ತು ಭೂಮಿ ಕೇಂದ್ರದಲ್ಲಿರುವುದರಿಂದ ಮನುಷ್ಯನ ಮನಸ್ಸಿನ ಮೇಲೆ ಪರಿಣಾಮ ವಾಗುತ್ತದೆ. ಸಮುದ್ರದಲ್ಲಿ ಉಬ್ಬರವಿಳಿತಗಳಾಗುವುದನ್ನೂ ಮತ್ತು ಮನೋವಿಕಲರು (mentally retorted persons) ಹೆಚ್ಚಿಗೆ ಉದ್ರೇಕ ಗೊಳ್ಳುವುದನ್ನೂ ನಾವು ಆ ದಿವಸಗಳಲ್ಲಿ ನೋಡಬಹುದು. ಸೂರ್ಯ, ಚಂದ್ರ ಮತ್ತು ಭೂಮಿ ಒಂದು ಗೊತ್ತಾದ ಕೋನಕ್ಕೆ ಬಂದಾಗ ಗ್ರಹಣ ಹೇಗೆ ಉಂಟಾಗುತ್ತದೆಯೋ ಹಾಗೆಯೇ ಇವು ಬೇರೆಬೇರೆ ಕೋನಗಳಿಗೆ ಬಂದಾಗ ಇವುಗಳ ಪ್ರಭಾವವು ಬೇರೆಬೇರೆಯಾಗಿರುತ್ತದೆ. ಮನಃಕಾರಕನಾದ ಚಂದ್ರನ ವಾರ, ದಿನ,ದಲ್ಲಿ ಚಂದ್ರನ ಪ್ರಭಾವ ಮನಸ್ಸಿನ ಮೇಲೆ ಮತ್ತು ದೇಹದ ಮೇಲೆ ಹೆಚ್ಚು ಇರುತ್ತದೆ. ಅದೇ ಸಮಯದಲ್ಲಿ ರವಿಯಿಂದಲೂ ಉಂಟಾಗುವ ಕೆಲವು ಪ್ರಭಾವವೂ ಇರುತ್ತಾದ್ದರಿಂದ ಇದನ್ನು ನಿವಾರಣೆ ಮಾಡುವ ಉದ್ದೇಶದಿಂದ ನಮ್ಮ ಮಹರ್ಷಿಗಳು ಸ್ನಾನ, ಜಪ, ಪೂಜೆ, ಹೋಮ, ಆಹಾರ ನಿಯಮ ಇತ್ಯಾದಿಗಳನ್ನು ಗೊತ್ತುಮಾಡಿರುತ್ತಾರೆ.

ಈಶ್ವರ-ಪ್ರಕೃತಿ (ಜೀವ) ಎಂಬ 'ಜ್ಞಾನ', ಆತ್ಮದ ಉನ್ನತಿಗಾಗಿ ಮಾಡುವ ಕಾರ್ಯವೆಂಬ 'ಕರ್ಮ', ಪರಮಾತ್ಮನಲ್ಲಿ ಆತ್ಮನನ್ನು ಸೇರಿಸುವ 'ಉಪಾಸನೆ' ಈ ಮೂರರ ಮಿಶ್ರಣವು ಈಗಾಯತ್ರೀ ಮಂತ್ರದಲ್ಲಿದೆ. ಪೂರ್ಣ ಶ್ರದ್ಧೆ, ವಿಶ್ವಾಸ ಮತ್ತು ವಿಧಿಗನುಸಾರ ಉಪಾಸನೆ ಮಾಡುವ ಸಾಧಕನು ತನ್ನ ಉದ್ಧಾರ ಮಾತ್ರವಲ್ಲದೆ ಜಗತ್ತಿನ ಕಲ್ಯಾಣವನ್ನೂ ಸಾಧಿಸುತ್ತಾನೆ. ಈಕೆಯ ಅಮೃತ ಜಲಪಾನ ಮಾಡುವವನು ನಿಸ್ಸಂದೇಹವಾಗಿ ಪರಮಾತ್ಮನ ಕೃಪೆಗೆ ಪಾತ್ರನಾಗುವನು.

ಮನಸ್ಸನ್ನು ಒಂದುಕಡೆ ಕೇಂದ್ರೀಕರಿಸಬೇಕಾದರೆ ಒಂದು ಸುಂದರ ಕಲ್ಪನೆ ಸಾಕಾರಮೂರ್ತಿಯಾಗಿ ಮುಂದೆ ನಿಂತರೆ ಸಾಧ್ಯವಾದೀತೆಂದು ಮಹರ್ಷಿಗಳು ಕಲ್ಪಿಸಿದ ಸುಂದರ ತತ್ತ್ವಾರ್ಥದ ಚಿತ್ರವಿದು ಈ ಗಾಯತ್ರೀ ಈಕೆಯ ಶಕ್ತಿ, ಜ್ಞಾನ–ದಿಗಂತದಷ್ಟೇ ವಿಸ್ತಾರ, ಆಳ. ಈಕೆ ಭೂಲೋಕದ

ಕಾಮಧೇನು, ಕಲಿಯುಗದ ಕಲ್ಪವೃಕ್ಷ.

ಪ್ರಣವ, ವ್ಯಾಹೃತಿ ಮತ್ತು ಮಂತ್ರದ ಮೂರು ಪಾದಗಳೇ ಶ್ರೀ ಗಾಯತ್ರಿಯ ಐದು ಮುಖಗಳು (ಪಂಚಮುಖೀ), ಐದು ಜನ ದೇವತೆಗಳು ಈ ಮುಖದಪ್ರತೀಕ. ಪಂಚತತ್ತ್ವಗಳು, ಪಂಚಪ್ರಾಣ, ಪಂಚಉಪಪ್ರಾಣ, ಪಂಚಯಜ್ಞ, ಪಂಚಾಗ್ನಿ, ಪಂಚಕ್ಲೇಶ, ಪಂಚಮಾತೃಕೆಯರು—ಹೀಗೆ ಪಂಚಕಗಳ ರಹಸ್ಯ–ತತ್ತ್ವಜ್ಞಾನ–ಈ ಮಂತ್ರದಿಂದ ಗೊತ್ತಾಗುವುದು. ಈ ಮುಖದ ತತ್ತ್ವಗಳನ್ನರಿತರೆ ಸಾಧಕನು ತಾತ್ತ್ವಿಕ ಜಗತ್ತಿನಲ್ಲಿ ಆತ್ಮಜ್ಞಾನ, ಆತ್ಮದರ್ಶನ, ಆತ್ಮಾನುಭವ, ಆತ್ಮಲಾಭ ಹಾಗೂ ಆತ್ಮಕಲ್ಯಾಣಗಳ ಅಧಿಕಾರಿಯಾಗುತ್ತಾನೆ. ದಶದಿಕ್ಕುಗಳ ಸಂಕೇತವೇ ಹತ್ತು ಭುಜಗಳು. ಬದುಕಿನ ವಿಕಾಸಕ್ಕೂ ಹತ್ತುದಿಕ್ಕುಗಳುಂಟು. ಈಕೆ ಬ್ರಹ್ಮಜ್ಞಾನವನ್ನು ನೀಡುವ ದೇವತೆ 'ಬ್ರಹ್ಮಾಣಿ.' ಯಾವುದೇ ದೇವತೆಯ ಜೀವನ ಅಥವಾ ಪದಾರ್ಥದ ಶಕ್ತಿಯ ಸಾರವೇ ಬ್ರಾಹ್ಮೀ. ಶ್ರೀಗಾಯತ್ರೀ ಬ್ರಹ್ಮಜ್ಞಾನದ ಕೇಂದ್ರವಾಗಿದ್ದಾಳೆ. ವಿಷ್ಣುವಿನ ರಜೋಗುಣ ಶಕ್ತಿಯೇ ವೈಷ್ಣವೀ. ವಿಷ್ಣುವಿನ ವಾಹನ ಗರುಡ. ವೈಷ್ಣವಿಯ ವಾಹನವೂ ಗರುಡನೇ. ಶಿವನ ತಲೆಯಲ್ಲಿ ಇರುವ ಚಂದ್ರ ತತ್ತ್ವಜ್ಞಾನದ ಪ್ರತೀಕ. ಗಾಯತ್ರಿಯು ಶಾಂಭವೀ ಸ್ವರೂಪವನ್ನು ಧರಿಸಿರುವ ಶಿವನ ಶಕ್ತಿಯನ್ನು ಹೊಂದಿದ್ದಾಳೆ. ಶಿವನಿಗೆ ಮೂರು ಕಣ್ಣುಗಳು. ಆತನ ಮೂರನೇ ಕಣ್ಣು ಆತ್ಮಜ್ಞಾನದಿಂದ ಪರಿಪೂರ್ಣವಾಗಿದೆ. ಇದೇ ಶಾಂಭವೀ ಶಕ್ತಿ. ಈ ಆದಿಶಕ್ತಿಗೆ 'ಹ್ರೀಂ', 'ಶ್ರೀಂ' ಮತ್ತು 'ಕ್ಲೀಂ' ಎಂಬ ಮೂರು ರೂಪಗಳು. 'ಹ್ರೀಂ'—ಎಂದರೆ ಸರಸ್ವತೀ, 'ಶ್ರೀಂ'—ಎಂದರೆ ಲಕ್ಷ್ಮೀ ಮತ್ತು 'ಕ್ಲೀಂ—'ಎಂದರೆ ಕಾಳಿ. ಈ ರೀತಿಯಾದ ಮೂರು ಶಕ್ತಿಗಳ ಸಂಗಮದಿಂದ ಸಾಧಕನು ತಾಳ್ಮೆ, ಮೃದುಸ್ವಭಾವ, ತೀಕ್ಷ್ಣಬುದ್ಧಿ, ಸದಾ-ಸಂತೃಪ್ತಿ, ಮನೋವಿಕಾರರಹಿತನಾಗಿ ಸರ್ವದಾ ಶ್ರೀಮಂತನಾಗಿರುತ್ತಾನೆ.

ಆತ್ಮನನ್ನು ಪರಮಾತ್ಮನಲ್ಲಿ ಸೇರಿಸುವುದೇ ಯೋಗದ ಉದ್ದೇಶ. ಮುಕ್ತಿಯೇ ಪುರುಷಾರ್ಥದ ಲಕ್ಷ್ಯ. ಇದೆಲ್ಲವೂ ಈಕೆಯ ಉಪಾಸನೆಯಿಂದ ಲಭಿಸುತ್ತವೆ.

ನಮ್ಮ ಶರೀರವು ಪಂಚಭೂತಗಳಿಂದ ಮಾಡಲ್ಪಟ್ಟಿದೆ ಎಂದು ಹಿಂದೆಯೇ ಹೇಳಿದೆ. ಈ ಪಂಚಭೂತಶಕ್ತಿಗಳೂ, ದಶದಿಕ್ಕುಗಳಿಂದ ಹೊರಡುವ ಶಕ್ತಿ (cosmic rays), ನವಗ್ರಹಗಳಿಂದ ಹೊರಡುವ ಕಿರಣಗಳು (cosmic-

rays)ಇವು ಮನುಷ್ಯರ ಮೇಲೆಪ್ರಭಾವ ಬೀರುತ್ತವೆ. ಗಾಯತ್ರೀ ಮಂತ್ರದ ಇಪ್ಪತ್ತುನಾಲ್ಕು ಅಕ್ಷರಗಳ ಉಚ್ಚಾರಣೆಯು ಈ ದೇಹದ ಇಪ್ಪತ್ತುನಾಲ್ಕು ಮುಖ್ಯವಾದ ಅಂಗಗಳ ಮೇಲೆ ಪ್ರಭಾವ ಬೀರುವುದು. ಈ ಶಕ್ತಿಗಳನ್ನೆಲ್ಲಾ ನಿಯಂತ್ರಿಸಿ, ವಾತ (ವಾಯು), ಪಿತ್ತ (ಅಗ್ನಿ) ಮತ್ತು ಶ್ಲೇಷ್ಮ (ಜಲ)— ಈ ಮೂರು ದೋಷಗಳನ್ನು ನಿಯಂತ್ರಿಸುವುದೇ ಗಾಯತ್ರೀಮಂತ್ರದ ಜಪದ ಗುಟ್ಟು. ಇದರ ವಿವರ ಹೀಗಿದೆ: ೧. ತತ್–ಅಗ್ನಿಯು ಅಂಗುಷ್ಠದಿಂದ ಪ್ರಾರಂಭವಾಗಿ ದೇಹದಾದ್ಯಂತ ವ್ಯಾಪಿಸುತ್ತದೆ. ೨. ಸ–ಚಲನೆಗೆ ಸಹಕಾರಿ ಯಾಗುತ್ತದೆ. ೩. ವಿ–ದೇಹದ ಭಾರವನ್ನು ಹೊರುವ ಶಕ್ತಿ ಬರುತ್ತದೆ; ಅಂಗ ಶಕ್ತಿಯುತವಾಗುತ್ತದೆ. ೪. ತು–ಶರೀರನಿಲ್ಲುವುದಕ್ಕೆಸಹಕಾರಿಯಾಗು ತ್ತದೆ. ೫. ರ್ವ–ದೇಹದ ಭಾರ ಹೊರಲು ಮತ್ತು ಶರೀರ ನಿಲ್ಲಲು ಸಹಕಾರಿ ಯಾಗುತ್ತದೆ. ೬. ರೇ-ಮೂತ್ರ ಜನಕಾಂಗಗಳ ಮತ್ತು ಮೂತ್ರಕೋಶಗಳ ಮೇಲೆ ಹತೋಟಿ ಬರುತ್ತದೆ. ೭. ಣೀ–ಗರ್ಭೋತ್ಪತ್ತಿಗೆ ಬೇಕಾದ ಶುಕ್ರ ಧಾತುವು ಇಲ್ಲಿರುವ ಸಣ್ಣ ಗ್ರಂಥಿಗಳಲ್ಲಿ ಉತ್ಪತ್ತಿಯಾಗಲು ಸಹಾಯ ವಾಗುತ್ತದೆ. ೮. ಯಂ–ಗೊತ್ತಾದ ಪ್ರಮಾಣದಲ್ಲಿ ಜಲರೂಪವಾದ ರಸ ಗಳು ಉತ್ಪತ್ತಿಯಾಗಲು ಆ ಅಂಗಗಳನ್ನು ಬಲಪಡಿಸುತ್ತದೆ. ೯. ಭ–ಗರ್ಭ ದಲ್ಲಿ ಭ್ರೂಣಕ್ಕೆ ಹೊಕ್ಕಳಿನ ಮೂಲಕ ಆಹಾರ ಸರಬರಾಜಾಗುವುದನ್ನು ನಿಯಂತ್ರಿಸುತ್ತದೆ. (೧೦) ಗೋ–ನಾದ(ಶಬ್ದ)ವನ್ನು ನಿಯಂತ್ರಿಸುತ್ತದೆ. (೧೧) ದೇ–ಶ್ವಾಸಕೋಶಗಳು ಮತ್ತು ಹೃದಯದ ಕ್ರಿಯೆಗಳನ್ನುನಿಯಂತ್ರಿ ಸುತ್ತದೆ. (೧೨) ವ–ಹೃದಯದಲ್ಲಿ ರಕ್ತ ಚಲನೆಯನ್ನು ನಿಯಂತ್ರಿಸುತ್ತದೆ. (೧೩) ಸ್ಯ–ಕಂಠವನ್ನು ನಿಯಂತ್ರಿಸಿ ಬಲಪಡಿಸುತ್ತದೆ. (೧೪) ಧೀ–ಒಳ್ಳೆಯ ವರ್ಚಸ್ಸು ಹಾಗೂ ತೇಜಸ್ಸು ಬರಲು ಸಹಕರಿಸುತ್ತದೆ. (೧೫) ಮ–ವೇದಾ ಧ್ಯಯನ, ಮಂತ್ರೋಚ್ಚಾರಣೆಯನ್ನು ಸುಗಮಗೊಳಿಸುತ್ತದೆ. (೧೬) ಹಿ– ಕಣ್ಣಿಗೆ ಸಂಬಂಧಪಟ್ಟ ನರಗಳನ್ನು ಉತ್ತೇಜಿಸಿ ದೃಷ್ಟಿದೋಷವನ್ನು ನಿವಾರಿ ಸುತ್ತದೆ. (೧೭) ಧಿ–ಕಣ್ಣಿನ ದೃಷ್ಟಿಯನ್ನು ಚುರುಕಗೊಳಿಸುತ್ತದೆ. (೧೮) ಯೋ–ಜ್ಞಾಪಕ ಶಕ್ತಿಯನ್ನು ವೃದ್ಧಿಪಡಿಸುತ್ತದೆ. (೧೯) ಯೋ– ಹಣೆಯಲ್ಲಿ ಹರಿದು ಹೋಗುವ ನರಗಳನ್ನು ಬಲಪಡಿಸುತ್ತದೆ. (೨೦) ನಃ– ತೇಜಸ್ಸನ್ನು ಪಡೆಯಲು ಸಹಕಾರಿಯಾಗಿದೆ. (೨೧) ಪ್ರ–ಶರೀರದಲ್ಲಿರುವ ನರಗಳೆಲ್ಲಕ್ಕೂ ಸ್ಥಳವಾಗಿ ಆ ನರಗಳನ್ನು ಉದ್ರೇಕಿಸಿ ಬಲಪಡಿಸು ತ್ತದೆ. (೨೨) ಚೋ–ಜ್ಞಾನಕೇಂದ್ರವನ್ನು ಉದ್ರೇಕಿಸಿ ಬಲಪಡಿಸುತ್ತದೆ.



1. ತತ್ ಪಾದದ ಅಂಗುಷ್ಠಗಳು
2. ಸ ಹಿಮ್ಮಡಿಗಳು
3. ವಿ ಕಣಕಾಲುಗಳ ಮೇಲುಭಾಗ
4. ತು ಮೊಣಕಾಲಿನ ಮಧ್ಯಭಾಗ
5. ವ ತೊಡೆ ಪ್ರದೇಶ
6. ರೇ ~~[illegible]~~ ಗುಹ್ಯಪ್ರದೇಶ
7. ಣಿ ~~[illegible]~~ ವೃಷಣ
8. ಯಂ ~~[illegible]~~ ನಡು
9. ಭ ನಾಭಿ (ಹೊಕ್ಕಳು)
10. ರ್ಗೋ ಉದರ (ಹೊಟ್ಟೆ)
11. ದೇ ಸ್ತನಗಳ ಪ್ರದೇಶ (ಮೊಲೆಗಳು)
12. ವ ಹೃದಯ
13. ಸ್ಯ ಕಂಠ
14. ಧೀ ಮುಖ
15. ಮ ದವಡೆ
16. ಹಿ ಮೂಗಿನ ತುದಿ
17. ಧಿ ಕಣ್ಣುಗಳು
18. ಯೋ ಹುಬ್ಬುಗಳ ಮಧ್ಯಭಾಗ
19. ಯೋ ಹಣೆ (ನೆತ್ತಿ)
20. ನಃ ಪಶ್ಚಿಮ ಮುಖ (ಹಿಂಭಾಗ)
21. ಪ್ರ ಉತ್ತರ ಮುಖ (ಎಡಭಾಗ)
22. ಚೋ ದಕ್ಷಿಣ ಮುಖ (ಬಲಭಾಗ)
23. ದ ಪೂರ್ವ ಮುಖ (ಕಪಾಲ)
24. ಯಾತ್ ಊರ್ಧ್ವ ಮುಖ (ಮೇಲುಭಾಗ)

ಶರೀರದಲ್ಲಿ ಶ್ರೀಗಾಯತ್ರೀಮಂತ್ರದ
ಇಪ್ಪತ್ತುನಾಲ್ಕು ಅಕ್ಷರಗಳ ಸ್ಥಾನಗಳು.

(೨೩) ದೆ-ಬುದ್ಧಿ ಇತ್ಯಾದಿಗಳಿಗೆ ಇದು ಕೇಂದ್ರ. ಇದನ್ನು ಹೆಚ್ಚಿಸಿಕೊಳ್ಳಲು ಸಹಕಾರಿಯಾಗಿದೆ. (೨೪) ಯಾತ್-ವಿದ್ಯುತ್ ಉತ್ಪಾದಿಸಲೂ ಮತ್ತು ವಿಸರ್ಜಿಸಲೂ ಇದು ಮುಖ್ಯ ಕೇಂದ್ರ, ಇದನ್ನು ಬಲಪಡಿಸುತ್ತದೆ.

ನಮ್ಮ ಸುತ್ತಲೂ ವಿಶ್ವವು ವಿಸ್ತಾರವಾಗಿ ಹರಡಿಕೊಂಡಿರುವುದು. ಇದರಲ್ಲಿ ಕಲ್ಲುಬಂಡೆಗಳೂ, ಗಿಡಮರಗಳೂ, ಪಶುಪಕ್ಷಿಗಳೂ, ಮನುಷ್ಯರೇ ಮೊದಲಾದ ಪ್ರಾಣಿಗಳೂ ತುಂಬಿವೆ. ಇವೆಲ್ಲವೂ ಮುಟ್ಟಿದರೆ ಸ್ಪರ್ಶಕ್ಕೆ ಅಳವಟ್ಟು ಗಡುಸಾಗಿರುವಂತೆ ತೋರುತ್ತವೆ. ಆದರೆ ವೈಜ್ಞಾನಿಕವಾಗಿ ನೋಡುವುದಾದರೆ ಇವುಗಳು ಗಟ್ಟಿಮುಟ್ಟಾಗಿಲ್ಲ ಎಲ್ಲವೂ ಸ್ಪಂದನಗಳ (vibrations)ರೂಪ,ಪರಿಣಾಮ,ಚಲನಶಕ್ತಿ(energy)ಗಳರೂಪಾಂತರ. ಸ್ಪಂದನವೇ ಆಕಾರದ ಮೂಲ. ಸ್ಪಂದನ ಶಕ್ತಿಯನ್ನು ಬಿಟ್ಟು ಪದಾರ್ಥ ಎಂಬುದೇ ಇಲ್ಲ. ಇವುಗಳ ಹಿಂದೆ, ಇವುಗಳನ್ನು ಹಾಗೆ ರೂಪಿಸುವ ವಿಶಿಷ್ಟ ಸ್ಪಂದನವೊಂದಿದೆ. ಸ್ಪಂದನ, ಆಕಾರ ಮತ್ತು ಚೈತನ್ಯ (ಜ್ಞಾನ)—ಇವು ಮೂರೂ ಒಂದೇ ವಸ್ತು. ಸ್ಪಂದನದಲ್ಲಿ ಬದಲಾವಣೆ ಮಾಡುವುದರ ಮೂಲಕ ಆಕಾರದಲ್ಲಿಯೂ ಬದಲಾವಣೆ ಮಾಡಬಹುದು. ಒಂದು ಇನ್ನೊಂದರ ಮೇಲೆ ಪ್ರಭಾವ ಉಂಟುಮಾಡಬಲ್ಲುವು. ಈ ಸಂಬಂಧ ಮೂಲಕ್ರಿಯೆಯಲ್ಲಿಯೇ ರೂಢವಾಗಿದೆ. ಇದನ್ನು ಮಿಸೆಸ್ ವಾಲ್ಟ್ಸ್ ಹ್ಯೂಸ್ (Mrs. Walts Hughes) ಎಂಬಾಕೆ ಸ್ಥೂಲ ಚಕ್ಷುಸ್ಸಿಗೂ ಕಾಣುವಂತೆ ಒಂದಾವರ್ತಿ ಬಹಿರಂಗವಾಗಿ 'ಐಡೋಫೋನ್' (Eidophone) ಗಾಯನ ಯಂತ್ರವನ್ನು ನುಡಿಸಿದಾಗ ತದನುಗತವಾದ ಆಕಾರವು ಎದುರಿನ ಮಳಲಿನ ಹಲಗೆಯ ಮೇಲೆ ರೂಪುಗೊಳ್ಳುತ್ತಿತ್ತು. ಆಕೆಯು ಭೈರವ ರಾಗವನ್ನು ನುಡಿಸಿದಾಗ ಶ್ವಾನವನ್ನು ಜೊತೆಯಲ್ಲಿ ಉಳ್ಳ ಭೈರವ ದೇವರ ವಿಗ್ರಹವು ಮಳಲಿನ ಮೇಲೆ ರೂಪುಗೊಂಡಿತು. ಈ ಅದ್ಭುತ ದೃಶ್ಯವನ್ನು ನೋಡಿ ಅಲ್ಲಿ ನೆರೆದಿದ್ದ ಪ್ರೇಕ್ಷಕರು ಆಶ್ಚರ್ಯಚಕಿತರಾದರು. ಜಪವು ಈ ಸ್ಪಂದನದ ಮೂಲಕ ಕ್ರಿಯೆ ಉಂಟುಮಾಡುತ್ತದೆ. ಈ ಸ್ಪಂದನಗಳು ಜೀವಕೋಶಗಳ ಮೇಲೆ ಪರಿಣಾಮ ಬೀರುವುವು. ಬಾಯಲ್ಲಿ ನುಡಿದ ಮಂತ್ರದ ಅಕ್ಷರ ಒಂದೊಂದೂ ದೇಹಾದ್ಯಂತವೂ ನಖಶಿಖಾಂತವಾಗಿ ನುಡಿಯುತ್ತಿರುತ್ತದೆ. ಪಿಯಾನೋ ಅಥವಾ ಹಾರ್ಮೋನಿಯಂನಲ್ಲಿಒಂದು ರೀಡ್ ಒತ್ತಿದರೆ ಒಂದೇ ಶಬ್ದ ಹೇಗೆ ಬರುವುದೋ ಹಾಗೆ ಮಂತ್ರದಲ್ಲಿನ ಪ್ರತಿಯೊಂದು ಅಕ್ಷರವೂ ಅವಕ್ಕೆ ಸಂಬಂಧಪಟ್ಟ ಅಂಗಗಳ ಮೇಲೆ ಹಾಗೂ ನರಗಳ ಮೇಲೆ (ಶಬ್ದ

ತರಂಗಗಳ ಮೂಲಕ) ಉತ್ತೇಜನ ಕೊಡುವುದರಿಂದ ಪ್ರಭಾವ ಬೀರುತ್ತದೆ. ವ್ಯಕ್ತವಾಗಿರುವ ಈ ವಿಶ್ವವೆಲ್ಲವೂ ಸರ್ವವ್ಯಾಪಿಯೂ, ಸರ್ವಾತ್ಮಕವೂ ಆದ ಒಂದು ಸ್ಪಂದನದ ಪರಿಣಾಮ. ಆ ಮೂಲ ಸ್ಪಂದನವನ್ನು 'ನಾದ' ಎಂದು ಕರೆಯುತ್ತೇವೆ. ಕೆಲವು ಧ್ವನಿಮೇಳಗಳಲ್ಲಿ ಅಡಗಿರುವ ಶಕ್ತಿಗಳನ್ನು ಮಾನವನ ಜ್ಞಾನವಿಕಾಸಕ್ಕೆ ಅಳವಡಿಸುವ ಯೋಗಶಾಸ್ತ್ರದ ಭಾಗಕ್ಕೆ 'ಮಂತ್ರಯೋಗ' ಎಂದು ಹೆಸರು. ಆದುದರಿಂದ ಮಂತ್ರವೂ ದೇವತೆಯೂ ಅಭಿನ್ನ.

ಭಗವಂತನ ಸೃಷ್ಟಿಯಲ್ಲಿ ಮನುಷ್ಯನ ದೇಹವು ಒಂದು ವಿಚಿತ್ರವಾದ ಪರಿಪೂರ್ಣ ಯಂತ್ರ. ಪ್ರಕೃತಿಯು ಕಾಲಕಾಲಕ್ಕೆ ತಕ್ಕಂತೆ ಹೇಗೆ ನಡೆದುಕೊಳ್ಳುವುದೋ ಅದೇ ರೀತಿ ಮನುಷ್ಯನ ದೇಹವೂ ಸಹ ಅನೇಕ ವಿಧದಲ್ಲಿ ವಿವಿಧ ಅಂಗಗಳು ಇಪ್ಪತ್ತುನಾಲ್ಕು ಗಂಟೆಯೂ ತಪ್ಪದೆ ಕೆಲಸ ಮಾಡುತ್ತಿರುತ್ತವೆ ; ಮಾಡುತ್ತಿರಬೇಕು. ಇದು ಪ್ರಕೃತಿ ನಿಯಮ. ಈ ಕೆಲಸಕ್ಕೆ ಮನುಷ್ಯನ ದೇಹದಾದ್ಯಂತ ಹರಡಿಕೊಂಡಿರುವ ಅಸಂಖ್ಯಾತ ನರಗಳ ಸಹಾಯ ಬೇಕು. ಒಂದು ಶಬ್ದವನ್ನು ಉಚ್ಚಾರಣೆ ಮಾಡುವಾಗ ಆ ಶಬ್ದಕ್ಕೆ ಸಂಬಂಧಪಟ್ಟ ಎಪ್ಪತ್ತುನಾಲ್ಕು ಸ್ನಾಯುಗಳು (set of museles) ಕೆಲಸ ಮಾಡುತ್ತವೆಂದು ವೈದ್ಯ ಪರಿಣತರು ಹೇಳುತ್ತಾರೆ. ಗಾಯತ್ರಿಯಲ್ಲಿರುವ ಇಪ್ಪತ್ತುನಾಲ್ಕು ವರ್ಣಗಳಿಗೆ ಸಂಬಂಧಪಟ್ಟ ನರಗಳಿಗೆ ಶಬ್ದತರಂಗ(vibrations)ಗಳ ಮೂಲಕ ಆ ನರಗಳಿಗೆ ಅನ್ವಯಿಸಿ ವ್ಯಾಯಾಮ ಕೊಟ್ಟಹಾಗೆ ಆಗಿ ಅವು ಪ್ರಭಾವ ಬೀರುತ್ತವೆ. (ಚಿತ್ರ ನೋಡಿ : ಪುಟ 224)

ಮನುಷ್ಯನ ದೇಹವು ಒಂದು ವಿದ್ಯುತ್ ಕೇಂದ್ರ. ಇಲ್ಲಿ ಸದಾಕಾಲವೂ ವಿದ್ಯುತ್ ಉತ್ಪಾದನೆಯೂ, ವಿಸರ್ಜನೆಯೂ ಆಗುತ್ತಿರುತ್ತದೆ ಎಂದು ಹಿಂದೆ ವಿವರಿಸಿದೆ. ಉತ್ಪಾದನೆ, ವಿಸರ್ಜನೆಗಳು ಕೇವಲ ಕೆಲವು ಅಂಗಗಳ ಮೂಲಕ ಮಾತ್ರ ಸಾಧ್ಯ. ಅಕ್ಷರಗಳನ್ನು ಉಚ್ಚಾರಣೆಮಾಡುವಾಗ ಆಗುವ ತರಂಗ(vibrations)ಗಳ ಮೂಲಕ ಆ ಅಂಗಗಳೂ ಮತ್ತು ಅವುಗಳಿಗೆ ಸಂಬಂಧಪಟ್ಟ ನರಗಳೂ ಹೆಚ್ಚು ಉತ್ತೇಜಿತವಾಗಿ ಬಲಗೊಳ್ಳುತ್ತವೆ (Electric type writerನಲ್ಲಿ ಟೈಪ್ ಆಗುವ ಹಾಗೆ). ಇದನ್ನು 'ಎಲೆಕ್ಟ್ರೋ ಮ್ಯಾಗ್ನಟಿಸಮ್' ಎಂದು ಕರೆಯುತ್ತಾರೆ. ಈ ರೀತಿ ಪ್ರತಿನಿತ್ಯವೂ ಒಂದು ನಿಯಮಬದ್ಧ ರೀತಿಯಲ್ಲಿ ಬಲಗೊಳ್ಳುತ್ತಿದ್ದರೆ ಕಾಲ

ಕ್ರಮೇಣ ಪೂರ್ಣ ಶರೀರದ ಮೇಲೂ, ಹಾಗೂ ಮನಸ್ಸಿನ ಮೇಲೂ ಹತೋಟಿ ಬರುತ್ತದೆ. ಆದರಿಂದ ದಿವ್ಯಶಕ್ತಿ ಬರುತ್ತದೆ ಮತ್ತು ಆರೋಗ್ಯವೂ ಹೆಚ್ಚುತ್ತದೆ. ಈ ಮಂತ್ರವನ್ನು ಹೆಚ್ಚುಹೆಚ್ಚು ಸಂಖ್ಯೆಯಲ್ಲಿ ಜಪಿಸುವುದರಿಂದ ದೇಹದ ಎಲ್ಲಾ ಭಾಗಗಳೂ ಬಲಗೊಂಡು ರೋಗಗಳನ್ನು ತಡೆಯುವ ಶಕ್ತಿಯನ್ನುಗಳಿಸುತ್ತವೆ. ಹಾಗೂ ವಂಶಾವಳಿಯ (hereditary) ಮತ್ತು ದೀರ್ಘಕಾಲದ ಕಾಯಿಲೆಗಳು (chronic diseases) ಗುಣವಾಗುತ್ತವೆ. ಇದು ನಮ್ಮ ಮಹರ್ಷಿಗಳು ನಮಗೆ ನೀಡಿರುವ ಒಂದು ಪ್ರಕೃತಿ ಚಿಕಿತ್ಸೆ (nature cure)ಎಂದು ಹೇಳಬಹುದು. ಇದಲ್ಲದೆ ಸಂತಾನಾಭಿವೃದ್ಧಿಯೂ ಆಗುವುದು. ಮಕ್ಕಳಾಗದಿರುವುದಕ್ಕೆ ಕಾರಣವಾದ 'ಸೆಕ್ಸ್ ಹಾರ್ಮೋನ್ಸ್' ಗಳ ಉತ್ಪಾದನೆಗೆ ಕಾರಣವಾದ ಗ್ರಂಥಿಯ (ಗ್ಲಾಂಡ್ಸ್) ನಿಶ್ಯಕ್ತಿಯನ್ನು ಈ ಮಂತ್ರದ ಏಳನೇ ಅಕ್ಷರವಾದ 'ಣೀ' ಎಂಬುದು ವೃಷಣಕ್ಕೆ ಸಂಬಂಧಪಟ್ಟ ನರಗಳನ್ನು ತರಂಗಗಳ ಮೂಲಕ ಬಲಪಡಿಸಿ ಗರ್ಭೋತ್ಪತ್ತಿಗೆ ಬೇಕಾದ ಶುಕ್ರಧಾತುವನ್ನು ಉತ್ಪಾದಿಸಲು ಸಹಾಯಮಾಡುತ್ತದೆ. ಇದು ಗರ್ಭೋತ್ಪತ್ತಿಗೆ ಸಹಾಯವಾಗುತ್ತದೆ.

ಈ ರೀತಿಯಾಗಿ ಗಾಯತ್ರೀ ಮಂತ್ರದ ಉಚ್ಚಾರಣೆಯಿಂದ ಮುಖ್ಯವಾದ ಮತ್ತು ಅತ್ಯಾವಶ್ಯಕವಾದ ಇಪ್ಪತ್ತುನಾಲ್ಕು ಅಂಗಗಳು ಬಲಗೊಳ್ಳುತ್ತವೆ ಮತ್ತು ಪ್ರತಿನಿತ್ಯದ ಕಾರ್ಯಾಚರಣೆಯಿಂದ ಅವು ನಿರ್ದಿಷ್ಟವಾದ ಸ್ಥಿತಿಗೆ ಬಂದು ಮನುಷ್ಯನಿಗೆ ಅತೀಂದ್ರಿಯಶಕ್ತಿ ಬರುತ್ತದೆ.

ಹೀಗೆಯೇ ಈ ಮಂತ್ರೋಚ್ಚಾರಣೆಯಿಂದ ಮನಸ್ಸಿಗೆ ಸಂಬಂಧಪಟ್ಟ ನರಗಳು ಬಲಗೊಂಡು ಮಾನಸಿಕ ಆರೋಗ್ಯಕ್ಕೆ ಸಂಬಂಧಪಟ್ಟ ಸ್ಫೂರ್ತಿ (Intuition) ಜ್ಞಾನ(common sense), ಜ್ಞಾಪಕಶಕ್ತಿ (Remembrance), ಮನಶ್ಶಾಂತಿ (peace of mind), ಇತ್ಯಾದಿಗಳು ವೃದ್ಧಿಯಾಗುತ್ತವೆ.

ಗಾಯತ್ರೀ ಜಪವನ್ನು ಸಂಧ್ಯಾಕಾಲಗಳಲ್ಲಿ ಸಂಧ್ಯಾವಂದನೆ ಮಾಡುವಾಗ ಮಾಡಬೇಕು. ಉದಯಸೂರ್ಯನ ಮತ್ತು ಸೂರ್ಯಾಸ್ತದ ಕಿರಣಗಳನ್ನು ಐದು-ಆರು ನಿಮಿಷಗಳವರೆಗೆ ನೋಡುವುದರಿಂದ ನೇತ್ರಕ್ಕೆ ಸಂಬಂಧಪಟ್ಟ ಎಷ್ಟೋ ವಿಕಾರಗಳು ಗುಣವಾಗುತ್ತವೆ. ದೇಹದಲ್ಲಿ 'ಡಿ' ಅನ್ನಾಂಗವು ಚರ್ಮ, ಎಲುಬು ಮತ್ತು ನೇತ್ರಗಳ ಅಭಿವೃದ್ಧಿ ಮತ್ತು ಸುವ್ಯವಸ್ಥೆಗೆ ಬೇಕಾದ ಜೀವಸತ್ತ್ವವಾಗಿದೆ. ಸೂರ್ಯಕಿರಣಗಳು ಈ ಜೀವಸತ್ತ್ವವನ್ನು

ಒದಗಿಸುತ್ತನೆ. ಸೂರ್ಯನ ಬೆಳಕನ್ನು ಸರಿಯಾಗಿ ಉಪಯೋಗಿಸಿಕೊಂಡರೆ ಕ್ಷಯ, ಮೂರ್ಛೆರೋಗ, ಚರ್ಮವ್ಯಾಧಿ, ಗೂರಲು ಮತ್ತು ಮಧುಮೇಹ ಗಳಂಥ ರೋಗಗಳನ್ನು ಗುಣಪಡಿಸಲು ಸಹಕಾರಿಯಾಗುತ್ತದೆಂದು ವೈದ್ಯರು ಅಭಿಪ್ರಾಯಪಡುತ್ತಾರೆ.

ಗಾಯತ್ರೀ ಉಪಾಸನೆಯಿಂದ ವಿದ್ಯಾರ್ಥಿಗಳಲ್ಲಿ ಧೈರ್ಯ ಮತ್ತು ಆತ್ಮ ವಿಶ್ವಾಸ ಬೆಳೆಯುತ್ತದೆ. ತಲೆಶೂಲೆ, ದುಸ್ಸ್ವಪ್ನ, ಹೇಡಿತನ ನಾಶವಾಗು ತ್ತವೆ. ಭಯಗ್ರಸ್ತರಾದವರಿಗೆ ಧೈರ್ಯ ಉಂಟಾಗುತ್ತದೆ. ದೇವೀಭಾಗವತ ದಲ್ಲಿ ಗಾಯತ್ರೀ ಮಂತ್ರದ ಕೆಲವು ರಕ್ಷಣೆಯ ವಿವರಗಳಿವೆ. ಅವುಗಳನ್ನು ಈ ರೀತಿ ಸಂಕ್ಷೇಪಿಸಲಾಗಿದೆ. ಭೂತ ನೋಡಿ ಹೆದರಿದವನು ಅಥವಾ ಇತರರ ಮಂತ್ರದ ಪ್ರಯೋಗದ ಬಾಧೆಯಿಂದ ತೊಂದರೆಗೊಳಗಾದವನು ಶನಿವಾರ ದಂದು ಅಶ್ವತ್ಥಮರದ ಕೆಳಗೆ ಕುಳಿತು ನೂರು ಗಾಯತ್ರೀ ಜಪಮಾಡಿದರೆ ಆ ಭಯವು ನಾಶವಾಗುತ್ತದೆ. ಭೂತ ಹಿಡಿದವನನ್ನು ಯೋಗ್ಯ ಗಾಯತ್ರೀ ಉಪಾಸಕನು ದರ್ಭೆಯಿಂದ ಮುಟ್ಟಿ ಗಾಯತ್ರೀ ಜಪಿಸಿದರೆ ಅಥವಾ ಒಂದು ನೂರು ಗಾಯತ್ರೀ ಮಂತ್ರದಿಂದ ಮಂತ್ರಿಸಿದ ಭಸ್ಮವನ್ನು ಅವನ ತಲೆಗೆ ಕಟ್ಟಿದರೆ ಅಥವಾ ಗಾಯತ್ರೀಯಿಂದ ಅಭಿಮಂತ್ರಿಸಿದ ನೀರನ್ನು ಅವನಿಗೆ ಕುಡಿಸಿದರೆ ಅದು ಬಿಡುತ್ತದೆ. ಕಾರಾಗೃಹದಲ್ಲಿ ಬಂಧಿಸಲ್ಪಟ್ಟವನು ಮನಸ್ಸಿ ನಲ್ಲೇ ಗಾಯತ್ರೀ ಜಪ ಮಾಡುತ್ತಿದ್ದರೆ ಜಾಗ್ರತೆ ಬಿಡುಗಡೆ ಹೊಂದುತ್ತಾನೆ. ಚಿಕ್ಕಮಕ್ಕಳು ನಿಷ್ಕಾರಣವಾಗಿ ತುಂಬಾ ಭಯಪಟ್ಟಂತೆ ಕೂಗಿಕೊಂಡರೆ, ಗಾಯತ್ರೀ ಜಪಿಸಿದ ಭಸ್ಮ ಹಚ್ಚುವುದು ವಾಡಿಕೆ. ಅಶುದ್ಧನಾದವನನ್ನು ಮುಟ್ಟಿ ತಾನೂ ಅಶುದ್ಧನಾದವನು ಸ್ನಾನಮಾಡಿ ಗಾಯತ್ರೀ ಜಪಿಸುವುದ ರಿಂದ ಪರಿಶುದ್ಧತೆ ಹೊಂದುತ್ತಾನೆ (ಪರಾಶರ ಸ್ಮೃತಿ-೫-೧) ಪಾಪಿಷ್ಠ ಮೈಥುನ ಮಾಡಿದರೆ ಪರಿಶುದ್ಧತೆಗೆ ೧೦೦೦ ಗಾಯತ್ರೀ ಜಪ ಮತ್ತು ಮೂರು ಪ್ರಾಣಾಯಾಮವು ಪ್ರಾಯಶ್ಚಿತ್ತವಾಗಿದೆ. (ಪರಾಶರ ಸ್ಮೃತಿ ೯-೫೭) ಇಂತಹ ಇನ್ನೂ ಅನೇಕ ಇತರ ಪ್ರಾಯಶ್ಚಿತ್ತಗಳಲ್ಲಿಯೂ ಗಾಯತ್ರಿಯು ಉಪಯೋಗಿಸಲ್ಪಡುತ್ತದೆ. ಪೂರ್ವಾರ್ಜಿತಪಾಪಗಳಿಂದ ಬಂದ ರೋಗಗಳು ಪೂರ್ಣವಾಗಿ ಗುಣವಾಗದಿರುವಾಗ ಗಾಯತ್ರೀ ಜಪ, ದೇವತಾರಾಧನೆ, ಹೋಮ, ದಾನ, ವ್ರತ ಮುಂತಾದುವುಗಳಿಂದ ಗುಣಪಡಿಸಬಹುದೆಂದು ತಿಳಿದುಬರುತ್ತದೆ (ಶತಪಥಸಂಹಿತೆ-೧-೪). ಮುಂದೆ ಕೆಡಕುಗಳ ಚಿನ್ಹೆಗಳಿ ದ್ದಾಗ ೧೦೦ ಗಾಯತ್ರೀ ಜಪ ಮತ್ತು ಹೋಮ ಮಾಡುವುದು ಉತ್ತಮ

ವೆಂದು ಹೇಳುತ್ತಾರೆ (ಲಿಖಿತ ಸಂಹಿತೆ–೯೨).

ಒಟ್ಟಿನಲ್ಲಿ ಗಾಯತ್ರಿಯ ಉಪಾಸನೆಯು ಮಂತ್ರರೂಪವಾದ ಯೋಗವೇ ಆಗಿದೆ. ಅದನ್ನು ಸಾಧಿಸಲು ಯಮ, ನಿಯಮಗಳನ್ನು ಅಭ್ಯಾಸ ಮಾಡಬೇಕು; ಮಿತಾಹಾರ, ಬ್ರಹ್ಮಚರ್ಯ ಮುಂತಾದ ವ್ರತಗಳನ್ನು ಪಾಲಿಸಬೇಕು; ಯೋಗಾಂಗಗಳನ್ನು ಅಭ್ಯಾಸಮಾಡಬೇಕು; ಪ್ರಣವವಿದ್ಯೆಯನ್ನು ಸಾಧಿಸಬೇಕು. ಆಗ ಗಾಯತ್ರೀ ಯೋಗವೇ ಮನುಷ್ಯನಿಗೆ ಪರಮಾತ್ಮನ ಸಾಕ್ಷಾತ್ಕಾರ ಮಾಡಿಸುತ್ತದೆ. ಆ ಸವಿತೃದೇವನ, ಸರ್ವರಿಗೂ ಯೋಗ್ಯವಾದ, ಪಾಪಬೀಜದಹನಕಾರಿಯಾದ ಆ ದೈವಿಕವರ್ಚಸ್ಸನ್ನು ಧ್ಯಾನಿಸೋಣ, ಧರಿಸೋಣ, ನೆಲೆಗೊಳಿಸೋಣ. ಆ ಸವಿತೃದೇವನು ನಮ್ಮ ಪ್ರಜ್ಞಾ-ಕರ್ಮಗಳೆರಡೂ ಸತ್ಪಥದಲ್ಲಿ ಮುನ್ನಡೆಯುವಂತೆ ಪ್ರೇರೇಪಿಸಲಿ ಎಂಬ ಸಂಕಲ್ಪದಿಂದ ಆ ಸವಿತೃದೇವನ ಭೋಜನವನ್ನು ಸಂಪಾದಿಸಿಕೊಳ್ಳಬೇಕು ಎಂಬುದೇ ಗಾಯತ್ರೀ ಉಪಾಸಕರ ಧ್ಯೇಯ. ಈ ಕೃತಿಯನ್ನು ಓದಿ ಗಾಯತ್ರೀ ಉಪಾಸನೆಯಲ್ಲಿ ಸ್ವಲ್ಪವಾದರೂ ಶ್ರದ್ಧಯುಂಟಾದರೆ ಈ ಕೃತಿಯ ಉದ್ದೇಶ ಸಾಧಿಸಿದಂತಾಯಿತು. ನನ್ನ ಪ್ರಯತ್ನ ಸಾರ್ಥಕವಾಯಿತು. ಓದಿದ–ಸಂಗ್ರಹಿಸಿದ ನಾವಿಬ್ಬರೂ ಧನ್ಯರಾಗೋಣ.

ಜಗವ ಪೆತ್ತಾದೇವನತಿ ಪೂಜ್ಯತೇಜಗಳ ।
ಬಗೆವೆವ್–ಆತಂ ಪ್ರೇರಿಸುಗೆ ನಮ್ಮ ಬುದ್ಧಿಗಳ ॥

* * *

ಶ್ರೀಯನಾಯುವ ಬಲವ ಜಯವ ಬೇಡಿರ್ದೊಡಂ ।
ಗಾಯತ್ರಿಯನೆ ಪರಮಮಂತ್ರವೆಂದಾರ್ಯರ್ ॥
ಧೀಯಂ ಪ್ರಚೋದಿಸೆಂದನುದಿನರಿ ಬೇಡಿದರು
ಶ್ರೇಯಸ್ಸು ಧೀ ಮಹಿಮೆ–ಮಂಕುತಿಮ್ಮ

—ಡಿ.ವಿ.ಜಿ.

॥ ಧಿಯೋ ಯೋ ನಃ ಪ್ರಚೋದಯಾತ್ ॥

# ಅನುಬಂಧ

## ಅನೇಕ ದೇವತೆಗಳ ಗಾಯತ್ರೀ ಮಂತ್ರಗಳು

(೧) ಓಂ ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀಮಹಿ।
ತನ್ನೋ ರುದ್ರಃ ಪ್ರಚೋದಯಾತ್ ॥—ರುದ್ರ ಗಾಯತ್ರೀ.

(೨) ಓಂ ತತ್ಪುರುಷಾಯ ವಿದ್ಮಹೇ ವಕ್ರ ತುಂಡಾಯ ಧೀಮಹಿ।
ತನ್ನೋ ದಂತಿಃ ಪ್ರಚೋದಯಾತ್ ॥—ಗಣೇಶ ಗಾಯತ್ರೀ.

(೩) ಓಂ ತತ್ಪುರುಷಾಯ ವಿದ್ಮಹೇ ಚಕ್ರತುಂಡಾಯ ಧೀಮಹಿ।
ತನ್ನೋ ನಂದಿಃ ಪ್ರಚೋದಯಾತ್ ॥—ವೃಷಭ ಗಾಯತ್ರೀ.

(೪) ಓಂ ತತ್ಪುರುಷಾಯ ವಿದ್ಮಹೇ ಮಹಾಸೇನಾಯ ಧೀಮಹಿ।
ತನ್ನಃ ಷಣ್ಮುಖಃ ಪ್ರಚೋದಯಾತ್ ॥—ಷಣ್ಮುಖ ಗಾಯತ್ರೀ.

(೫) ಓಂ ತತ್ಪುರುಷಾಯ ವಿದ್ಮಹೇ ಸುವರ್ಣ ಪಕ್ಷಾಯ ಧೀಮಹಿ।
ತನ್ನೋ ಗರುಡಃ ಪ್ರಚೋದಯಾತ್ ॥—ಗರುಡ ಗಾಯತ್ರೀ.

(೬) ಓಂ ವೇದಾತ್ಮನಾಯ ವಿದ್ಮಹೇ ಹಿರಣ್ಯ ಗರ್ಭಾಯ ಧೀಮಹಿ।
ತನ್ನೋ ಬ್ರಹ್ಮ ಪ್ರಚೋದಯಾತ್ ॥—ಬ್ರಹ್ಮ ಗಾಯತ್ರೀ.

(೭) ಓಂ ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ।
ತನ್ನೋ ವಿಷ್ಣುಃ ಪ್ರಚೋದಯಾತ್—ವಿಷ್ಣು ಗಾಯತ್ರೀ.

(೮) ಓಂ ವಜ್ರನಖಾಯ ವಿದ್ಮಹೇ ತೀಕ್ಷ್ಣದಂಷ್ಟ್ರಾಯ ಧೀಮಹಿ।
ತನ್ನೋ ನಾರಸಿಂಹಃ ಪ್ರಚೋದಯಾತ್ ॥—ನರಸಿಂಹ ಗಾಯತ್ರೀ.

(೯) ಓಂ ಭಾಸ್ಕರಾಯ ವಿದ್ಮಹೇ ಮಹದ್ಯುತಿಕರಾಯ ಧೀಮಹಿ।
ತನ್ನೋ ಆದಿತ್ಯಃ ಪ್ರಚೋದಯಾತ್ ॥—ಸೂರ್ಯ ಗಾಯತ್ರೀ.

(೧೦) ಓಂ ದಿವಾಕರಾಯ ವಿದ್ಮಹೇ ಪ್ರಭಾಕರಾಯ ಧೀಮಹಿ।
ತನ್ನೋ ಆದಿತ್ಯಃ ಪ್ರಚೋದಯಾತ್ ॥—ಸೂರ್ಯ ಗಾಯತ್ರೀ.

(೧೧) ಓಂ ವೈಶ್ವಾನರಾಯ ವಿದ್ಮಹೇ ಲಾಲೀಲಾಯ ಧೀಮಹಿ।
ತನ್ನೋ ಅಗ್ನಿಃ ಪ್ರಚೋದಯಾತ್ ॥—ಅಗ್ನಿ ಗಾಯತ್ರೀ.

(೧೨) ಓಂ ಕಾತ್ಯಾಯನಾಯ ವಿದ್ಮಹೇ ಕನ್ಯಾಕುಮಾರಿ ಧೀಮಹಿ। ತನ್ನೋ ದುರ್ಗಿಃ ಪ್ರಚೋದಯಾತ್ ॥—ದುರ್ಗಾ ಗಾಯತ್ರೀ.

(ಮಹಾನಾರಾಯಣೋಪನಿಷತ್ತು. ಅ. ೧)

(೧೩) ಓಂ ಮಹಾದೇವ್ಯೈ ಚ ವಿದ್ಮಹೇ ವಿಷ್ಣುಪತ್ನೀ ಚ ಧೀಮಹಿ। ತನ್ನೋ ಲಕ್ಷ್ಮೀಃ ಪ್ರಚೋದಯಾತ್ ॥—ಲಕ್ಷ್ಮೀ ಗಾಯತ್ರೀ.

(೧೪) ಓಂ ಹಂಸ ಹಂಸಾಯ ವಿದ್ಮಹೇ ಪರಮ ಹಂಸಾಯ ಧೀಮಹಿ। ತನ್ನೋ ಹಂಸಃ ಪ್ರಚೋದಯಾತ್ ॥—ಹಂಸ ಗಾಯತ್ರೀ.

(೧೫) ಓಂ ಪಾಂಚಜನ್ಯಾಯ ವಿದ್ಮಹೇ ಮಹಾಧರಾಯ ಧೀಮಹಿ। ತನ್ನೋ ಶಂಖಃ ಪ್ರಚೋದಯಾತ್ ॥—ಶಂಖ ಗಾಯತ್ರೀ.

(೧೬) ಓಂ ಆಧ್ಯಾಯೈ ಚ ವಿದ್ಮಹೇ ಪರಮೇಶ್ವರಾಯೈ ಚ ಧೀಮಹಿ। ತನ್ನೋ ಕಾಳೀಃ ಪ್ರಚೋದಯಾತ್ ॥—ಕಾಳಿ ಗಾಯತ್ರೀ.

(೧೭) ಓಂ ಅತ್ರಿಪುತ್ರಾಯ ರಾತ್ರಿನಾಥಾಯ ಧೀಮಹಿ। ತನ್ನಶ್ಚಂದ್ರಃ ಪ್ರಚೋದಯಾತ್॥—ಚಂದ್ರ ಗಾಯತ್ರೀ.

(೧೮) ಓಂ ಕ್ಷೀರಪುತ್ರಾಯ ವಿದ್ಮಹೇ ಅಮೃತ ತತ್ತ್ವಾಯ ಧೀಮಹಿ। ತನ್ನೋ ಚಂದ್ರಃ ಪ್ರಚೋದಯಾತ್ ॥—ಚಂದ್ರ ಗಾಯತ್ರೀ.

(೧೯) ಓಂ ಸೂರ್ಯ ಪುತ್ರಾಯ ವಿದ್ಮಹೇ ಮಹಾಕಾಲಾಯ ಧೀಮಹಿ। ತನ್ನೋ ಯಮಃ ಪ್ರಚೋದಯಾತ್ ॥—ಯಮ ಗಾಯತ್ರೀ.

(೨೦) ಓಂ ಪೃಥ್ವೀ ದೇವ್ಯೈ ಚ ವಿದ್ಮಹೇ ಸಹಸ್ರ ಮೂರ್ತೀ ಚ ಧೀಮಹಿ। ತನ್ನೋ ಪೃಥ್ವೀಃ ಪ್ರಚೋದಯಾತ್॥—ಭೂಮಿ ಗಾಯತ್ರೀ.

(೨೧) ಓಂ ವಾಣೀಶ್ವರಾಯ ವಿದ್ಮಹೇ ಹಯಗ್ರೀವಾಯ ಧೀಮಹಿ। ತನ್ನೋ ಹಯಗ್ರೀವಃ ಪ್ರಚೋದಯಾತ್ ॥—ಹಯಗ್ರೀವಗಾಯತ್ರೀ.

(೨೨) ಓಂ ಧನುರ್ಧರಾಯೈ ವಿದ್ಮಹೇ। ಸರ್ವ ಸಿದ್ಧ್ಯೈ ಚ ಧೀಮಹಿ। ತನ್ನೋಧರಾ ಪ್ರಚೋದಯಾತ್ ॥—ಧರಾ ಗಾಯತ್ರೀ.

(೨೩) ಓಂ ಬ್ರಹ್ಮಪತ್ನ್ಯೈ ಚ ವಿದ್ಮಹೇ। ವೇದ ಮಾತ್ರೈ ಚ ಧೀಮಹಿ। ತನ್ನ ಸರಸ್ವತೀ ಪ್ರಚೋದಯಾತ್ ॥—ಸರಸ್ವತೀ ಗಾಯತ್ರೀ.

(೨೪) ಓಂ **ಭುಜಂಗ** ಮಾಯಾ ಚ ವಿದ್ಮಹೇ ಚಕ್ಷುಶ್ಶ್ರವಸೇ ಚ ಧೀಮಹಿ ।
ತನ್ನೋ **ನಾಗೇಂದ್ರಃ** ಪ್ರಚೋದಯಾತ್ ॥—ಸರ್ಪ ಗಾಯತ್ರೀ.

(೨೫) ಓಂ ದಾಶರಥಾಯ ವಿದ್ಮಹೇ ಸೀತಾವಲ್ಲಭಾಯ ಧೀಮಹಿ ।
ತನ್ನೋ **ರಾಮಃ** ಪ್ರಚೋದಯಾತ್ ॥—ರಾಮ ಗಾಯತ್ರೀ.

(೨೬) ಓಂ ಪರಮೇಶ್ವರಾಯ ವಿದ್ಮಹೇ ಪರತತ್ತ್ವಾಯ ಧೀಮಹಿ ।
ತನ್ನೋ **ಬ್ರಹ್ಮ** ಪ್ರಚೋದಯಾತ್ ॥—ಬ್ರಹ್ಮ ಗಾಯತ್ರೀ.

——·—

## ನವಗ್ರಹ ಗಾಯತ್ರೀ

ಓಂ ಪ್ರಭಾಕರಾಯ ವಿದ್ಮಹೇ ದಿವಾಕರಾಯ ಧೀಮಹಿ । ತನ್ನಃ **ಆದಿತ್ಯಃ** ಪ್ರಚೋದಯಾತ್ ॥—ಸೂರ್ಯ ಗಾಯತ್ರೀ.

ಓಂ ಅತ್ರಿಪುತ್ರಾಯ ವಿದ್ಮಹೇ ಅಮೃತೋದ್ಭವಾಯ ಧೀಮಹಿ ।
ತನ್ನಃ **ಸೋಮಃ** ಪ್ರಚೋದಯಾತ್ ॥—ಚಂದ್ರ ಗಾಯತ್ರೀ.

ಓಂ ಭೂಮಿ ಪುತ್ರಾಯ ವಿದ್ಮಹೇ ಅಂಗಾರಕಾಯ ಧೀಮಹಿ ।
ತನ್ನಃ **ಕುಜಃ** ಪ್ರಚೋದಯಾತ್ ॥—ಮಂಗಳ ಗಾಯತ್ರೀ.

ಓಂ ತಾರಾ ಪುತ್ರಾಯ ವಿದ್ಮಹೇ ಸೋಮ ಪುತ್ರಾಯ ಧೀಮಹಿ ।
ತನ್ನೋ **ಬುಧಃ** ಪ್ರಚೋದಯಾತ್ ॥—ಬುಧ ಗಾಯತ್ರೀ.

ಓಂ ದೇವಾಚಾರ್ಯಾಯ ವಿದ್ಮಹೇ ವಾಚಸ್ಪತ್ಯಾಯ ಧೀಮಹಿ ।
ತನ್ನೋ **ಗುರುಃ** ಪ್ರಚೋದಯಾತ್ ॥—ಗುರು ಗಾಯತ್ರೀ.

ಓಂ ದೈತ್ಯಾಚಾರ್ಯಾಯ ವಿದ್ಮಹೇ ವಿದ್ಯಾರೂಪಾಯ ಧೀಮಹಿ ।
ತನ್ನಃ **ಶುಕ್ರಃ** ಪ್ರಚೋದಯಾತ್ ॥—ಶುಕ್ರ ಗಾಯತ್ರೀ.

ಓಂ ಸೂರ್ಯಪುತ್ರಾಯ ವಿದ್ಮಹೇ ಶನೈಶ್ಚರಾಯ ಧೀಮಹಿ ।
ತನ್ನೋ **ಮಂದಃ** ಪ್ರಚೋದಯಾತ್ ॥—ಶನಿ ಗಾಯತ್ರೀ.

ಓಂ ಸೈಂಹಿಕೇಯಾಯ ವಿದ್ಮಹೇ ತಮೋ ಮಯಾಯ ಧೀಮಹಿ।
ತನ್ನೋ ರಾಹುಃ ಪ್ರಚೋದಯಾತ್ ॥—ರಾಹು ಗಾಯತ್ರೀ.

ಓಂ ಬ್ರಹ್ಮ ಪುತ್ರಾಯ ವಿದ್ಮಹೇ ವಿಕೃತಾಸ್ಯಾಯ ಧೀಮಹಿ।
ತನ್ನಃ ಕೇತುಃ ಪ್ರಚೋದಯಾತ್ ॥—ಕೇತು ಗಾಯತ್ರೀ.

---

## ಶ್ರೀಸವಿತೃ ದೇವತಾ ಸ್ತೋತ್ರ

ಯನ್ಮಂಡಲಂ ದೀಪ್ತಿಕರಂ ವಿಶಾಲಂ, ರತ್ನಪ್ರಭವನ್ ತೀವ್ರಮನಾದಿ ರೂಪಮ್ । ದಾರಿದ್ರ್ಯದುಃಖ ಕ್ಷಯ ಕಾರಣಂ ಚ, ಪುನಾತು ಮಾಂ ತತ್ಸ-ವಿತುರ್ವರೇಣ್ಯಮ್ ॥೧॥

ಯನ್ಮಂಡಲಂ ದೇವಗಣೈಃ ಸುಪೂಜಿತಮ್, ವಿಪ್ರೈಃ ಸ್ತುತಂ ಮಾನವ ಮುಕ್ತಿಕೋವಿದಮ್ । ತಂ ದೇವ ದೇವಂ ಪ್ರಣಮಾಮಿ ಸೂರ್ಯಂ(ಭರ್ಗ), ಪುನಾತು ಮಾಂ ತತ್ಸವಿತುರ್ವರೇಣ್ಯಮ್ ॥೨॥

ಯನ್ಮಂಡಲಂ ಜ್ಞಾನಘನತ್ವಗಮ್ಯಂ, ತ್ರೈಲೋಕ್ಯಪೂಜ್ಯಂ ತ್ರಿಗುಣಾತ್ಮ ರೂಪಮ್ । ಸಮಸ್ತ ತೇಜೋಮಯ ದಿವ್ಯರೂಪಂ, ಪುನಾತು ಮಾಂ ತತ್ಸವಿತುರ್ವರೇಣ್ಯಮ್ ॥೩॥

ಯನ್ಮಂಡಲಂ ಗೂಢಮತಿ ಪ್ರಬೋಧಮ್, ಧರ್ಮಸ್ಯವೃದ್ಧಿಂ ಕುರುತೇ ಜನಾನಾಮ್ । ತತ್ (ಯತ್) ಸರ್ವಪಾಪ ಕ್ಷಯ ಕಾರಣಂ ಚ, ಪುನಾತು ಮಾಂ ತತ್ಸವಿತುರ್ವರೇಣ್ಯಮ್ ॥೪॥

ಯನ್ಮಂಡಲಂ ವ್ಯಾಧಿವಿನಾಶದಕ್ಷಮ್, ಯದೃಗ್ ಯಜುಸ್ಸಾಮಸುಸು ಪ್ರಗೀತಮ್ । ಪ್ರಕಾಶಿತಂ ಯೇನ ಚ ಭೂರ್ಭುವಸ್ಸ್ವಃ, ಪುನಾತು ಮಾಂ ತತ್ಸವಿತುರ್ವರೇಣ್ಯಮ್ ॥೫॥

ಯನ್ಮಂಡಲಂ ವೇದವಿದೋವದಂತಿ, ಗಾಯಂತಿ ಯಚ್ಚಾರಣ ಸಿದ್ಧ ಸಂಘಾಃ । ಯದ್ಯೋಗಿನೋ ಯೋಗ ಜುಷಾಂಚಸಂಘಾಃ, ಪುನಾತು ಮಾಂ ತತ್ಸವಿತುರ್ವರೇಣ್ಯಮ್ ॥೬॥

ಯನ್ಮಂಡಲಂ ಸರ್ವಜನೇಷು ಪೂಜಿತಮ್, ಜ್ಯೋತಿಶ್ಚ ಕುರ್ಯಾದಿಹ ಮರ್ತ್ಯಲೋಕೇ। ಯತ್ಕಾಲಕಾಲಾದಿ ಮನಾದಿರೂಪಮ್ ಪುನಾತು ಮಾಂ ತತ್ಸವಿತುರ್ವರೇಣ್ಯಮ್ ॥೭॥

ಯನ್ಮಂಡಲಂ ವಿಷ್ಣು ಚತುರ್ಮುಖಾಸ್ಯಮ್, ಯದಕ್ಷರಂ ಪಾಪ ಹರಂ ಜನಾನಾಮ್। ಯತ್ಕಾಲಕಲ್ಪಕ್ಷಯ ಕಾರಣಂ ಚ ಪುನಾತು ಮಾಂ ತತ್ಸವಿತುರ್ವರೇಣ್ಯಮ್ ॥೮॥

ಯನ್ಮಂಡಲಂ ವಿಶ್ವಸೃಜಾಂ ಪ್ರಸಿದ್ಧಮ್, ಉತ್ಪತ್ತಿ ರಕ್ಷಾಪ್ರಲಯ ಪ್ರಗಲ್ಭಮ್। ಯಸ್ಮಿನ್ ಜಗತ್ ಸಂಹರತೇಽಖಿಲಂಚ, ಪುನಾತು ಮಾಂ ತತ್ಸವಿತುರ್ವರೇಣ್ಯಮ್ ॥೯॥

ಯನ್ಮಂಡಲಂ ಬ್ರಹ್ಮವಿದೋ ವದಂತಿ, ಗಾಯಂತಿ ಯಚ್ಚಾರಣ ಸಿದ್ಧ ಸಂಘಾಃ। ಯನ್ಮಂಡಲಂ ವೇದವಿದಃ ಸ್ಮರಂತಿ, ಪುನಾತು ಮಾಂ ತತ್ಸ ವಿತುರ್ವರೇಣ್ಯಮ್ ॥೧೦॥

ಯನ್ಮಂಡಲಂ ಸರ್ವಗತಸ್ಯ ವಿಷ್ಣೋಃ, ಆತ್ಮಾಪರಂಧಾಮ ವಿಶುದ್ಧ ತತ್ತ್ವಂ। ಸೂಕ್ಷ್ಮಾಂತರೈರ್ಯೋಗ ಪಥಾನುಗಮ್ಯಮ್। ಪುನಾತು ಮಾಂ ತತ್ಸವಿತುರ್ವರೇಣ್ಯಮ್ ॥೧೧॥

ಯನ್ಮಂಡಲಂ ವೇದವೇದೋಪಗೀತಮ್ ಯದ್ಯೋಗಿನಾಂ ಯೋಗಪಥಾನ ಗಮ್ಯಮ್। ತತ್ಸರ್ವವೇದಂ ಪ್ರಣಮಾಮಿ ಸೂರ್ಯಮ್ (ದಿವ್ಯಂ), ಪುನಾತು ಮಾಂ ತತ್ಸವಿತುರ್ವರೇಣ್ಯಮ್ ॥೧೨॥

---

## ಅಥ ವಶಿಷ್ಠ ಕಲ್ಪ ಗಾಯತ್ರ್ಯರ್ಥೋ ನಿರ್ದಿಶ್ಯತೇ

ತತ್ರ ಗಾಯತ್ರೀ ಪ್ರಣವಾದಿಕ ಸಪ್ತವ್ಯಾಹೃತ್ಯುಪೇತಾ ಶಿರಸ್ಸಮೇತಾ ಸರ್ವದೇವತಾ ಸ್ವರೂಪೇತಿ–ಏವಂ ವಿಶಿಷ್ಟಗಾಯತ್ರೀ ಪ್ರಣವ ವ್ಯಾಹೃತಿ ತ್ರಯಯುಕ್ತಾ ಸರ್ವದೇವತಾತ್ಮಿಕ ಜಪಾದಿಕಸ್ಯ ತತ್ಸವಿತುರಿತ್ಯಾದಿ ಪದೈರ್ನಿರ್ದಿಶ್ಯತೇ ॥

ಓಂ ತದಿತಿನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ತಚ್ಛಬ್ದೇನ ಪರಬ್ರಹ್ಮಾಭ್ಯತೇ। ಸವಿತುರಿತಿ ಸ್ಥಿತಿಲಯೋಽಪಲಕ್ಷಣಂ ಸರ್ವಪ್ರಸಂಚಾಧಿಕತ್ವಂ ಲಕ್ಷಣಂ, ವರೇಣ್ಯಂ ಇತಿ ನಿರತಿಶಯಾನಂದ ಸ್ವರೂಪಂ, ಭರ್ಗ ಇತಿ ಆದ್ಯಾದಿ ದೋಷವರ್ಜನಂ ದೇವಸ್ಯೇತಿ ಸರ್ವಾಧಿಷ್ಠಾನ ಭೂತಂ, ಧೀಮಹೀತಿ ಜಡ ಪ್ರಪಂಚ ನಿರಸನಾತ್ ಬ್ರಹ್ಮಣಿ ಏಕತ್ವಂ ಭವತಿ, ಧಿಯೋ ಯೋ ನಃ ಪ್ರಚೋದಯಾದಿತಿ ನಿರ್ದಿಷ್ಟಸ್ಯಾತ್ಮನಃ ಪರಬ್ರಹ್ಮ ಭವತಿ, ಸರ್ವಾತ್ಮಿಕೇಯಂ ಗಾಯತ್ರೀ ಬ್ರಹ್ಮಬೋಧಕಸ್ಯಂ ಪದ್ಯತೇ ॥

---

## ಗಾಯತ್ರೀ ಸ್ವರೂಪವರ್ಣನೆ

**ಗಾಯತ್ರೀ**

ಬಾಲಾರ್ಕಾರುಣ ಶೋಣ ಪಾಟಲ ಮುಖ್ಯೈಃ ಯುಕ್ತಾಂ ಕುಮಾರೀಂ ಗಿರಂ।
'ಪ್ರಾತಃ' ಲೋಹಿತ ವಿಗ್ರಹಾಂ ಭುಜಗತಾಂ ಸೌಖ್ಯಾತ್ಮಿಕಾಂ ರಾಜಸೀಂ।
ಬಿಭ್ರಾಣಾಮಭಯಂ ಕಮಂಡಲು ಮಥಾಮ್ಭೋಜಾಕ್ಷ ಮಾಲಾಂಸ್ರುವಂ।
'ಗಾಯತ್ರೀಂ' ಹೃದಿ ಹಂಸಗಾಂ ಭವಕರೀಂ 'ಶ್ರೀ ಬ್ರಹ್ಮರೂಪಾಂ' ಭಜೇ॥

**ಸಾವಿತ್ರೀ**

ಮುಕ್ತಾಪಾಂಡುರ ಹೇಮಧೂಸರಸಿತಾ ಸ್ಯಾಂತ್ರ್ಯಕ್ಷಣಾಂವ್ಯೋಮ ಗಾಂ।
'ಮಧ್ಯಾಹ್ನೇ' ಸಿತ ವಿಗ್ರಹಾಂ ಸುಯುವತೀಂ ಸತ್ಯಾತ್ಮಿಕಾಂ ತಾಮಸೀಂ।
ಖಟ್ವಾಂಗಾಭಯ ಶೂಲಕಾಸಿ ದಧತೀಂ ರುದ್ರಾಕ್ಷಮಾಲಾ ಮುಮಾಂ।
'ಸಾವಿತ್ರೀಂ' ವೃಷವಾಹನಾಂ ಕ್ಷಯಕರೀಂ 'ಶ್ರೀ ರುದ್ರರೂಪಾಂ' ಭಜೆ॥

**ಸರಸ್ವತೀ**

ನೀಲೇಂದೀವರ ಮೇಚ ಕೈಕವದನಾಂ ವೃದ್ಧ ಸ್ವರೂಪಾಂ 'ರಮಾಂ'
'ಸಾಯಂ' ಶ್ಯಾಮಲ ವಿಗ್ರಹಾಂ ದಿವಿಗತಾಂ ಜ್ಞಾನಾತ್ಮಿಕಾಂ ಸಾತ್ವಿಕಾಂ।
ಶಂಖಂ ಚಕ್ರಮಥಾಭಯಂ ಚ ತುಲಸೀ ಮಾಲಾಂಕರೈಃ ಬಿಭ್ರತೀಂ।
ತಾರ್ಕ್ಷ್ಯಸ್ಥಾಂ ಚ 'ಸರಸ್ವತೀಂ' ಸ್ಥಿರಕರೀಂ 'ಶ್ರೀವಿಷ್ಣುರೂಪಾಂ' ಭಜೆ॥

**ಸಂಧ್ಯಾ**

ಶ್ವೇತ ಶ್ಯಾಮಲ ಲೋಹಿತ್ಯೈಃ ತ್ರಿವದನೈಃ ಯುಕ್ತಾಂ ತ್ರಿಮೂರ್ತ್ಯಾತ್ಮನಾಂ।
ಗಾಯತ್ರ್ಯಕ್ಷರಮಾಲಿಕಾ ವಿಲಸದ-ಗ್ನ್ಯರ್ಕೇಂದು ತೇಜೋಮಯಾಂ।
ಸತ್ಯಜ್ಞಾನಸುಖಾತ್ಮಿಕಾಂ ಸಮಗುಣಾಂ'ಸಂಧ್ಯಾಂ''ತ್ರಯೀ' ಮಾತರಂ।
'ಓಂ'ಕಾರಾತ್ಮಕ-ತತ್ತ್ವಪೀಠ ನಿಲಯಾಂ 'ಶ್ರೀಲಿಂಗರೂಪಾಂ' ಭಜೇ॥

**ಸಮಷ್ಟಿಗಾಯತ್ರೀ**

ಮುಕ್ತಾ ವಿದ್ರುಮ ಹೇಮನೀಲಧವಳಚ್ಛಾಯೈರ್ಮುಖೈ ಸ್ತ್ರೀಕ್ಷಣೈಃ।
ಯುಕ್ತಾಮಿಂದು (ಕಲಾ) ನಿಬದ್ಧರತ್ನ ಮುಕುಟಾಂ ತತ್ತ್ವಾರ್ಥ
ವರ್ಣಾತ್ಮಿಕಾಂ।
ಗಾಯತ್ರೀಂ ವರದಾಭಯಾಂಕುಶಕಶಾಃ ಶುಭ್ರಂ (ಶೂಲಂ) ಕಪಾಲಂ
ಗಧಾಂ। ಶಂಖಂ ಚಕ್ರಮಥಾರವಿಂದಯುಗಳಂ ಹಸ್ತೈರ್ವಹಂತೀಂ ಭಜೇ॥

ಧ್ಯಾನಕಾಲದಲ್ಲಿ ಕೆಲವರು ಈ ಶ್ಲೋಕವನ್ನು ಪಠಿಸುವ ಪದ್ಧತಿ ಇದೆ.

ಮಂದಾರಾಹ್ವಯ ರೋಚನಾಂ ಜನ ಜಪಾಖ್ಯಾಭೈರ್ಮುಖೈರಿಂಧುಮ॥
ದ್ರಷ್ಟ್ರೋದ್ಯನ್ಮಕುಟಾಂಗ ಸಂತತ ಚತುರ್ವಿಂಶಾರ್ಣ ಚಿತ್ರಾಽ ತನುಃ॥
ಅಚ್ಛೇಚಾರಿ ಗಧಾಹ್ವಯೌ ಗುಣಕಪಾಲಾ ಖ್ಯೌಚ ಪಾಶಾಂಕುಶೇ।
ಷ್ಪಾ(ಽ) ಭೀತೀರ್ದಧತೀ ಭವೇದ್ಭವಭೀಷ್ಟೋದ್ಭಾಸಿನೀ ತಾರಿಣೀ॥

---

## ಶ್ರೀಗಾಯತ್ರೀ ಸ್ತೋತ್ರಮ್

ನಮಸ್ತೇ ದೇವಿ ಗಾಯತ್ರೀ ಸಾವಿತ್ರೀ ತ್ರಿಪದೇಽಕ್ಷರೇ।
ಅಜರೇ ಹ್ಯಮರೇ ಮಾತಾ ತ್ರಾಹಿಮಾಂ ಭವಸಾಗರಾತ್ ॥೧॥

ನಮಸ್ತೇ ಸೂರ್ಯ ಸಂಕಾಶೇ ಸೂರ್ಯ ಸಾವಿತ್ರಿ ಕೋಮಲೆ।
ಬ್ರಹ್ಮವಿದ್ಯೇ ಮಹಾವಿದ್ಯೇ ವೇದಮಾತರ್ನಮೋಽಸ್ತುತೇ॥ ॥೨॥

ಅನಂತಕೋಟಿ ಬ್ರಹ್ಮಾಂಡ ವ್ಯಾಪಿನಿ ಬ್ರಹ್ಮಚಾರಿಣೀ।
ನಿತ್ಯಾನಂದೇ ಮಹಾಮಾಯೇ ಪರೇಶಾನಿ ನಮೋಽಸ್ತುತೇ ॥೩॥

ತ್ವಂ ಬ್ರಹ್ಮತ್ವಂ ಹರಿಃ ಸಾಕ್ಷಾದ್ರುದ್ರೇಂದ್ರ ದೇವತಾ ।
ಮಿತ್ರಸ್ತ್ವಂ ವರುಣಸ್ತ್ವಂ ಚ ತ್ವಮಗ್ನಿ ರಶ್ವಿ ಸೌಭಗಃ ॥ ೪ ॥

ಪೂಷಾರ್ಯಮಾ ಮರುತ್ವಾಂಶ್ಚ ಋಷಯೋಽಪಿ ಮುನೀಶ್ವರಾಃ ।
ಪಿತರೋ ನಾಗಯಕ್ಷಾಶ್ಚ ಗಂಧರ್ವಾಪ್ಸರಸಾಂಗಣಾಃ । ॥ ೫ ॥

ರಕ್ಷೋಭೂತಪಿಶಾಚಾಶ್ಚ ತ್ವಮೇವ ಪರಮೇಶ್ವರೀ ।
ಋಗ್ಯಜುಸ್ಸಾಮ ವೇದಾಶ್ಚ ಅಥರ್ವಾಂಗಿರಸಾನಿಚ ॥ ೬ ॥

ತ್ವಮೇವ ಪಂಚಭೂತಾನಿ ತತ್ತ್ವಾನಿ ಜಗದೀಶ್ವರೀ ।
ಬ್ರಾಹ್ಮೀ ಸರಸ್ವತೀ ಸಂಧ್ಯಾ ತುರೀಯಾತ್ವಂ ಮಹೇಶ್ವರೀ । ॥ ೭ ॥

ತ್ವಮೇವ ಸರ್ವ ಶಾಸ್ತ್ರಾಣಿ ತ್ವಮೇವ ಸರ್ವಸಂಹಿತಾಃ ।
ಪುರಾಣಾನಿಚ ತಂತ್ರಾಣಿ ಮಹಾಗಮಮತಾನಿಚ ॥ ೮ ॥

ತತ್ಸದ್ಬ್ರಹ್ಮ ಸ್ವರೂಪತ್ವಾಂ ಕಿಂಚಿತ್ಸದ ಸದಾತ್ಮಿಕಾ ।
ಪರಾತ್ಪರೇ ಶ್ರೀ ಗಾಯತ್ರೀ ನಮಸ್ತೇ ಮಾತರಂಬಿಕೇ ॥ ೯ ॥

ಚಂದ್ರೇ ಕಲಾತ್ಮಿಕೇ ನಿತ್ಯೇ ಕಾಲರಾತ್ರಿ ಸ್ವಧೇಸ್ವರೇ ।
ಸ್ವಾಹಾಕಾರೇಗ್ನಿವಕ್ತ್ರೇ ತ್ವಾಮ್ ನಮಾಮಿ ಜಗದೀಶ್ವರೀ ॥ ೧೦ ॥

ನಮೋ ನಮಸ್ತೇ ಗಾಯತ್ರೀ ಸಾವಿತ್ರೀ ತ್ವಾ ನಮಾಮ್ಯಹಂ ।
ಸರಸ್ವತೀ ನಮಸ್ತುಭ್ಯಂ ತುರೀಯೇ ಬ್ರಹ್ಮರೂಪಿಣೀ ॥ ೧೧ ॥

ಅಪರಾಧ ಸಹಸ್ರಾಣಿತ್ವ ಸತ್ಕರ್ಮವಿತಾನಿಚ ।
ಮತ್ತೋಜಾತಾನಿ ದೇವೇಶಿ ತ್ವಂ ಕ್ಷಮಸ್ವ ದಿನೇದಿನೇ ॥ ೧೨ ॥

॥ ಇಂತಿ ವಸಿಷ್ಠ ಸಂಹಿತಾಯಾಂ ಗಾಯತ್ರೀ ಸ್ತೋತ್ರಂ ಸಂಪೂರ್ಣಂ ॥

## ಶ್ರೀಗಾಯತ್ರೀ ಅಷ್ಟೋತ್ತರ ಶತನಾಮ ಸ್ತೋತ್ರಮ್

ಶ್ರೀಗಾಯತ್ರೀ ಜಗನ್ಮಾತಾ ಪರಬ್ರಹ್ಮ ಸ್ವರೂಪಿಣೀ ।
ಪರಮಾರ್ಥಪ್ರದಾ ಜಪ್ಯಾ ಬ್ರಹ್ಮತೇಜೋ ವಿವರ್ಧಿನೀ ॥ ೧ ॥

ಬ್ರಹ್ಮಾಸ್ತ್ರರೂಪಿಣೀ ಭವ್ಯಾ ತ್ರಿಕಾಲಧ್ಯೇಯ ರೂಪಿಣೀ ।
ತ್ರಿಮೂರ್ತಿರೂಪಾ (೧೦) ಸರ್ವಜ್ಞಾ ವೇದಮಾತಾಮನೋನ್ಮನೀ ॥ ೨ ॥

ಬಾಲಿಕಾ ತರುಣೀ ವೃದ್ಧಾ ಸೂರ್ಯಮಂಡಲವಾಸಿನೀ ।
ಮಂದೇಹದಾನವಧ್ವಂಸಕಾರಿಣೀಸರ್ವಕಾರಣಾ ॥ ೩ ॥

ಹಂಸಾರೂಢಾ (೨೦) ವೃಷಾರೂಢಾ ಗರುಡಾರೋಹಿಣೀ ಶುಭಾ ।
ಷಟ್‌ಕುಕ್ಷಿ ಸ್ತ್ರಿಪದಾ ಶುದ್ಧಾ ಪಂಚಶೀರ್ಷಾ ತ್ರಿಲೋಚನಾ ॥ ೪ ॥

ತ್ರಿವೇದ ರೂಪಾ ತ್ರಿವಿಧಾ (೩೦) ತ್ರಿವರ್ಗ ಫಲದಾಯಿನೀ ।
ದಶಹಸ್ತಾ ಚಂದ್ರವರ್ಣಾ ವಿಶ್ವಾಮಿತ್ರ ವರಪ್ರದಾ ॥ ೫ ॥

ದಶಾಯುಧಧರಾ ನಿತ್ಯಾ ಸಂತುಷ್ಟಾ ಬ್ರಹ್ಮಪೂಜಿತಾ ।
ಆದಿಶಕ್ತಿರ್ಮಹಾವಿದ್ಯಾ (೪೦) ಸುಷುಮ್ನಾಖ್ಯಾ ಸರಸ್ವತೀ ॥ ೬ ॥

ಚತುರ್ವಿಂಶತ್ಯಕ್ಷರಾಢ್ಯಾ ಸಾವಿತ್ರೀ ಸತ್ಯವತ್ಸಲಾ ।
ಸಂಧ್ಯಾ ರಾತ್ರಿ ! ಪ್ರಭಾತಾಖ್ಯಾ ಸಾಂಖ್ಯಾಯನ ಕುಲೋದ್ಭವಾ ॥ ೭ ॥

ಸರ್ವೇಶ್ವರೀ (೫೦) ಸರ್ವವಿದ್ಯಾ ಸರ್ವಮಂತ್ರಾದಿರವ್ಯಯಾ ।
ಶುದ್ಧವಸ್ತ್ರಾ ಶುದ್ಧವಿದ್ಯಾ ಶುಕ್ಲಮಾಲ್ಯಾನು ಲೇಪನಾ ॥ ೮ ॥

ಸುರ ಸಿಂಧುಸಮಾ ಸೌಮ್ಯ ಬ್ರಹ್ಮಲೋಕ ನಿವಾಸಿನೀ ।
ಪ್ರಣವ ಪ್ರತಿಪಾದ್ಯಾರ್ಥಾ (೬೦) ಪ್ರಣತೋದ್ಧರಣಕ್ಷಮಾ ॥ ೯ ॥

ಜಲಾಂಜಲಿ ಸುಸಂತುಷ್ಟಾ ಜಲಗರ್ಭಾ ಜಲಪ್ರಿಯಾ
ಸ್ವಾಹಾಸ್ವಧಾ ಸುಧಾ ಸಂಸ್ಥಾ ಶ್ರೌವಟ್ ವೌಷಟ್ ವಷಟ್‌ಕ್ರಿಯಾ ॥೧೦॥

ಸುರಭಿಷ್ಷೋಡಶ ಕಲಾ (೭೦) ಮುನಿ ಬೃಂದನಿಷೇವಿತಾ ।
ಯಜ್ಞಪ್ರಿಯಾ ಯಜ್ಞ ಮೂರ್ತಿಸ್ಸ್ರುಕ್ಸ್ರುವಾಜ್ಯ ಸ್ವರೂಪಿಣೀ ॥೧೧॥

ಅಕ್ಷಮಾಲಾಧರಾ ಚಾಕ್ಷಮಾಲಾ ಸಂಸ್ಥಾಽಕ್ಷರಾ ಕೃತಿಃ ।
ಮಧುಚ್ಛಂದ ಋಷಿಪ್ರೀತಾ ಸ್ವಚ್ಛಂದಾ ಛಂದಸಾಂನಿಧಿಃ (೮೦) ॥ ೧೨ ॥

ಅಂಗುಳೀ ಪರ್ವಸಂಸ್ಥಾನ ಚತುರ್ವಿಂಶತಿ ಮುದ್ರಿಕಾ ।
ಬ್ರಹ್ಮಮೂರ್ತೀರುದ್ರ ಶಿಖಾ ಸಹಸ್ರ ಪರಮಾಂಬಿಕಾ ॥ ೧೩ ॥

ವಿಷ್ಣು ಹೃದ್ಗಾಗ್ನಿಮುಖೀ ಶತಮಧ್ಯಾ ದಶಾವರಾ । (೯೦)
ಸಹಸ್ರದಲಪದ್ಮಸ್ಥಾ ಹಂಸರೂಪಾ ನಿರಂಜನಾ ॥ ೧೪ ॥

ಚರಾಚರಸ್ಥಾ ಚತುರಾ ಸೂರ್ಯಕೋಟಿ ಸಮಪ್ರಭಾ ।
ಪಂಚವರ್ಣಮುಖೀ ಧಾತ್ರೀ ಚಂದ್ರಕೋಟಿಶುಚಿಸ್ಮಿತಾ ॥೧೫ ॥

